

ಮುಂಡೂರು ಸಿಂಗಪ್ಪಶಾಸ್ತ್ರಿ ವಿರಚಿತ

## ಶ್ರೀಸುತ್ತೂರು

# ವೀರಸಿಂಹಾಸನ ಗುರುಪರಂಪರೆ



ಜಗದ್ಗುರು ಶ್ರೀಶಿವರಾತ್ರೀಶ್ವರ ಗ್ರಂಥಮಾಲೆ
ಮೈಸೂರು

ಕುಂತೂರು ಸಂಗಪ್ಪಶಾಸ್ತ್ರಿ ವಿರಚಿತ

ಶ್ರೀ ಸುತ್ತೂರು

# ವೀರಸಿಂಹಾಸನ ಗುರುಪರಂಪರೆ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ಮೈಸೂರು

SRI SUTTURU VEERASIMHASANA GURU-PARAMPARE – The Heritage of Jagadguru Sri Suttur Mutt – by Kunturu Sangappa Sastri, Published by Jagadguru Sri Shivarathreeswara Granthamale, J.S.S. Mahavidyapeetha, Ramanuja Road, Mysore - 570 004.
1991 Pages : xvi + 260 Price : Rs.35/-

ಪ್ರಥಮ ಮುದ್ರಣ : 1933

ದ್ವಿತೀಯ ಮುದ್ರಣ : 1991

(ಪರಿಷ್ಕೃತ ಹಾಗೂ ವಿಸ್ತೃತ)





ಬೆಲೆ : ರೂ ೩೫-೦೦



ಮುದ್ರಕರು :

ಶ್ರೀ ಪಿ. ಬಸವಣ್ಣ
ಕನಕಧಾರಾ ಪ್ರೆಸ್
ಸರಸ್ವತಿಪುರಂ, ಮೈಸೂರು

# ಅ ರ್ಪ ಣೆ

ಸುಕ್ಷೇತ್ರ ಶ್ರೀ ಸುತ್ತೂರು

ವೀರಸಿಂಹಾಸನ ಜಗದ್ಗುರುಪರಂಪರೆಗೆ

ಭಕ್ತಿಪೂರ್ವಕ

# ಪ್ರಕಾಶಕರ ನುಡಿ

ಪ್ರಾತಃಸ್ಮರಣೀಯರಾದ ಪರಮಪೂಜ್ಯ ಲಿಂಗೈಕ್ಯ ಜಗದ್ಗುರು ಡಾ॥ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಈ ನಾಡಿನಲ್ಲಿ ಅನೇಕ ಪ್ರಸಾದ ನಿಲಯಗಳನ್ನೂ ವಿದ್ಯಾಸಂಸ್ಥೆಗಳನ್ನೂ ಸಂಸ್ಥಾಪಿಸಿ ಶಿಕ್ಷಣ ಕ್ಷೇತ್ರದಲ್ಲಿ ಅದ್ವಿತೀಯವಾದ ಬೃಹತ್ ಸಾಧನೆಯ ಪವಾಡವನ್ನು ಸಾಧಿಸಿ ತೋರಿಸಿದರು. ಸಮಾಜದ ಸರ್ವಾಂಗೀಣ ಹಿತಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರು. ಜ್ಞಾನದಾಸೋಹ, ಅನ್ನದಾಸೋಹದ ಜೊತೆಗೆ ವ್ಯಕ್ತಿಯ ಅಂತರಂಗದ ವಿಕಾಸಕ್ಕೆ ಕಾರಣವಾದ ಸಾಹಿತ್ಯ, ಧರ್ಮಗಳ ಪ್ರಸಾರಕಾರ್ಯವೂ ನಡೆಯಬೇಕಾದುದು ಅಗತ್ಯವೆಂಬುದನ್ನು ಅವರು ತಮ್ಮ ಪೂರ್ಣದೃಷ್ಟಿಯಿಂದ ಮನಗಂಡರು. ಅದಕ್ಕಾಗಿ ಒಂದು ಕಡೆಯಲ್ಲಿ "ಅಖಿಲ ಭಾರತ ಶರಣಸಾಹಿತ್ಯ ಪರಿಷತ್ತ"ನ್ನು ಯೋಜಿಸಿದರು; ಇನ್ನೊಂದು ಕಡೆಯಲ್ಲಿ "ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ" ಎಂಬ ಹೆಸರಿನಲ್ಲಿ ಒಂದು ಮೂದುವಟ್ಟನ್ನು ಸ್ಥಾಪಿಸಿದರು. ಅದರ ನೆರವಿನಿಂದ ಧಾರ್ಮಿಕ ಮೌಲ್ಯಗಳ ಪ್ರಸಾರಕ್ಕೆ ಅನುಷ್ಠಾನಕ್ಕೆ ಅಗತ್ಯವಾದ ಬಹುಮುಖ ಕಾರ್ಯಕ್ರಮಗಳು ನಡೆಯುವ ಶಾಶ್ವತ ಯೋಜನೆಯೊಂದನ್ನು ರೂಪಿಸಿಕೊಟ್ಟರು. ಈ ಧಾರ್ಮಿಕ ದತ್ತಿಯ ಮುಖ್ಯ ಉದ್ದೇಶಗಳಾವುವೆಂದರೆ

೧. ವೀರಶೈವ ಧರ್ಮದ ಆಚಾರ ವಿಚಾರಗಳನ್ನೂ ಅದಕ್ಕೆ ಹಿನ್ನೆಲೆಯಾದ ತತ್ತ್ವ ಸಿದ್ಧಾಂತಗಳನ್ನೂ ಅರ್ಥಪೂರ್ಣವಾಗಿ ನಿರೂಪಿಸುವ ಗ್ರಂಥಗಳ ಪ್ರಕಟಣೆ

೨. ಸಾಹಿತ್ಯ, ಸಂಗೀತ, ಕೀರ್ತನೆ ಮತ್ತು ದೃಶ್ಯಾವಳಿಗಳ ಮೂಲಕ ಶಿವಶರಣರ ಮತ್ತು ಸಂತರ ಜೀವನ ಸಂದೇಶಗಳ ಪ್ರಸಾರ ಕಾರ್ಯವನ್ನು ಕೈಕೊಳ್ಳುವುದು

೩. ಶಿವಾನುಭವಗೋಷ್ಠಿಗಳನ್ನೂ ವಿಚಾರಸಂಕಿರಣಗಳನ್ನೂ ನಗರಗಳಲ್ಲಿ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ನಡೆಸುವುದು

೪. ವೀರಶೈವಧರ್ಮ ಮತ್ತು ಸಾಹಿತ್ಯವನ್ನು ಕುರಿತು ಪ್ರಕಟವಾದ ಶ್ರೇಷ್ಠ ಕೃತಿಗಳಿಗೆ ಪ್ರಶಸ್ತಿ ಮತ್ತು ಬಹುಮಾನ ನೀಡುವುದು

ಈ ಮೊದಲಾದ ಉದ್ದೇಶಗಳನ್ನಿಟ್ಟುಕೊಂಡು ಈಗಾಗಲೇ ಕಾರ್ಯಪ್ರವೃತ್ತವಾಗಿದೆ. ಅನೇಕ ಕಾರ್ಯಕ್ರಮಗಳನ್ನು ನಡೆಸಿದೆ. ಅದನ್ನು ಇನ್ನೂ ಅಧಿಕಗೊಳಿಸುವುದರಲ್ಲಿ ಆಸಕ್ತವಾಗಿದೆ.

ಗ್ರಂಥ ಪ್ರಕಟಣೆಗೆ ಸಂಬಂಧಿಸಿದಂತೆ ಈ ಧಾರ್ಮಿಕ ವತ್ತಿಯಿಂದ ಇದುವರೆಗೆ ಕೆಲವು ಗ್ರಂಥಗಳು ಪ್ರಕಟವಾಗಿವೆ. ಇದೀಗ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥ ಮಾಲೆಯಲ್ಲಿ ಮರುಪ್ರಕಾಶನಗೊಳ್ಳುತ್ತಿರುವ "ಶ್ರೀ ಸುತ್ತೂರು ವೀರಸಿಂಹಾಸನ ಗುರುಪರಂಪರೆ"ಯು ಮಹತ್ವದ ಒಂದು ಸತ್ಕೃತಿ. ಸಹಸ್ರಾರು ವರ್ಷಗಳ ಪ್ರಾಚೀನತೆ ಯುಳ್ಳ ನಾಡಿನ ಹಿರಿಯ ಗುರುಪೀಠಗಳಲ್ಲಿ ಸುತ್ತೂರು ಶ್ರೀ ಜಗದ್ಗುರು ಪೀಠವು ಪ್ರಮುಖವೆನಿಸಿ ಪ್ರಖ್ಯಾತಿ ಪಡೆದಿರುವುದು ಸುವಿದಿತ. ಅಂದಿನಿಂದ ಇಂದಿನತನಕ ಶ್ರೀಪೀಠವನ್ನಲಂಕರಿಸಿದಇಪ್ಪತ್ತುಮೂವರು ಗುರುಪರೇಣ್ಯರುಜಗತ್ತಿನಕಲ್ಯಾಣಕ್ಕಾಗಿ ಅಮೂಲ್ಯ ಕೊಡುಗೆಗಳನ್ನು ನೀಡುತ್ತ ಬಂದಿರುವರು. ಇಂತಹ ದಿವ್ಯಗುರು-ಪರಂಪರೆ ಯನ್ನು ಭಕ್ತಜನತೆಗೆ ಪರಿಚಯಿಸುವ ಘನೋದ್ದೇಶದಿಂದ ಶ್ರೀಪೀಠದ ಇಪ್ಪತ್ತೊಂದು ಪೀಠಾಧೀಶ್ವರರ ಪುಣ್ಯಚರಿತ್ರೆಯನ್ನು ಮಂತ್ರಮಹರ್ಷಿ ಜಗದ್ಗುರು ಶ್ರೀಶಿವರಾತ್ರೀಶ್ವರ ಮಹಾಸ್ವಾಮಿಗಳವರು-ಕವಿವರ್ಯ ಕುಂತೂರು ಸಂಗಪ್ಪಶಾಸ್ತ್ರಿಗಳಿಂದ ವಿರಚಿತವಾದ "ಶ್ರೀ ಸುತ್ತೂರು ವೀರಸಿಂಹಾಸನ ಗುರುಪರಂಪರೆ" ಎಂಬ ಸತ್ಕಾವ್ಯವನ್ನು - ಪ್ರಕಟ ಗೊಳಿಸಿ ಮಹದುಪಕಾರವನ್ನು ಮಾಡಿರುವರು. ಅವರ ಪ್ರತಿಗಳು ಇಂದು ಅಲಭ್ಯ ವಿದ್ದುದರಿಂದ ಪುನರ್ಮುದ್ರಣಮಾಡಿಸಬೇಕೆಂಬುದು ಶ್ರೀ ಪೀಠದ ಶಿಷ್ಯವೃಂದದ ಬಹುದಿನದ ಬಯಕೆಯಾಗಿತ್ತು. ಇದನ್ನು ಈಡೇರಿಸಿಕೊಡಲು ಮತ್ತು ಶ್ರೀ ಪೀಠದ ಇಪ್ಪತ್ತೆರಡನೆಯ ಹಾಗೂ ಇಪ್ಪತ್ತುಮೂರನೆಯವರಾದ ಪೂಜ್ಯ ಜಗದ್ಗುರುದ್ವಯರ ದಿವ್ಯಚರಿತ್ರೆಯನ್ನು ಅದೇ ಕಾವ್ಯವಾಹಿನಿಯಲ್ಲಿ ಸಂಗಮಿಸಿ ಪ್ರವಹಿಸುವಂತೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

ಧರ್ಮದೀಪಕರಾದ ಆ ಪುಣ್ಯಪುರುಷರ ತಪೋಮಯ ಬದುಕಿನ ದಿವ್ಯಬೆಳಗನ್ನು ಹೃದಯದೀವಿಗೆಗೆ ತಂದುಕೊಳ್ಳುವ ಹಾಗೂ ಅವರ ಉತ್ತುಂಗ ಜೀವನ ಗಂಗಾ ಪ್ರವಾಹದ ಈ ಪವಿತ್ರ ಕಾವ್ಯತೀರ್ಥದಲ್ಲಿ ಮಿಂದು ಮಡಿಯಾಗುವ ಪುಣ್ಯ ಅವಕಾಶ ವೊಂದು ಸಾಧಕವೃಂದಕ್ಕೆ ಇಂದಿಲ್ಲಿ ಒದಗಿಬಂದಿದೆ. ಈ ದಿಶೆಯಲ್ಲಿ ಪ್ರತಿಭಾನ್ವಿತ ಪ್ರಸಿದ್ಧ ಪಂಡಿತರಾದ ಈರ್ವರು ಕವಿಗಳು ಪೂಜ್ಯ ಜಗದ್ಗುರುದ್ವಯರ ದಿವ್ಯಜೀವನ ವನ್ನು ಕಾವ್ಯರೂಪದಲ್ಲಿ ಚಿತ್ರಿಸಿಕೊಟ್ಟಿದ್ದಾರೆ. ಆದರೆ ಆ ಮಹಾ ಶಿವಯೋಗಿ ಗಳೀರ್ವರ ಮಹಿಮಾನ್ವಿತ ಬದುಕು ಒಂದೊಂದು ಮಹಾಕೃತಿಗೆ ವಸ್ತುವಾಗುವಂತ ಹುದು. ಅಂತಹುದನ್ನು ಒಂದೊಂದು ಅಧ್ಯಾಯದಲ್ಲಿಯೇ–"ಕರಿಯು ಕನ್ನಡಿ ಯೊಳಗೆ ಅಡಗಿದಂತೆ" ಹಿಡಿದುಕೊಡುವುದರಲ್ಲಿ ಯಶಸ್ವಿಯಾಗಿದ್ದಾರೆ.

ಮಂತ್ರಮಹರ್ಷಿಕಥನವನ್ನು ರಚಿಸಿದ ಕವಿ-"ಪುಲಿಕೇಶಿ" ಎಂಬ ಕಾವ್ಯನಾಮ ದಿಂದ ಸಾಹಿತ್ಯಸೇವೆಯನ್ನೆಸಗುತ್ತ ಪುರಾಣಪ್ರವಚನಗಳಿಂದ ಪರಿಚಿತರಾಗಿರುವ ಪಂಡಿತ ಶ್ರೀ ಕೆ.ಪಿ. ಶಿವಲಿಂಗಯ್ಯನವರು.

# IX

'ಶಿವರಾತ್ರಿ ರಾಜೇಂದ್ರ ಕಥನ' ವನ್ನು ರಚಿಸಿದ ಕವಿ- "ಕುಮಾರ ನಿಜಗುಣ" ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿ ಅನೇಕ ಕೃತಿಗಳನ್ನು ರಚಿಸಿ ವಿವಿಧ ಛಂದೋ ಪ್ರಕಾರಗಳಲ್ಲಿ ಹಲವಾರು ಬಗೆಯ ಪ್ರಯೋಗಗಳನ್ನು ನಡೆಸುತ್ತ ಸಾರಸ್ವತ ಸೇವೆಯ ನ್ನೆಸಗುತ್ತಿರುವ ಶ್ರೀ ಶಂಭುಲಿಂಗನಕ್ಷೇತ್ರದ ಶ್ರೀ ಪಿ. ಬಸವಣ್ಣನವರು.

ಈ ಈರ್ವರು ವಿದ್ವಾಂಸರಿಗೂ ಈ ಕಾವ್ಯದ ಕರಡಚ್ಚನ್ನು ತಿದ್ದುವ ಕೆಲಸದಲ್ಲಿ ಸಹಕರಿಸಿದ ಶ್ರೀ ಜಿ.ಜಿ. ಮಂಜುನಾಥ್ ಅವರಿಗೂ ಅಂದವಾಗಿ ಅಚ್ಚುಮಾಡಿಕೊಟ್ಟ ಮೈಸೂರು ಕನಕಧಾರಾ ಮುದ್ರಣಾಲಯದ ಶ್ರೀ ಪಿ. ಬಸವಣ್ಣನವರಿಗೂ ಶುಭವನ್ನು ಹಾರೈಸುತ್ತೇವೆ.

ಸದ್ಭಕ್ತಸಹೃದಯಬಳಗವು ಈ ಕಾವ್ಯವನ್ನು ತುಂಬುಹೃದಯದಿಂದ ಸ್ವಾಗತಿಸಿ ಆಸ್ವಾದಿಸುವುದೆಂದು ನಂಬಿದ್ದೇವೆ.

ಮೈಸೂರು
29-8-1991

-ಪ್ರಕಾಶಕರು

# ಮುನ್ನುಡಿ

(ಪ್ರಥಮ ಮುದ್ರಣಕ್ಕೆ)

ಮೈಸೂರು ಡಿಸ್ಟ್ರಿಕ್ಟ್ ನಂಜನಗೂಡು ತಾಲ್ಲೂಕು ಸುತ್ತೂರಿನಲ್ಲಿರುವ ಶ್ರೀ ವೀರಸಿಂಹಾಸನ ಮಠವು ಪುರಾತನ ಮಠವಾಗಿರುತ್ತೆ, ಈ ಮಠವು ಬಸವೇಶ್ವರನ ಕಾಲಕ್ಕಿಂತಲೂ ಹಿಂದೆಯೇ ಸ್ಥಾಪಿತವಾದದ್ದೆಂದು ಮಠಕ್ಕೆ ಸಂಬಂಧಪಟ್ಟ ಶಿಲಾಶಾಸನಗಳಿಂದಲೂ ಮತ್ತು ಹಿಂದಣ ಪಾಳೆಯಗಾರರುಗಳು ಬರೆಯಿಸತಕ್ಕ ಶಾಸನಗಳಿಂದಲೂ ತಿಳಿಯಬರುತ್ತದೆ. ರಾಜೇಂದ್ರಚೋಳನ ಗುರುಗಳಾದ ಈಶಾನೇಶ್ವರವೊಡೆಯರ ಕಾಲದಲ್ಲಿ ಕ್ರಿಸ್ತಶಕ ೧೮೯೦ ರಲ್ಲಿ ಹುಟ್ಟಿರತಕ್ಕ ಶಾಸನದಿಂದಲೂ ಪುರಾತನಪೀಠವೆಂದು ತಿಳಿದುಬರುತ್ತೆ. ಈ ಪೀಠದ ಸ್ವಾಮಿಗಳಾದ ೧೧ನೇ ಘನಲಿಂಗಿ ಶಿವಾಚಾರ್ಯರೆಂಬುವರು ಸುಮಾರು ನಾಲ್ಕು ನೂರು ವರ್ಷಗಳ ಹಿಂದೆ "**ಘನಲಿಂಗಿ**" ಎಂಬ ವಚನಶಾಸ್ತ್ರವನ್ನು ಬರೆದಿರುತ್ತಾರೆ ಮತ್ತು ೧೫ ನೆಯವರಾದ ಚೆನ್ನಬಸವಸ್ವಾಮಿಗಳೆಂಬುವರು ಸುಮಾರು ಮೂರುನೂರು ವರ್ಷಗಳ ಹಿಂದೆ ಚೋಳ ರೇಣುಕ ಸಂವಾದರೂಪವಾದ ಶಿವಾಧಿಕ್ಯಶಿಖಾಮಣಿಗೆ ಟೀಕೆಯನ್ನೂ ಬರೆಯಿಸಿರುವಂತೆ ಗ್ರಂಥಗಳಿಂದ ತಿಳಿದುಬರುತ್ತದೆ,

ಆಳಿದ ಮಹಾಸ್ವಾಮಿಯವರು ಶ್ರೀ ಮುಮ್ಮಡಿ ಕೃಷ್ಣರಾಜೇಂದ್ರವೊಡೆಯರ್ ಬಹದ್ದೂರವರು ಈ ಮಠದ ಪೀಠಾಧಿಕಾರಿಗಳಿಗೆ ಮಠದಲ್ಲಿ ದಾಸೋಹಕ್ಕಾಗಿ ಇನಾಮತಿ ಭೂಮಿಗಳನ್ನು ಕೊಟ್ಟು ಸನ್ನದು ಬರೆಯಿಸಿರುತ್ತಾರೆ. ಅನೇಕ ವೇಳೆ ಸ್ವಾಮಿಗಳನ್ನು ಬರಮಾಡಿಕೊಂಡು ಗೌರವಿಸಿರುವುದಾಗಿ ತಿಳಿದುಬರುತ್ತದೆ. ಈ ಸುತ್ತೂರು ಸಿಂಹಾಸನವು ಅನೇಕ ಶಾಖಾಮಠಗಳನ್ನೊಳಗೊಂಡ ದೊಡ್ಡ ಪೀಠವಾಗಿದೆ. ನಾನು ನೋಡಿ ಕೇಳಿದ್ದರಲ್ಲಿ ಅನೇಕ ಶಿಷ್ಯಸಮುದಾಯದಿಂದ ಕೂಡಿದ ಪೀಠವಾಗಿದೆ.

ಹಾಲಿ ಈಗ ಪೀಠಾಧಿಕಾರಿಗಳಾಗಿರತಕ್ಕ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿಸ್ವಾಮಿಗಳು ತುಂಬ ಶಾಂತಸ್ವಭಾವವುಳ್ಳವರು. ಶಮದಮಾದಿ ಯತಿಗುಣಸಂಪನ್ನರು ಮತ್ತು ಶಿವಪೂಜಾನಿಷ್ಠರೂ ಆಗಿರುತ್ತಾರೆ. ಇವರ ಕಾಲದಲ್ಲಿ ಮಠವನ್ನು ತುಂಬ ವೃದ್ಧಿಗೆ ತಂದಿರುತ್ತಾರೆ. ಮಠದಲ್ಲಿ ಪೂರ್ವ ಪದ್ಧತಿಯಂತೆ ಕಾರ್ಯಕ್ರಮಗಳು ಸರಿಯಾಗಿ ನಡೆಯುವಂತೆ ಏರ್ಪಾಡು ಮಾಡಿರುತ್ತಾರೆ. ಅನೇಕ ಶಾಖಾಮಠಗಳನ್ನು ಜೀರ್ಣೋದ್ಧಾರ ಮಾಡಿರುತ್ತಾರೆ. ಇವರು ಸಂಸ್ಕೃತವಿದ್ಯಾ ಪ್ರಚಾರಕ್ಕಾಗಿ ತಮ್ಮ ಶಿಷ್ಯರಲ್ಲಿ ಒಬ್ಬರಾದ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರಿಗೆ ಒಂದು ಪಾಠಶಾಲೆಯನ್ನು ಕಟ್ಟಿಸುವಂತೆ ಬೋಧಿಸಿ ಅವರಿಂದ ವಾಣೀವಿಲಾಸ ರೋಡಿನಲ್ಲಿ ಕಟ್ಟಡವನ್ನು ಕಟ್ಟಿಸಿ ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿರುತ್ತಾರೆ. ಹಾಲಿ

ಪಾಠಶಾಲೆಯಲ್ಲಿ ೩೦ ಜನ ವಿದ್ಯಾರ್ಥಿಗಳು ಸಂಸ್ಕೃತಾಭ್ಯಾಸವನ್ನು ಮಾಡುತ್ತಿರುವಂತೆ ತಿಳಿದುಬಂದಿರುತ್ತದೆ. ಸ್ವಾಮಿಗಳೂ ಸಹಾ ವಿದ್ಯಾರ್ಥಿಗಳ ಊಟಕ್ಕಾಗಿ ೧೦೦ ಪಲ್ಲ ಗುತ್ತಿಗೆ ಭತ್ತ ಬರತಕ್ಕ ೧೦ ಎಕರೆ ತರಿ ಜಮೀನುಗಳನ್ನು ದಾನಶಾಸನವಾಗಿ ಕೊಟ್ಟಿರುತ್ತಾರೆ. ಮತ್ತು ಪಾಠಶಾಲೆಗೆ ಪ್ರೆಸಿಡೆಂಟರಾಗಿ ನಿಂತು ಅದರ ಅಭಿವೃದ್ಧಿ ವಿಷಯದಲ್ಲಿ ಮುತುವರ್ಜಿಯಿಂದ ಕೆಲಸ ಮಾಡುತ್ತಿರುವುದು ಶ್ಲಾಘ್ಯ ಸಂಗತಿಯಾಗಿದೆ. ಮುಂದೆಯೂ ಅನೇಕ ಧರ್ಮಕಾರ್ಯಗಳನ್ನು ಮಾಡುವವರಾಗಿದ್ದಾರೆ.

ಇವರು ಈಗ ಬರೆಯಿಸಿರತಕ್ಕ ಭಾಮಿನೀಷಟ್ಪದಿರೂಪವಾದ ೧000 ಪದ್ಯಗಳನ್ನು ಒಳಗೊಂಡಿರುವ ಶ್ರೀ ಸುತ್ತೂರು ವೀರಸಿಂಹಾಸನದ ಗುರುಪರಂಪರಾ ಗ್ರಂಥವು ಗುರುತ್ವ, ಮತ, ವಿದ್ಯೆ, ಆಚಾರ ಇವುಗಳನ್ನೂ ಬೋಧಿಸುವುದರಲ್ಲಿ ಸಹಕಾರಿಯಾಗಿದೆ.

ಈ ಕಾವ್ಯವನ್ನು ರಚಿಸಿದ ವೇ॥ಸಿ.ಸಂಗಪ್ಪಶಾಸ್ತ್ರಿಗಳು ನನಗೆ ತುಂಬ ಪರಿಚಿತರು. ಇವರ ಬರವಣಿಗೆಯು ಸುತ್ತೂರು ಪೀಠದ ಗುರುಗಳಲ್ಲಿ ಇವರಿಗಿರತಕ್ಕ ಭಕ್ತಿವಿಶ್ವಾಸಗಳನ್ನು ತೋರ್ಪಡಿಸುತ್ತದೆ. ಕವಿತ್ವವು ಬಹು ಸರಳವಾಗಿ ಓದತಕ್ಕವರಿಗೆ ಸುಲಭವಾಗಿ ಅರ್ಥವಾಗುವಂತೆ ಬರೆಯಲ್ಪಟ್ಟಿದೆ. ಇವರು ಕೇವಲ ರಿಕ್ತರಾಗಿರುವುದರಿಂದ ಮಠಾಧಿಕಾರಿಗಳು ಅವರವರ ಮಠದ ಚರಿತ್ರೆಗಳನ್ನು ಇದೇ ರೀತಿಯಾಗಿ ಇವರಿಂದ ಬರೆಯಿಸಿ ಪ್ರೋತ್ಸಾಹಿಸುವರೆಂದು ನಂಬಿರುತ್ತೇನೆ.

ಹೆಚ್. ಲಿಂಗರಾಜ ಅರಸ
ರಾಜಕವಿಭೂಷಣ
ಅರಮನೆ ರಿಟೈರ್ಡ್ ಮುಜರಾಯಿ
ಭಕ್ಷಿಯವರು

18–9–1933
ಮೈಸೂರು

# ಕವಿ ನಿವೇದನ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೮೫೪ ನೇ ಶ್ರೀಮದಾಂಗೀರಸನಾಮ ಸಂವತ್ಸರದ ಶ್ರಾವಣ ಶುದ್ಧ ಸಪ್ತಮಿ ಭಾನುವಾರದಲ್ಲಿ ಮೈಸೂರು ವಾಣೀವಿಲಾಸರೋಡಿನಲ್ಲಿ ಮ॥ ರಾ॥ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರಿಂದ ಸ್ಥಾಪಿಸಲ್ಪಟ್ಟ ಸಂಸ್ಕೃತಪಾಠಶಾಲಾ ಪ್ರಾರಂಭಮಹೋತ್ಸವ ಕಾಲದಲ್ಲಿ ಸುತ್ತೂರು ಶ್ರೀ ವೀರಸಿಂಹಾಸನಮಠದ ಪಟ್ಟಾಧ್ಯಕ್ಷರಾದ ಜಗದ್ಗುರು ಶ್ರೀ ಶಿವರಾತ್ರಿ ಸ್ವಾಮಿಗಳವರು ಅಗ್ರಾಸನವನ್ನಲಂಕರಿಸಿದ್ದರು. ಪಾಠಶಾಲಾ ಪ್ರಾರಂಭ ಮಹೋತ್ಸವವು ಅತಿವಿಜೃಂಭಣೆಯಿಂದ ಮುಗಿಯಲು ನೆರೆದಿದ್ದ ಸಭಿಕರೆಲ್ಲರೂ ಹರ್ಷಾಬ್ಧಿಯಲ್ಲಿ ಮುಳುಗಿದ್ದರು. ಆ ಸಮಯದಲ್ಲಿ ಮ॥ ರಾ॥ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರು ಸಭೆಯಲ್ಲಿ ನಿಂತು ಅತಿನಮ್ರಭಾವದಿಂದ ಶ್ರೀಗಳವರ ಸನ್ನಿಧಿಯಲ್ಲಿ ಸುತ್ತೂರು ಪೀಠದ ಪುರಾತನತ್ವವನ್ನೂ ಗುರುಪರಂಪರೆಯವರ ಮಹಿಮೆಗಳನ್ನೂ ಬೋಧಿಸಬೇಕೆಂದು ಪ್ರಾರ್ಥಿಸಲು ಶ್ರೀಗಳವರು ಹರ್ಷಿತರಾಗಿ ಶ್ರೀಮಠದ ಪುರಾತನತ್ವವನ್ನೂ ಮತ್ತು ಪೀಠದ ಹಿಂದಿನ ಗುರುಗಳು ನಡೆಯಿಸಿರತಕ್ಕ ಅದ್ಭುತವಾದ ಮಹಿಮೆಗಳನ್ನೂ ನೀತಿಮತ್ತಾಗಿ ಬೋಧಿಸಲು ಸಭಿಕರು ಕೇಳಿ ಉದ್ಗತರೋಮಾಂಚಿತರಾದರು. ಮ॥ ರಾ॥ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರೂ ಮತ್ತು ಪ್ರಮುಖ ಶಿಷ್ಯರೂ ಈ ಗುರುಪರಂಪರೆಯವರ ಚರಿತ್ರೆಯನ್ನು ಗ್ರಂಥರೂಪವಾಗಿ ಬರೆಯಿಸಬೇಕೆಂದು ಶ್ರೀಗಳವರನ್ನು ಪ್ರಾರ್ಥಿಸಿಕೊಂಡರು. ಶ್ರೀಗಳವರು ಅವರಿಗೆಲ್ಲಾ ಅಭಯವನ್ನಿತ್ತು ಆಶೀರ್ವದಿಸಿದರು. ಸ್ವಲ್ಪ ಹೊತ್ತಿನಮೇಲೆ ನನ್ನನ್ನು ಕರೆದು ನೀನು ನಮ್ಮ ಸಿಂಹಾಸನದ ಚರಿತ್ರೆಯನ್ನು **ಶ್ರೀ ಸುತ್ತೂರು ವೀರ ಸಿಂಹಾಸನ ಗುರುಪರಂಪರೆ** ಎಂಬ ಹೆಸರಿನಲ್ಲಿ ಭಾಮಿನೀಷಟ್ಪದಿರೂಪವಾಗಿ ಒಂದು ಗ್ರಂಥವನ್ನು ಬರೆಯಬೇಕೆಂದು ಅಪ್ಪಣೆಮಾಡಿದರು. ಅವರ ಆಜ್ಞಾನುಸಾರವಾಗಿ ಮೇಲ್ಕಂಡ ಪಾಠಶಾಲೆಯಲ್ಲಿಯೇ ನೆಲಸಿ ಈ ಗ್ರಂಥವನ್ನು ಬರೆಯಲು ಪ್ರಾರಂಭಿಸಿದೆನು.

ಮತ್ತು ಈ ಗ್ರಂಥರಚನೆಯಲ್ಲಿ ಪೂರ್ವದಿಂದಲೂ ಈ ಮಠದ ವಿಷಯದಲ್ಲಿ ಅಭಿಮಾನಶಾಲಿಗಳಾದ ಅರಮನೆ ರಿಟೈರ್ಡ್ ಮುಜರಾಯಿ ಭಕ್ಷಿಯವರಾದ "ರಾಜಕವಿಭೂಷಣ" ಶ್ರೀಯುತ ಹೆಚ್. ಲಿಂಗರಾಜೇಅರಸಿನವರು ಸಹ ನನಗೆ ಅಪ್ಪಣೆಯನ್ನು ಕೊಟ್ಟು, ಈ ಗುರುಕಾರ್ಯವನ್ನು ನೀನು ಶ್ರದ್ಧೆಯಿಂದ ಮಾಡು, ನಿನ್ನ ಜನ್ಮವು ಸಫಲವಾಗುತ್ತೆಂತ ಹೇಳಿ ಅತ್ಯಂತ ಆಸಕ್ತಿಯನ್ನುಂಟುಮಾಡಿದರು. ಈಶ್ವರಾನುಗ್ರಹದಿಂದಲೂ ಗುರುಗಳ ಆಶೀರ್ವಾದಬಲದಿಂದಲೂ ಈ ಗ್ರಂಥವನ್ನು ಬರೆದು ಪೂರ್ತಿಮಾಡಿ ಶ್ರೀಗಳವರ ಪಾದಾರವಿಂದಕ್ಕೆ ಅರ್ಪಿಸಿರುತ್ತೇನೆ.

# XIII

ಶ್ರೀಗಳವರು ಮಠದಿಂದ ದಯಪಾಲಿಸಿದ ಶಾಸನ, ಸನ್ನದುಗಳ ಆಧಾರಗಳಿಂದಲೂ ಈ ಪೀಠದ ಹಿಂದಿನ ಗುರುಗಳು ಬರೆದಿರತಕ್ಕ ಗ್ರಂಥಾಧಾರಗಳಿಂದಲೂ ಮತ್ತು ಅವರು ಆಯಾಸ್ಥಳಗಳಲ್ಲಿ ಮಹಿಮೆಗಳನ್ನು ತೋರಿಸಿ ಪ್ರಸಿದ್ಧವಾಗಿರುವ ಇತಿಹಾಸಗಳಿಂದಲೂ ಈ ಗ್ರಂಥವನ್ನು ಬರೆದಿರುತ್ತೇನೆ. ಶಾಸನ, ಸನ್ನದುಗಳನ್ನು ನೋಡಿದ್ದರಲ್ಲಿ ಈ ಪೀಠವು ಪುರಾತನವಾದದ್ದೆಂದು ಹೇಳುವುದು ನಿರಾಕ್ಷೇಪವು.

ಈ ಪೀಠದ ಮೂಲಗುರುಗಳು ಆದಿ ಶಿವರಾತ್ರಿಸ್ವಾಮಿಯವರು. ಇವರ ತರುವಾಯ ಬಂದ ಪೀಠಾಧಿಕಾರಿಗಳು ತಮ್ಮ ತಪೋನುಷ್ಠಾನ ಬಲದಿಂದ ಅನೇಕ ಮಹಿಮೆಗಳನ್ನು ತೋರಿಸಲು ಅನೇಕ ರಾಜರುಗಳೂ ಪಾಳೆಯಗಾರರೂ ಇವರ ಮಹಿಮೆಗೆ ಮೆಚ್ಚಿ ಅವರಿಂದ ತತ್ವೋಪದೇಶವನ್ನು ಪಡೆದು ಧನ್ಯರಾಗಿ ಅವರಿಗೆ ಮೂರುನೂರು ಅಂಕಣಗಳುಳ್ಳ ಶಿಲಾಮಠವನ್ನು ಕಟ್ಟಿಸಿಕೊಟ್ಟಿದ್ದರೆಂದೂ ಮತ್ತು ಮಠಕ್ಕೆ ಸರ್ವಮಾನ್ಯ ಗ್ರಾಮ ಭೂಮಿಗಳನ್ನು ಕೊಟ್ಟಿರುವದಾಗಿಯೂ ಶಿಲಾಶಾಸನಗಳಿಂದ ತಿಳಿಯಬರುತ್ತೆ. ಮತ್ತು ರಾಜೇಂದ್ರ ಚೋಳನ ಕಾಲದಲ್ಲಿ ಸ್ಥಾಪಿತವಾದ ಕೆಲವು ಪುರಾತನ ದೇವಸ್ಥಾನಗಳಲ್ಲಿರುವ ಶಾಸನಗಳಿಂದಲೂ ಈ ಮಠದ ಪುರಾತನತ್ವವು ವ್ಯಕ್ತವಾಗುತ್ತದೆ. ಈ ಗ್ರಂಥದಲ್ಲಿ ೨೧ ಗುರುಗಳ ಚರಿತ್ರೆಯು ಸಾಂಗವಾಗಿ ಬರೆಯಲ್ಪಟ್ಟಿರುತ್ತದೆ. ಅವರವರ ಮಹಿಮೆಗಳು ಆಯಾಯ ಸಂಧಿಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಈ ಪೀಠದ ಪ್ರತಿಯೊಬ್ಬ ಗುರುಗಳೂ ಮತಾಚರಣೆಯಲ್ಲಿಯೂ ವೀರಶೈವಮತಾಭಿವೃದ್ಧಿ ವಿಷಯದಲ್ಲಿಯೂ ಸದಾ ನಿರತರಾಗಿದ್ದರೆಂಬುವುದು ಅವರವರ ಕಾಲದ ಶಾಸನ ಸನ್ನದುಗಳಿಂದಲೇ ಸ್ಪಷ್ಟವಾಗಿ ತಿಳಿಯಬರುತ್ತದೆ.

ಹಾಲಿ ಈಗ ಪೀಠಾಧಿಕಾರಿಗಳಾಗಿರತಕ್ಕ ಜಗದ್ಗುರು ಶ್ರೀ ಪಟ್ಟದ ಶಿವರಾತ್ರಿಸ್ವಾಮಿಯವರು ಶಿವಪೂಜಾವ್ರತನಿಷ್ಠರಾಗಿಯೂ ವಾಕ್ಸಿದ್ಧಿಯುಳ್ಳವರಾಗಿಯೂ ಮತಾಭಿವೃದ್ಧಿವಿಷಯದಲ್ಲಿಯೂ ಧರ್ಮಾಚರಣೆಯಲ್ಲಿಯೂ ಆಸಕ್ತರಾಗಿರುತ್ತಾರೆ. ಇವರು ಶಾಂತಸ್ವಭಾವವುಳ್ಳವರು. ಶಮದಮಾದಿಗುಣಸಂಪನ್ನರೂ ಆಗಿರುತ್ತಾರೆ. ಇವರ ಆಡಳಿತದಲ್ಲಿ ಮಠವನ್ನು ಅತ್ಯಂತ ಅಭಿವೃದ್ಧಿಗೆ ತಂದಿರುತ್ತಾರೆ. ಇವರೂ ಸಹ ಗೌರ್ನಮೆಂಟಿನಿಂದ ರಹದಾರಿ ಮೊದಲಾದ ಮರ್ಯಾದೆಗಳನ್ನು ಪಡೆದಿರುತ್ತಾರೆ. ಇವರು ವೈದಿಕವಿದ್ಯೆಗೆ ಪ್ರೋತ್ಸಾಹಕರಾಗಿರುತ್ತಾರೆ. ಇವರ ದಯಾಳುತ್ವವು ಅನಿತರಸಾಧಾರಣವಾದದ್ದಾಗಿದೆ. ಇವರು ತಮ್ಮ ಮಠದ ಹತ್ತಿರ ಇರತಕ್ಕ ಅತ್ಯಂತ ಶಿಥಿಲವಾಗಿರುವ ಪುರಾತನವಾದ ಸೋಮೇಶ್ವರ ದೇವಾಲಯವನ್ನು ಸ್ವಂತ ಖರ್ಚಿನಿಂದಲೇ ಜೀರ್ಣೋದ್ಧಾರ ಮಾಡುವುದಕ್ಕಾಗಿ ಮೂರು ನಾಲ್ಕು ಸಾವಿರ ರೂಪಾಯಿನ ಅಂದಾಜು ಮಾಡಿಸಿ ಕ್ಷಿಪ್ರದಲ್ಲಿಯೇ ಕೆಲಸ ನಡೆಯಲು ತಕ್ಕ ಏರ್ಪಾಡು ಮಾಡಿರುತ್ತಾರೆ. ಇವರು ಮುಂದೆ ಅನೇಕ ಧರ್ಮಕಾರ್ಯಗಳನ್ನು ಮಾಡುವವರಾಗಿಯೂ ಇರುವುದು ಶ್ಲಾಘ್ಯವೇ ಸರಿ.

ಈಗ ನಾನು ಬರೆದಿರತಕ್ಕ "ಶ್ರೀ ಸುತ್ತೂರು ವೀರಸಿಂಹಾಸನ ಗುರುಪರಂಪರೆ" ಎಂಬ ಗ್ರಂಥವು ಮತತತ್ವವನ್ನು ಬೋಧಿಸತಕ್ಕದ್ದಾಗಿರುತ್ತದೆ. ಇದರ ಪಠನೆಯು ವೀರಶೈವರಿಗೆ ತಮ್ಮ ಮತಧರ್ಮವೇನೆಂಬುವುದನ್ನು ಕೂಡಿದವಟ್ಟಿಗೂ ತಿಳಿಯು ವುದಕ್ಕೆ ಸಹಕಾರಿಯಾಗಿದೆ. ಪೂಜ್ಯರಾದ ಗುರುಗಳ ಮಹಿಮೆಗಳನ್ನೊಳಗೊಂಡಿರುವ ಈ ಗ್ರಂಥವನ್ನು ಸರ್ವರೂ ಓದಿ ಕೃತಾರ್ಥರಾಗುವುದಲ್ಲದೆ ನನ್ನ ಶ್ರಮವನ್ನು ಸಾರ್ಥಕ ಪಡಿಸಬೇಕೆಂಬುದಾಗಿ ಸವಿನಯ ಪ್ರಾರ್ಥನೆ.

ಈ ಗ್ರಂಥಪರಿಶೋಧನೆಯಲ್ಲಿ ವಿಶೇಷವಾಗಿ ಸಹಾಯಮಾಡಿದ ಆಸ್ಥಾನ ವಿದ್ವಾನ್ ವೇ। ತ್ರ್ಯಂಬಕ ಬಿ.ಎಂ. ಸಿದ್ಧಲಿಂಗಶಾಸ್ತ್ರಿಗಳಿಗೂ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರ ಸಂಸ್ಕೃತ ಪಾಠಶಾಲಾ ಅಧ್ಯಾಪಕರಾದ ವೇ॥ ಎಂ. ಬಸವರಾಜ ಶಾಸ್ತ್ರಿಗಳಿಗೂ ತುಂಬಾ ಕೃತಜ್ಞನಾಗಿರುತ್ತೇನೆ.

**ಸಿ. ಸಂಗಪ್ಪಶಾಸ್ತ್ರೀ**

ಶ್ರೀಮುಖಿನಾಮಸಂವತ್ಸರ
ಭಾದ್ರಪದ ಬಹುಳ ೧೪
ಸೋಮವಾರ

ಅರಮನೆ ಜಪದಕಟ್ಟೆ ಮಠ
ದೊಡ್ಡಪೇಟೆ, ಮೈಸೂರು
ತಾರೀಖು 18-9-1933

# ಪ್ರಸ್ತಾವನೆ

ಮತಾವಲಂಬಿಗಳೇ, ವಿದ್ವಜ್ಜನರೇ,

ನಾವು ಈ ಗ್ರಂಥವನ್ನು ಬಹುಕಾಲದ ಹಿಂದೆಯೇ ಬರೆಯಿಸಿ ಪ್ರಕಟಿಸಬೇಕೆಂದು ಸಂಕಲ್ಪಿಸಿದವರಾಗಿದ್ದೆವು. ಕೆಲವು ಅನಿವಾರ್ಯ ಕಾರಣಗಳಿಂದ ಸಾವಕಾಶವಾಯಿತು. ಈಗ ಸಮಯವು ಒದಗಿದುದರಿಂದ ಪ್ರಕಾಶಪಡಿಸಿರುತ್ತೇವೆ. ನಮ್ಮ ಗುರುಪರಂಪರೆಯ ನಡೆವಳಿಕೆಗಳು ಅಡಕವಾಗಿರುವ ಶಿಲಾಶಾಸನಗಳೂ ಗ್ರಂಥರೂಪ ಲೇಖನರೂಪ ಆಧಾರಗಳು ಈ ಗ್ರಂಥರಚನೆಗೆ ಸಾಧನಗಳಾಗಿರುತ್ತವೆ.

ಈ ಗ್ರಂಥವನ್ನು ಬರೆದ ವೇ॥ ಸಿ. ಸಂಗಪ್ಪಶಾಸ್ತ್ರಿಗಳು ನಮಗೆ ಚಿರಪರಿಚಿತರು. ಇವರ ಕವಿತಾಯೋಗ್ಯತೆಯನ್ನು ಬಹುಮುಖವಾಗಿ ಪರಿಶೀಲಿಸಿ ಈ ಗ್ರಂಥವನ್ನು ಇವರಿಂದಲೇ ಬರೆಯಿಸಬೇಕೆಂದು ಸಂಕಲ್ಪಿಸಿದೆವು.

ಈ ಗ್ರಂಥದ ಉತ್ಪತ್ತಿಗೆ ಪೂರ್ವದಿಂದಲೂ ಈ ಪೀಠದ ವಿಷಯದಲ್ಲಿ ಪೂರ್ಣಾಭಿಮಾನಿಗಳಾದ ಅರಮನೆ ರಿಟೈರ್ಡ್ ಮುಜರಾಯಿ ಭಕ್ಷಿಯವರಾದ 'ರಾಜಕವಿಭೂಷಣ' ಶ್ರೀಯುತ ಹೆಚ್, ಲಿಂಗರಾಜೆ ಅರಸಿನವರ ಪ್ರೇರಣೆಯು ಮುಖ್ಯಕಾರಣವಾಗಿದೆ. ಇದಕ್ಕಾಗಿ ನಾವು ಅವರನ್ನು ವಿಶೇಷವಾಗಿ ಗೌರವಿಸುತ್ತೇವೆ.

ಮತ್ತು ನಮ್ಮ ಮಠದ ಗುರುಪರಂಪರೆಯ ಚರಿತ್ರೆಯನ್ನು ಕೇಳಿ ಗ್ರಂಥರೂಪದಲ್ಲಿ ಪ್ರಚಾರಕ್ಕೆ ತರಬೇಕೆಂದು ಪ್ರೋತ್ಸಾಹಿಸಿದ ಕ್ಯಾತನಹಳ್ಳಿ ಸಾಹುಕಾರ್ ಶ್ರೀಯುತ ಸಿದ್ಧಲಿಂಗಯ್ಯನವರು ನಮಗೆ ವಿಶೇಷ ಪ್ರಿಯರಾಗಿರುತ್ತಾರೆ.

ಈ ಗ್ರಂಥಪರಿಶೋಧನಕಾರ್ಯದಲ್ಲಿ ವಿಶೇಷವಾಗಿ ಸಹಾಯ ಮಾಡಿದ ಆಸ್ಥಾನ ವಿದ್ವಾನ್ ವೇ॥ ತ್ರ್ಯಂಬಕ ಬಿ.ಎಂ. ಸಿದ್ಧಲಿಂಗಶಾಸ್ತ್ರಿಗಳವರನ್ನೂ ಕ್ಯಾತನಹಳ್ಳಿ ಸಾಹುಕಾರ್ ಸಿದ್ಧಲಿಂಗಯ್ಯನವರ ಸಂಸ್ಕೃತಪಾಠಶಾಲಾ ಅಧ್ಯಾಪಕರಾದ ವೇ॥ ಎಂ, ಬಸವರಾಜಶಾಸ್ತ್ರಿಗಳವರನ್ನೂ ಅಪಾರವಾಗಿ ಅಭಿನಂದಿಸುತ್ತೇವೆ.

ಈ ಗ್ರಂಥರಚನೆಯೂ ಮುದ್ರಣವೂ ಏಕಕಾಲದಲ್ಲಿ ಸಂಭವಿಸಿದುದರಿಂದ ಕೆಲವು ಪ್ರಾಮಾದಿಕದೋಷಗಳು ಇರಬಹುದು. ಗುಣಿಗಳಾದ ವಿದ್ವಾಂಸರು ತಿಳಿಸಿದಲ್ಲಿ ಕೃತಜ್ಞತೆಯೊಡನೆ ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುವುದು.

| ಶ್ರೀಮುಖನಾಮಸಂವತ್ಸರದ<br>ಭಾದ್ರಪದ ಬಹುಳ ೧೪ ಸೋಮವಾರ<br>ತಾ॥ 18–9–1933 | ಜಗದ್ಗುರು<br>ಶ್ರೀ ಷಟ್ಸ್ಥಲ ಶಿವರಾತ್ರಿಸ್ವಾಮಿಗಳು<br>ವೀರಸಿಂಹಾಸನ, ಸುತ್ತೂರು |
|---|---|

# ಪರಿವಿಡಿ


| | | |
|---|---|---|
| ೧ | ಪೀಠಿಕೆ–ಗುರುಪರಂಪರಾ ಸ್ತೋತ್ರಗಳು | ೩ |
| ೨ | ಶ್ರೀ ಶಿವರಾತ್ರೀಶಕಥನಂ | ೧೨ |
| ೩ | ಈಶಾನೇಶವೊಡೆಯಕಥನಂ | ೪೦ |
| ೪ | ನಿಜಲಿಂಗಶಿವಾಚಾರ್ಯಕಥನಂ | ೪೮ |
| ೫ | ಸಿದ್ಧನಂಜದೇಶಿಕೇಂದ್ರಕಥನಂ | ೫೩ |
| ೬ | ಕಟನೀನಂಜುಂಡದೇಶಿಕೇಂದ್ರಕಥನಂ | ೬೯ |
| ೭ | ಚೆನ್ನವೀರದೇಶಿಕೇಂದ್ರಕಥನಂ | ೭೬ |
| ೮ | ಸಿದ್ಧಮಲ್ಲಶಿವಾಚಾರ್ಯಕಥನಂ | ೮೪ |
| ೯ | ಪರ್ವತೇಂದ್ರ ಶಿವಾಚಾರ್ಯಕಥನಂ | ೯೮ |
| ೧೦ | ಭಂಡಾರಿ ಬಸವಪ್ಪೊಡೆಯಕಥನಂ | ೧೦೮ |
| ೧೧ | ನಂಜುಂಡದೇಶಿಕೇಂದ್ರಕಥನಂ | ೧೧೬ |
| ೧೨ | ಘನಲಿಂಗಿದೇವಕಥನಂ | ೧೨೩ |
| ೧೩ | ಶಿವರಾತ್ರೀಶಕಥನಂ | ೧೩೦ |
| ೧೪ | ಚೆನ್ನಬಸವದೇಶಿಕೇಂದ್ರಕಥನಂ | ೧೪೯ |
| ೧೫ | ಗುರುನಂಜದೇಶಿಕೇಂದ್ರಕಥನಂ | ೧೫೫ |
| ೧೬ | ಗುರುಚೆನ್ನಬಸವಶಿವಾಚಾರ್ಯಕಥನಂ | ೧೬೩ |
| ೧೭ | ಪಂಚಾಕ್ಷರದೇಶಿಕೇಂದ್ರಕಥನಂ | ೧೬೯ |
| ೧೮ | ಚಿದ್ಘನಶಿವಾಚಾರ್ಯಕಥನಂ | ೧೭೭ |
| ೧೯ | ಚೆನ್ನವೀರಶಿವಾಚಾರ್ಯಕಥನಂ | ೧೮೩ |
| ೨೦ | ಮಹಾನ್ತದೇಶಿಕೇಂದ್ರಕಥನಂ | ೧೮೮ |
| ೨೧ | ಸಿದ್ಧಲಿಂಗಶಿವಾಚಾರ್ಯಕಥನಂ | ೨೦೦ |
| ೨೨ | ಶಿವರಾತ್ರಿದೇಶಿಕೇಂದ್ರಕಥನಂ | ೨೧೩ |
| ೨೩ | ಮಂತ್ರಮಹರ್ಷಿಕಥನಂ | ೨೨೧ |
| ೨೪ | ಶಿವರಾತ್ರಿರಾಜೇಂದ್ರಕಥನಂ | ೨೩೭ |


 



ಶ್ರೀ ಸುತ್ತೂರು ವೀರಸಿಂಹಾಸನ ಸಂಸ್ಥಾಪನಾಚಾರ್ಯ

ಆದಿಜಗದ್ಗುರು

ಶ್ರೀ ಶಿವರಾತ್ರೀಶ್ವರ ಭಗವತ್ಪಾದರು

# ಪೀಠಿಕೆ

ಶ್ರೀಮದಮರಾಧೀಶನತಪದ
ಕಾಮಿತಾರ್ಥಫಲಪ್ರದಾಯಕ
ಸೋಮಶೇಖರ ಸೋಮ ಜಿತಸುಮಚಾಪ ಗುಣಧಾಮ
ಸಾಮಗಾನಪ್ರಿಯ ನಿರಾಮಯ
ಭೀಮಭೂತಾಧಿಪತಿ ವ್ಯೋಮಕೇಶಾವರಣ ಪುರಹರ
ಸೋಮನಾಥೇಶ್ವರನೆ ಕುಡು ನೀಂ ಮತಿಗೆ ಮಂಗಲವ ೧

ಮಾತೆ ಗಿರಿಸಂಜಾತೆ ಶಿವಸಂ
ಪ್ರೀತೆ ವೇದಾತೀತೆ ಶಿವಕುಲ
ಜಾತವರಭೂನಾಥಸಂಕುಲದತ್ತವರಜಾತೆ
ನೀತೆ ದುರಿತವಿಘಾತೆ ಭುವನ
ಖ್ಯಾತ ಶುಭಗುಣಪೂತೆ ಚಿನ್ಮಯ
ಭೂತಪತಿಯರ್ಧಾಂಗಿ ಕುಡು ನೀಂ ಮತಿಗೆ ಮಂಗಲವ ೨

ವೀರ ಶಂಭುಕುಮಾರ ವಾರ್ಧಿಗ
ಭೀರ ದುರಿತನಿಕಾಯಭೂಜಕು
ಠಾರ ಕರುಣಾಪೂರ ಶರಣವಿಹಾರ ಗುಣಹಾರ
ಧೀರ ವಿಮಲಾಕಾರ ಮೋಕ್ಷದ
ಸಾರ ವಚನವಿಚಾರ ಸುಜನಾ
ಧಾರ ಗಣಪತಿ ದಯದಿ ಕುಡು ನೀಂ ಮತಿಗೆ ಮಂಗಲವ ೩

ಧೀರ ದೇವನಿಕಾಯ ಕಂಗೆಡೆ
ಚೀರುತವರಂದ್ಯೈದೆ ಮುಂಗಡೆ
ವೀರಗುಣದಿಂದವರಿಗಭಯವನಿತ್ತು ಕಾಯ್ದಧಟಾ
ಧಾರಿಣಿಯಲುರೆ ವೀರನೆನಿಸಿದ
ತಾರಕಾಸುರವೈರಿ ಸಾಂಬಕು
ಮಾರ ಷಣ್ಮುಖದೇವ ಕುಡು ನೀಂ ಮತಿಗೆ ಮಂಗಲವ ೪

ದಕ್ಷಯಜ್ಞವಿರೋಧಿ ಸುಜನಾ
ಧ್ಯಕ್ಷ ದುರ್ಮದಶಿಕ್ಷ ಕುಜನವಿ
ಪಕ್ಷ ಸಜ್ಜನಪಕ್ಷ ಗಗನಾಕಾರ ಬುಧರಕ್ಷ
ಅಕ್ಷಮಾಲಾಪೇಕ್ಷ ಯತಿತತಿ
ಯಕ್ಷವೃಂದಸುಪಕ್ಷಿತುರಗಕ
ಟಾಕ್ಷ ನಿಟಿಲಾಕ್ಷಜನೆ ನೀಂ ಕುಡು ಮಾತಿಗೆ ಮಂಗಲವ ೫

ಶ್ರೀಶಹಿತ ವಾಗೀಶನುತ ದೇ
ವೇಶಮುಖಸುಖದಾತ ಪರಮಾ
ಕಾಶಕೇಶವಿಕಾಸ ಗಣತತಿಭಾಸ ಭೂತೇಶ
ನಾಶರಹಿತ ದಿನೇಶಸುತಕೀ
ನಾಶಗರ್ವವಿನಾಶ ಮಹಾಯಾ
ಪಾಶಹರ ಪ್ರಭುರಾಯ ಕುಡು ನೀಂ ಕೃತಿಗೆ ಮಂಗಲವ ೬

ಹರನ ಸದ್ಯೋಜಾತವದನದೆ
ಬರುತೆ ವಿಶ್ವಂಭರದಿ ಚರಿಸುತ
ಸುರುಚಿರಾಜಿತಕೊಲ್ಲಿಪಾಕಿಯ ಲಿಂಗದೊಳಗುದಿಸಿ
ಭರದಿ ಭಕ್ತರ ಪೊರೆಯೆ ರಂಭಾ
ಪುರಿಯ ಪೀಠಾಚಾರ್ಯನೆನಿಸುತೆ
ಮೆರೆದ ರೇವಣಸಿದ್ಧನೀಯುಲಿ ಕೃತಿಗೆ ಮಂಗಲವ ೭

ಅನುಪಮಿತ ಶಿವ ವಾಮದೇವಾ
ನನದಲಾವಿರ್ಭವಿಸಿ ಸತ್ತ್ವವ
ನನುಸರಿಸಿ ಸುಕ್ಷೇತ್ರ ವಟ ಸಿದ್ಧೇಶಲಿಂಗದಲಿ
ಘನತರದಿನೊಗೆದಿರ್ಪ ಮರುಲಾ
ಧ್ಯನು ಯತೀಂದ್ರನಭೇದ ದಾರುಕ
ನನುಮತನು ತಾನೀಯುಲೆನ್ನಯ ಕೃತಿಗೆ ಮಂಗಲವ ೮

ಧರೆಯುಲಿಹ ವರರಾಮನಾಥೇ
ಶ್ವರಜನಿತ ಸಚ್ಚರಿತ ಸುಗುಣಾ
ಕರನಿಕರದೆ ಕೇದಾರಪೀಠಾಧ್ಯಕ್ಷತೆಯನಾಂತು
ಮೆರೆವ ರಾಮಕ್ಷೇತ್ರನಿಲಯಂ
ಹರನಘೋರಮುಖೋದ್ಭವಂ ಗುರು
ವರಮನೇಕೋರಾಮನೀಯುಲಿ ಕೃತಿಗೆ ಮಂಗಲವ ೯

ಹರನ ತತ್ಪುರುಷಾಸ್ಯದಿಂದ್ಯೆ
ತರುತೆ ಮೇದಿನಿಯೊಳಗೆ ತಾನಂ
ಪುರುತರದ ವರಮಲ್ಲಿಕಾರ್ಜುನಲಿಂಗದಿಂದುದಿಸಿ
ನೆರೆದ ಘೋರಾಟವಿಯಲಾ ಶ್ರೀ
ಗಿರಿಯ ಪೀಠಾಚಾರ್ಯನೆನಿಸುತೆ
ಮೆರೆದ ಪಂಡಿತಮೂರ್ತಿಯಿಾಯಲಿ ಕೃತಿಗೆ ಮಂಗಲವ ೧೦

ಪರಮಪುರುಷೇಶಾನವದನದಿ
ಬರುತೆ ಚಿನ್ಮುದ್ರಾಂಕಿತದಲುರೆ
ಮೆರೆದ ಕಾಶೀಪುರದ ವಿಶ್ವೇಶ್ವರನಲುದಯಿಸುತೆ
ಧರೆಯಲತ್ಯಾಶ್ರಮವನೊಂದುತ
ಗುರುಕುಲಾಂಬುಧಿಚಂದ್ರನೆನಿಸಿದ
ಕರುಣಿ ವಿಶ್ವಾರಾಧ್ಯನೀಯಲಿ ಕೃತಿಗೆ ಮಂಗಲವ ೧೧

ಹರನನುಜ್ಞೆಯನಾಂತು ಭಕ್ತೋ
ದ್ಧರಣಕಿಂಗಳಬಾಗವಾಡಿಯ
ಪುರದಿ ನಂದೀಶ್ವರವ್ರತಾಚರಣೆಯಲಿ ನೆರೆದಿರ್ದು
ಮೆರೆದಿರುವ ಮಾದಾಂಬಿಕಾ ಮಾ
ದರಸಸುತನೆಂದೆಸೆದ ಬಸವೇ
ಶ್ವರನೆ ಕರುಣಾಪಾಂಗ ಕುಡು ನೀಂ ಮತಿಗೆ ಮಂಗಲವ ೧೨

ಪರಮರೇಣುಕಗಿರಿಯ ತೊರೆದುರು
ನರಪಚೋಳನ ಪೊರೆಯೆ ವಿಶ್ವಂ
ಭರದೆ ವರಕಪಿಲಾಶ್ರಮದ ಪೊದರಿನಲಿ ನೆಲೆಗೊಂಡು
ಮೆರೆದನೆನೆ ಶಿವರಾತ್ರಿಗುರುವರ
ಶರಣವಾರಾಧಾರನಿರಲವ
ನಿರದೆ ಕರುಣಾವಾರ್ಧಿ ಕುಡುಗೀಕೃತಿಗೆ ಮಂಗಲವ ೧೩

ಈಶನಾಜ್ಞೆಯನಾಂತು ನೆರೆ ಧರ
ಣೀಶ ರಾಜೇಂದ್ರಾಖ್ಯಚೋಳ ನ
ರೇಶನಂ ಸಲಹುತೆ ಶಿಲಾಮಠದೊಳಗೆ ನೆಲಸಿರ್ಪ
ಕ್ಲೇಶಪಂಚಕನಾಶ ಶಿವರಾ
ತ್ರೀಶಕರಕಂಜಾತನೀಶಾ
ನೇಶ ಒಡೆಯಂ ಕುಡುಗೆ ಭರದಲಿ ಕೃತಿಗೆ ಮಂಗಲವ ೧೪

ಅಂಗಜಾತವಿಮೋಹಭಂಗ ಕು
ರಂಗಧರ ಸನ್ಮಂತ್ರಸದನಂ
ಸಂಗಮೇಶ್ವರಲಿಂಗಪೂಜಾಲೋಲ ಜಿತಕಾಲಂ
ಲಿಂಗವಾರರಮೂಲವರಿದು ನಿ
ರಂಗತುಂಗನ ಬೆರೆದ ಗುರು ನಿಜ
ಲಿಂಗದೊಡೆಯನು ಕುಡುಗೆ ಗುರುವರ ಕೃತಿಗೆ ಮಂಗಲವ ೧೫

ಮಲೆಯುಮಾವೇಶ್ವರನು ತಾನಂ
ದಿಲೆಯಸಂಚಾರವನು ತೊರೆಯುತ
ನಿಲುವೆ ನಾನಾಚಕ್ರಪುರಮಠದೆಡೆಯೆನುತ ನೆನೆದು
ಛಲದಲುರೆ ತಾನೈದೆ ರಾಗಿಯು
ಲಲಿತದಿಂ ಬೀಸೆನುತೊರೆದನೊಲಿ
ದೊಲಿದು ಕೃತಿಗಾ ಸಿದ್ಧನಂಜಂ ಕುಡುಗೆ ಮಂಗಲವ ೧೬

ತಿರೆಯಲುರೆ ಬೊಕ್ಕಳ್ಳಿ ಜನಚಯ
ಭರದಿ ಪರಿಹಾಸದಲಿ ನೆರೆ ಮುಂ
ದರಿಯುತುಕ್ಕಿನ ಕವಚವನು ತೊಡಿಸಲ್ಕೆ ಗ್ರಹಗಹಿಸಿ
ಮೆರೆಯುತಗಿನಿಯು ಕೊಂಡವನೆ ಹಾ
ದಿರುತೆ ವರದ ಮಹಾತ್ಮನೆನಿಸಿದ
ಗುರುವು ಕಪಿನೀನಂಜ ತಾಂ ಕೃತಿಗೀಗೆ ಮಂಗಲವ ೧೭

ನಿರತ ಕಪಿನೀನಂಜಮೂರ್ತಿಯು
ಕರಸರಸಿಜೋದ್ಭವ ದಯಾಕರ
ನುರು ಯಶೋನ್ವಿತಚರಿತ ಸದ್ಗುಣಭರಿತನವನಿರದೆ
ಚರಿತೆಯಿದನಾದರದಿ ಪೊರೆಯುತ
ಧರಣಿಯಲಿ ಪಸರಿಪವೊಲೆಸೆಯುತ
ಮೆರೆದ ಚೆನವೀರಾರ್ಯನೀಯಲಿ ಕೃತಿಗೆ ಮಂಗಲವ ೧೮

ಸಿದ್ಧಿಗುಣಗಣವೊಂದೆ ಕಾರ್ಯದ
ಸಿದ್ಧವಿಭುವಿನ ಪಾದಜಲವಿರ
ಲದ್ದಿ ದೇಹವ ಗುದ್ದಿ ಕಪಟವ ಬುದ್ಧಿಗಲಿತಿರುವ
ಶುದ್ಧಭಕ್ತೋದ್ಧರಣ ತೋಂಟದ
ಸಿದ್ಧಲಿಂಗಾನ್ವಿತ ವಿಲಾಸಂ
ಸಿದ್ಧಮಲ್ಲಾರ್ಯಂ ಕುಡುಗೆ ಮತ್ಕೃತಿಗೆ ಮಂಗಲವ ೧೯

ಗಿರಿಗುಹಾಂತರದೊಳಗೆ ಯೋಗದೆ
ಲಿರುತೆ ಭಜಕರ ಪೊರೆದು ನೆರೆದಾ
ವರಣಪುರಿ ಪಂಚಾಸ್ಯಪೀಠದಿ ಮಂತ್ರವಾದಿಗಳ
ಜರೆದು ಪರಮತವಾದಿಗಳನುರೆ
ಕರೆದು ಸುಮತಿಯನೊರೆದು ಮೆರೆದಾ
ಗಿರಿಯೊಡೆಯು ತಾನಿರದೆ ಕುಡುಗೀಕೃತಿಗೆ ಮಂಗಲವ ೨೦

ವೀರಶೈವಾಂಬುಧಿ ಶಶಾಂಕಂ
ಪಾರಮಾರ್ಥವಿಚಾರಪಾರಾ
ವಾರನನಘನುದಾರನನುಪಮಭಕ್ತಮಂದಾರ
ಭೂರಿಕಲ್ಮಷತಿಮಿರ ಮಿಹಿರಂ
ಧೀರವರಗುಣಮಾಲನುರೆ ಭಂ
ಡಾರಿ ಬಸವಪ್ಪೊಡೆಯು ಕುಡುಗೀ ಕೃತಿಗೆ ಮಂಗಲವ ೨೧

ಯೋಗನಿಷ್ಠಾಪರನ ಪರಿಕಿಸೆ
ರಾಗದೂಷಿತನಿಚಯಮೈದುತೆ
ನಾಗಮಿರಲಂದೊರ್ವ ಪಿಡಿದೊಳಪೊಗಿಸೆ ಕುಹಕದಲಿ
ಬೇಗದಲಿ ಬುಸುಗುಟ್ಟಿ ಬರುತಿಹ
ನಾಗರಾಜನ ಧರಿಸಿ ಮೆರೆದಾ
ಕೂಗಲೂರಿನ ನಂಜವಿಭು ತಾನೀಗೆ ಮಂಗಲವ ೨೨

ಲಸಿತ ಷಟ್ಸ್ಥಲಮಾರ್ಗ ನಿಷ್ಠಂ
ಭಸಿತಭೂಷಿತಗಾತ್ರ ಶಿಷ್ಟಂ
ಹಸದತುಲ ತ್ರಿವಿಧಮಾಯಾಪಾಶನಕಳಂಕಂ
ಅಸಮ ಶಿವಲಿಂಗಾಂಗಸಮರಸ
ವಿಸರ ಸೌಖ್ಯಾಶ್ರಯಗೃಹಂ ತಾ
ನೆಸೆವ ಗುರು ಘನಲಿಂಗಿಯೊಡೆಯಂ ಕುಡುಗೆ ಮಂಗಲವ ೨೩

ಪರಮಘನಲಿಂಗಿಯ ಕರಾಬ್ಜದಿ
ಬರುತೆ ಭರದಿಂ ಭಕ್ತಿವರ್ಗವ
ಪೊರೆದು ಸೋಮೇಶ್ವರನ ದೇಗುಲದಂತರಾಳದಲಿ
ಕರೆದು ಭುಜಗನ ಪಿಡಿದು ಕರದಿಂ
ದಿರದೆ ಕೊರಳಿಗೆ ಸುತ್ತಿ ಮಹಿಮಾ
ಕರನೆನಿಪ ಶಿವರಾತ್ರಿಗುರು ಕುಡು ಕೃತಿಗೆ ಮಂಗಲವ ೨೪

ನಿರತ ಶಿವರಾತ್ರೀಶ ಗುರುವರ
ಕರಕಮಲಸಂಜಾತನೆನಿಸುತೆ
ಪರಮಷಟ್ಸ್ಥಲಮಾರ್ಗಬೋಧಕನಾಗಿ ರಸೆಯೊಳಗೆ
ಶರಣಭಕ್ತನಿಕಾಯಮಿರಲಂ
ದೊರೆದು ಮೆರೆದಾ ಚೆನ್ನಬಸವೇ
ಶ್ವರ ಮಹಿಮ ತಾಂ ದಯದಿ ಕುಡುಗೀಕೃತಿಗೆ ಮಂಗಲವ ೨೫

ಪರತರಾಸ್ತಿಕಮತವ ತಾನು
ದ್ಧರಿಸಲೋಸುಗ ರಜತಗಿರಿಯಿಂ
ಬರುತೆ ಜಂಗಮತುಂಗ ಸತಿಗರ್ಭದಲಿ ತಾನುದಿಸಿ
ಗುರುವಿರಲು ತಾಂ ಚೆನ್ನಬಸವೇ
ಶ್ವರನವನಕರಜಾತನೆನಿಸುತೆ
ಮೆರೆದ ಗುರುನಂಜಾರ್ಯನೀಯಲಿ ಕೃತಿಗೆ ಮಂಗಲವ ೨೬

ಭೂತಲಾಧಿಪ ದೊಡ್ಡಕೃಷ್ಣ ಸು
ನೀತನಿರಲಾತನನು ನೆರೆ ಸಂ
ಪ್ರೀತಿಯಿಂ ಪರಸುತ್ತೆ ಮಹಿಮಾಗಾರನೆಂದೆನಿಪ
ಭೂತಲದಿ ಗುರುನಂಜ ಕರಸಂ
ಜಾತ ಗುರುವರ ಚೆನ್ನಬಸವ ಪು
ನೀತನಾದರದಿಂದ ನೀಡುಗೆ ಕೃತಿಗೆ ಮಂಗಲವ ೨೭

ಧರಣಿಯೊಳಗಾ ಚೆನ್ನಬಸವೇ
ಶ್ವರ ಗುರುವ ಕರಜಾತನೆನಿಸುತೆ
ಮೆರೆದ ರೇವಣಸಿದ್ಧ ವರಸತ್ಪಾತ್ರ ಸುಚರಿತ್ರ
ಪರಮಪಂಚಾಕ್ಷರಿಯ ಮಂತ್ರದಿ
ನರರಿಗೊದಗಿದಪಾರರುಜೆಗಳ
ಹರಿಸಿದಾ ಪಂಚಾಕ್ಷರೀಶನು ಕುಡುಗೆ ಮಂಗಲವ ೨೮

ಪರಮತದ ದುರ್ವಾದಿಗಳ ಗೆಲಿ
ದುರುತರದ ಸತ್ಕೀರ್ತಿಯೊಂದುತೆ
ಪುರಪುರದಿ ಬೋಧಿಸುತೆ ವೇದಾಗಮಪುರಾಣಗಳ
ಪರಿಪರಿಯ ವೇದಾಂತವಿವರವ
ನರುಹಿದಾ ಚಿದ್ಘನಶಿವಾಚಾ
ರ್ಯನು ಬಿಡದೆ ತಾನೀಯುತೆನ್ನಯ ಕೃತಿಗೆ ಮಂಗಲವ ೨೯

ವ್ರತನಿಯಮಸಂತುಷ್ಟಸಜ್ಜನ
ವಿತತಿನುತಪದಶಿಷ್ಟ ದುರ್ಜನ
ಗತಿನಿವಾರಣ ಸುಗತಿದಾತ ಯಶೋಭರಿತ ನಿರತ
ಜಿತಮದನ ಹತಕಾಲ ಪೂಜಾ
ರತವಿಶಾರದ ಮಂತ್ರಯುತ ಸ
ನ್ಮತಿಯ ಚೆನವೀರಾರ್ಯನೀಯಲಿ ಕೃತಿಗೆ ಮಂಗಲವ ೩೦

ನರಪ ಮುಮ್ಮಡಿ ಕೃಷ್ಣರಾಜಂ
ಗೊರೆದು ರಂಭಾಪುರಿವಿಚಾರವ
ಪೊರೆದು ಪರಮಾಚಾರ್ಯರೀರ್ವರ ಚಿತ್ತದಭಿಮತವ
ನರೆದ ಶೈವಮತಾಚರಣೆಯಂ
ತೊರೆದರನಿಬರ ಶಿಕ್ಷಿಸಿದ ವರ
ಗುರು ಮಹಾಂತಾರ್ಯನು ಕುಡುಗೆ ತಾಂ ಕೃತಿಗೆ ಮಂಗಲವ ೩೧

ಶೀಲಧರ್ಮಾಚರಣರತ ಭೂ
ಪಾಲಹಿತ ಗಣವಾರದುರ್ಜನ
ಕಾಲ ಸುಮತೋದ್ಗ್ರಂಥಮಾಲಾಜಾಲಪರಿಪಾಲ
ಕಾಲಗತಿಸದ ಪಾಲ ನಿಯಮಾ
ಲೋಲನಿರದೆ ಮಹಾಂತದೇಶಿಕ
ಬಾಲಕಂ ಗುರುಸಿದ್ಧಲಿಂಗಂ ಕುಡುಗೆ ಮಂಗಲವ ೩೨

ನೆರೆ ವಿರಾಜಿತ ಸಿದ್ಧಲಿಂಗನ
ವರಕರಾಂಭೋಜಾತಜಾತಾ
ವರಣಪುರಿ ಪೀಠಾಧಿಪಂ ತಾನುರುವಿಭಾವದಲಿ
ಪುರದಿ ರುಜೆಯಿರೆ ಕೆಡಿಸಿ ವೃದ್ಧರ
ಕರೆದು ನೀತಿಯನೊರೆದನೀಯಲಿ
ಮೆರೆದ ಮುಪ್ಪಿನಮೂರ್ತಿ ಶಿವರಾತ್ರೀಶ ಮಂಗಲವ ೩೩

ಆದಿಗುರು ಶಿವರಾತ್ರಿವರ್ಯನ
ಭೇದ ಶಿವಶಂಕರನನುಜ್ಞಾ
ಸಾಧನಾಲಯನುದಿಸುತಾ ಸುತ್ತೂರ ಪೀಠದಲಿ
ಪಾದವಿರಿಸಿದನೆನಲೆಸೆದು ಗುರು
ವಾದ ಶಿವರಾತ್ರೀಶನುರುತರ
ವೇದವಂದಿತನೀಗೆ ಸಂತತ ಕೃತಿಗೆ ಮಂಗಲವ ೩೪

ಫಾಲನೇತ್ರಪದಾಬ್ಜಪೂಜಾ
ಲೋಲ ಶಿವರಾತ್ರೀಶ ಸದ್ಗುರು
ಬಾಲ ರಹಿತವಿರೋಧದಂಭ ವಿಶಾಲಗುಣಸಾಂದ್ರ
ಶೀಲಗೃಹ ಗೀರ್ವಾಣವಿದ್ಯಾ
ಜಾಲ ಶಾಲಾಬಾಲಚಯ ಪರಿ
ಪಾಲನೀಯಲಿ ಶುಭವನಾ ಶಿವರಾತ್ರಿರಾಜೇಂದ್ರ ೩೫

ಚಾರುತರ ಡನುಗೂರಗುರು ಚಿಕ
ವೀರದೇಶಿಕಹಸ್ತಜಾತ ವಿ
ಚಾರಪರ ಮಹಿಶೂರಸಚಿವ ಷಡಕ್ಷರಾರ್ಯ ವಿಭು
ಸಾರಕವಿತಾರಸವಿಶಾರದ
ಧೀರ ವಿಬುಧಾನೀಕಸೇವ್ಯನಾ
ವೀರಶೈವವಿನೋದ ನೀ ಕುಡು ಕೃತಿಗೆ ಮಂಗಲವ ೩೬

ಧರೆಯುಲಾಂಗಿರಸಾಬ್ದ ತಾನುರೆ
ಬರಲು ಬೆಳ್ವಕ್ಕವಿರೆ ಸಾವಣ
ನೆರೆದೆ ಸತ್ತವೆನಿಸಿವಗೆಯನುರುವಾಸರದೆ ಜಸದೆ
ಸುರುಚಿ ಕೇತನಪುರಿನಿಲಯ ಸ
ತ್ಕರುಣಿ ಸಿದ್ಧಾರ್ಯನ ಸುಧರ್ಮದ
ಪರಮಸಂಸ್ಕೃತಪಾಠಶಾಲಾಭ್ಯುದಯ ರಂಜಿಸಿತು ೩೭

ಖ್ಯಾತ ಕಾರ್ಯದ ಮಠದ ವೇದಾ
ತೀತ ಪ್ರಭುವರ ಸುಕರವಾರಿಜ
ಜಾತ ಹಿತರತ ವೀರಶೈವಾಚಾರ ಗುಣರತ್ನ
ಕೇತನೂರಿನ ಸಿದ್ಧಲಿಂಗ ಸು
ನೀತ ರಚಿಸಿದ ಪಾಠಶಾಲಾ
ನೀತನೆನೆ ರಾಜಿಸಿದನಾ ಶಿವರಾತ್ರಿಗುರುಮೂರ್ತಿ ೩೮

ವೇದಶಾಖಾಚಯದಿ ಪರಮಾ
ಮೋದ ಶಾಸ್ತ್ರವರಾನ್ವಿತದಿ ಸ
ದ್ಬೋಧನಾಕ್ರಮಶೀಲ ವಿದ್ವತ್ತ್ವವರಸಂಕುಲದಿ
ಸಾಧು ಸುಸಭಾಕಲ್ಪತರುವೀ
ಮೇದಿನಿಯಲುರೆ ಬೆಳೆದು ಶಾಲಾ
ಸಾಧನಾಕ್ರಮ ಫಲವನೀಯಲಿ ಗುರುವಿನಾಶಿಷದಿ ೩೯

ಅಂದು ಸುಸಭಾಮಧ್ಯೆ ಸಹನದಿ
ನಿಂದು ಸಿದ್ಧಾರ್ಯಾಖ್ಯನು ಯಶೋ
ಮಂದಿರರ ಸುತ್ತೂರಪೀಠಾಧಿಪರ ಕಥನವನು
ಇಂದು ಬೋಧಿಸೆನುತ್ತೆ ಕರಮುಗಿ
ದಂದು ಗುರುಶಿವರಾತ್ರಿಯೊಡೆಯನ
ಮುಂದರುಪಲವನೆನಗೆ ಬೆಸಸಿದ ರಚಿಸೆ ಚರಿತೆಯನು ೪೦

ಬಸವರಾಜಾಭಿದ ವಿಬುಧ ತಾ
ನಸಮಕಥನಾರಚನನಿರೆ ನೆರೆ
ದುಸಿರೆ ವಿಲಸಿತಮಾನಸದಿ ಶಿವರಾತ್ರಿಗುರುವಿದಿರೆ
ಎಸೆವ ಕವಿಸಂಗಾರ್ಯನಿದನುರೆ
ರಸಭರಿತದಿಂ ರಚಿಸೆ ಗುರುವಿನ
ಪೆಸರ ನುತಿಸುತ ಬರೆದ ಶಿವರಾತ್ರೀಶ್ವರನ ದಯದಿ ೪೧

ನರಪ ನಾಲ್ವಡಿಕೃಷ್ಣಭೂಪನ
ಸುರುಚಿರ ಸಭಾಸ್ಥಾನ ವಿಬುಧಾ
ವರಣವಿರೆ ತನ್ಮಧ್ಯೆ ಕವಿಕುಲರತ್ನನೆಂದೆನಿಸಿ
ಸರಸರಾಜಕವೀಂದ್ರಭೂಷಣ
ಬಿರುದಿನಲಿ ಮಹಿಶೂರೊಳಿರುತುರೆ
ಮೆರೆವ ಚಿಕಲಿಂಗೇಂದ್ರನಾಜ್ಞೆಯಲೊರೆವೆನೀ ಕೃತಿಯ ೪೨

ಶ್ರೀಮಹಾಬಲಶೈಲವಾಸಿನಿ
ಸೋಮಧರನರ್ಧಾಂಗಭೂಷಿಣೆ
ಚಾಮಭೂಪಾರ್ಚಿತೆ ವಿಮೋಹಿನಿ ಸುಗುಣೆ ಕಲ್ಯಾಣೆ
ಕೋಮಲಿನಿ ಜಂಭಾರಿಪೋಷಿಣೆ
ಕಾಮಿತಾರ್ಥವರಪ್ರದಾಯಿನಿ
ಪ್ರೇಮಿ ಚಾಮುಂಡಾಂಬೆ ಕುಡು ನೀಂ ಕೃತಿಗೆ ಮಂಗಲವ ೪೩

# ಶಿವರಾತ್ರೀಶಕಥನಂ

ಚಾರುತರ ಸದ್ಬೋಧಸೂತ್ರವಿ
ಚಾರ ಜೀರ್ಣೋದ್ಧಾರ ನೆರೆ ಸು
ತ್ತೂರು ಸಿಂಹಾಸನವ ಶಿವರಾತ್ರೀಶ ವಿರಚಿಸಿದ

ಮಂಗಳಾಂಗ ನಿರಂಗ ವರ ಸಾ
ರಂಗಧರ ಧವಳಾಂಗ ಕರುಣಾ
ಪಾಂಗ ಗಿರಿಜಾರ್ಧಾಂಗ ನಂದಿತುರಂಗ ಶಿವಲಿಂಗ
ಅಂಗಜನ ಮದಭಂಗ ಗರುಡ ತು
ರಂಗಸಖ ಮುನಿಸಂಗನುರು ಶಿವ
ಗಂಗೆಯಾ ಗಂಗಾಧರನೆ ಕುಡು ಮಂಗಳೋನ್ನತಿಯ ೧

ಆಲಿಸೆಲೆ ಗುರುಭಕ್ತ ಕೀರ್ತಿವಿ
ಶಾಲ ಸಿದ್ಧಾರ್ಯಾಖ್ಯ ಸುತತ್ತೂ
ರಾಳಿಕೆಯ ವಿಸ್ತಾರಚರಿತೆಯನೊರೆವೆ ನಾನೆನುತ
ಶೀಲ ಶಿವರಾತ್ರೀಶ ಮಹಿಮೆಯ
ಪೇಳಿದನು ಶಿವರಾತ್ರಿಗುರು ಗಣ
ಜಾಲ ಸತ್ಕಾಲೋಲ ನೆರೆದ ಸಭಾಂತರಾಳದಲಿ ೨

ಸ್ಥಾಣುಪಾದಾಂಭೋಜಭೃಂಗಧು
ರೀಣ ವಾಣೀಸದನಭಕ್ತ
ತ್ರಾಣ ವೇದನಿನಾದಬೋಧವಿಧಾನ ಸಾಧುಚಯ
ರೇಣುಕಾಚಾರ್ಯಾಖ್ಯಪಾದದ
ರೇಣುವಹ ಶರಣಂಗೆಸೆದುದಾ
ರೇಣುಕಾಂಶಮದುದಿಸಿ ಶಿವರಾತ್ರೀಶನಾಮದಲಿ ೩

ಪರಮಗುಣಗಣ ನೆರೆಯೆ ಸುನಯಾ
ಭರಣರಸನೆಯ ಬೆರೆಯೆ ಚಿಂತಾ
ಹರಣ ನುತಿಯದು ಮೊಳೆಯೆ ಬೇಸರಮುಸವಸದಿ ಸರಿಯೆ
ಕರುಣ ಲೋಭವ ಜರಿಯೆ ಸುಜನರ
ಗರುಡಿ ಪೊಂಪುಳಿಗರೆಯೆ ವಿಲಸಿತ
ಚರಣಸಂಚಲ ಮುಂಬರಿಯೆ ಶಿವರಾತ್ರಿಗುರು ಹೊರಟ ೪

ಒಂದುದಿನದಿ ವಿರಾಗಮೂರ್ತಿಯು
ಸುಂದರದ ನಿಲ್ದಾಣದಲಿ ಲಸ
ದಿಂದುಧರನುತಿಯಿಂದೆ ಶಯನಿಸಿರಲ್ಕೆ ರೇಣುಕನು
ಬಂದು ಮಂತ್ರವ ಬೋಧಿಸುತಲಾ
ನಂದದಿಂ ಧರಿಸುತಲಿ ಭಸಿತವ
ಮುಂದೆ ಬಾರೆಲೆ ಕಂದ ರೇವಣಸಿದ್ಧಗಿರಿಗೆಂದ ೫

ಎಂದೆನುತೆ ಮರೆಯಾಗೆ ರೇವಣ
ನಂದು ಶಿವರಾತ್ರೀಶ ಯೋಗಾ
ನಂದದಲಿ ಸುದರ್ಶಿಸುತಲಾ ರಾಮನಾಥನನು
ಕಂದೆರೆದು ಪಯಣದಲಿ ಮನವಿಡು
ತೊಂದು ಯಾತ್ರಾನಂದಿ ಹಿಮಗಿರಿ
ಯೊಂದಿದಾ ಕೇದಾರದೇವಾಲಯಕೆ ನಡೆತಂದ ೬

ಸದಮಲನ ಕೇದಾರನಾಥನ
ಮುದದಲಂದೀಕ್ಷಿಸುತಲಾತನ
ಪದಕಮಲಯುಗಕೆರಗಿ ರಾಮಕ್ಷೇತ್ರವಂತರದಿ
ವಿದಿತಮನೆ ಭಕ್ತಿಯ ಸಮರ್ಪಿಸಿ
ಮೃದುಸುಭಾಷ ವಿಕಾಸನೆಸೆಯುತ
ಬಿದಿಯ ನಿಯಮದಿ ಬಂದನಾ ಕಲ್ಯಾಣಪುರದೆಡೆಗೆ ೭

ನೂರೆಯ ಕರೆಯಿಹ ತೊರೆಯ ದಾಂಟುತ
ಚರಿಸುತುರೆ ಕಂಟಕವ ಮಿಾಂಟುತ
ಲುರುತರದ ಪುಟಭೇದನವ ತಾನಿರದೆ ಹೊರಹೊರಟು
ಪರಿಲಸಿತ ರುದ್ರಾಕ್ಷಧಾರಣ
ನಿರಘನುತ್ತಮಕಾಂತಿಪೂರಣ
ವಿರತಿಯಿಂದೈತಂದ ರೇವಣಸಿದ್ಧಗಿರಿಯೆಡೆಗೆ

ಗಿರಿಯನೇರಿ ವಿಚಾರಿ ರೇಣುಕ
ಗುರುವರಾಂಘ್ರಿಯ ಕೋರಿ ಸಿದ್ಧೇ
ಶ್ವರಮನೋಂಬುಜಹಂಸ ಸಗುಣವ ಮೀರಿ ಕುಹರದಲಿ
ಕರುಣೆ ಹಿತಸಹಕಾರಿ ಸೇರಿ ವಿ
ತರಣೆ ದುರಿತವ ತೂರಿ ಸಮುದಿತ
ಪರಿಣತಾಂತಃಕರಣ ಯೋಗಾನಂದದಿಂದೆಸೆದ ೯

ಪೂರಕದಿ ರೇಚಕವನೊಂದಿಸಿ
ಸೇರಿಸುತಲವ ಕುಂಭಕದಿ ನೆರೆ
ಸಾರಿ ಮುಂದಾ ಪಾಂಥದಿ ವಿರಾಜಿಪ ಮರಾಳನನು
ಕೋರಿ ಷಷ್ಠ್ಯವ ಬೀರಿ ಮಾರುತನ
ಮೀರಿ ನಿಜದುಯ್ಯಾಲೆಯಲಿ ತಾ
ನೇರಿ ತೂಗಾಡಿದನು ಶಿವರಾತ್ರೀಶಗುರುನಾಥ ೧೦

ಅಂಬರದ ಕಾಸಾರದಲಿ ನೆರೆ
ತುಂಬಿದ ಸುಧಾಸಾರಜಲದಲಿ
ಸಂಬುಮೆಂಬಾ ರಾಜಹಂಸ ವಿಹಾರದಿಂದೆಸೆಯೆ
ನಂಬುತವನ ಪದಾಂಬುಜವ ನೆನೆ
ದಂಬುವಿಲಿ ನಿರುಕಿಸುತ ತೇಜೋ
ಬಿಂಬವಿರೆ ಶಿವರಾತ್ರಿಗುರುಮಾನಂದಮಯನಾದ ೧೧

ಆರುಬೆಟ್ಟವನೇರಿ ಲಲಿತದಿ
ಸಾರಿರೆ ಚಿದಂಗನೆಯು ತಾನೊಂ
ದಾರತಿಯು ಬೆಳಗುತ ವಿಲಾಸದಿ ನುತಿಸೆ ಮುಂದಣಡ
ದಾರಿಯನು ಸವೆಯಿಸುತ ಸುಸಹ
ಸ್ರಾರಚಕ್ರಾವಾಸಿನಿಯನೋಂ
ಕಾರರೂಪೆಯನೀಕ್ಷಿಸಿದ ಸುಜ್ಞಾನನೇತ್ರದಲಿ ೧೨

ಗಂಗೆ ಯಮುನೆ ಶತದ್ರುನದಿಗಳ
ಸಂಗಮದುಲರೆ ಮುಳುಗಿ ಪರಮನಿ
ರಂಗವಸನವನುಡುತ ಚಿದ್ಭಸ್ಮವ ಧರಿಸಿ ಭರದೆ
ತುಂಗಮಾದಾ ದ್ವಿದಳಸದನದ
ರಂಗುಮಂಟಪದೊಳಿಹ ಸುಮಹಾ
ಲಿಂಗಮೂರ್ತಿಯ ಪೂಜಿಸಿದ ಗುರುರಾಜನರ್ತಿಯಲಿ ೧೩

ನೀಲಗಿರಿ ಮಧ್ಯದಲಿ ರಾಜಿಸು
ವಾಲಯದಿ ಗಿಳಿಮರಿಯದೊಂದಿರೆ
ಲೀಲೆಯಿಂದದ ಪಿಡಿವೆನೆಂಬ ಕುತೂಹಲದಿ ಬೆರೆದು
ಕಾಲವನೆ ಮುಂದರಿಸದಲೆ ಸುವಿ
ಶಾಲಭಕ್ತಿಯ ಬಲೆಯ ಬೀಸುತ
ಶೀಲಗುಣದಿಂ ಪಿಡಿದ ಶಿವರಾತ್ರೀಶಶಬರಾಖ್ಯ ೧೪

ಒಂದುದಿನ ಗುರುವರ್ಯ ಯೋಗಾ
ನಂದದಿಂದೋದಿಸಲು ವಾಸದ
ಮಂದಿರದಲಾ ಕುಂಭಸಂಭವವಿನುತನೊಲವಿಂದೆ
ಬಂದು ಕಪಿಲಾನದಿಯ ತೀರದಿ
ನಿಂದು ನೀನುಪಪೀಠವನು ರಚಿ
ಸೆಂದೊರದು ಮುಂದಣವಿಚಾರವ ಸಿದ್ಧನರುಪಿದನು ೧೫

ವೀರಶೈವಾಗಮವಚೋನ್ನತ
ಸಾರತರಸುತಪ್ತಾರಸೂತ್ರ ವಿ
ಚಾರಮಳಿದುದರಿಂದೆ ಕಲಿಯುಗಮಹಿಮೆಯಿಂ ಜಗದಿ
ಧೀರ ಜೀರ್ಣೋದ್ಧಾರಗೆಯ್ದದ
ಧಾರಿಣೆಯಲಲ್ಲಲ್ಲೆ ನೆರೆ ವಿ
ಸ್ತಾರಕಥನವ ಪಸರಿಪುದು ನೀನೆಂದನಾಚಾರ್ಯ ೧೬

ಚತುರ್ಯುಗ ಪಥಗತ ಸುಸೂತ್ರದ
ಮತವನನುಸರಿಪುದು ನಿನದು ಸಲೆ
ಕ್ಷಿತಿಯಲಾದರಗುಣದಲಾ ಸುತಪ್ತಾರಸೂತ್ರವನೆ
ಹಿತದಿ ಮುನ್ನಡಿಸುತ ಧರೆಯಲಭಿ
ಮತವನೊದವಿಸಿ ಮರ್ತ್ಯನಿಚಯಕೆ
ಜಿತಮನವನೆಸಗೆನುತೆ ತಾಂ ಮೈಗರೆದನಾಚಾರ್ಯ ೧೭

ಇದನರಿದು ಯೋಗದಲಿ ಚಂಚಲ
ಮದುವೆಯೊದವಿರೆ ತೊಳೆದು ಸುಗುಣಾ
ಸ್ಪದ ನಿವಾಸದಿ ಬೆರೆದು ವರ್ಗಗಳಾರನುರೆ ಜರಿದು
ಮದಗಳೆಂಟನು ಮುರಿದು ರೇವಣ
ಪದಯುಗವ ತಾ ನೆನೆದು ತಾನುರೆ
ಬಿದಿಯ ಬರಹವನಳಿಸಿ ಶುಭಕಾಲವ ನಿರೀಕ್ಷಿಸಿದ ೧೮

ಇಂತು ಶಿವರಾತ್ರೀಶನಿರೆ ಭೂ
ಕಂತುವಾ ರಾಜೇಂದ್ರಚೋಳನ
ನಂತಭೂಷನ ದಯದಿ ಗತಿಚತುರವಿರೆ ತಾನರಿದು
ಚಿಂತಿತಾರ್ಥಪ್ರದನು ಮೋಕ್ಷದ
ಹಂತನನುಪಮರೇಣುಕಾರ್ಯನ
ದೆಂತು ದೊರೆವನೆನುತ್ತೆ ನಿದ್ರಾಂಗನೆಯ ಕೈವಿಡಿದ ೧೯

ಮಾಧ್ಯಮಿಕದೆಡೆಯೊಳಗೆ ಪರಮಾ
ರಾಧ್ಯ ರೇವಣಸಿದ್ಧನತುಲಿತ
ಬೋಧ್ಯನೆಡೆಗೈತಂದು ಸದ್ಯೋಜಾತಸಂಭೂತ
ಸಾಧ್ಯಮಪ್ಪುದು ನಿನಗೆ ಗುರುವಿಗೆ
ಸಾಧ್ಯಕಾರ್ಯಮಿದಲ್ಲ ಪರಮನ
ಬಾಧ್ಯನಲ್ಲವೆ ಬಾರ ರೇವಣಸಿದ್ಧಗಿರಿಗೆಂದ ೨೦

ಎಂದು ಮರೆಯಾಗಲ್ಕೆ ರೇಣುಕ
ನಂದೆ ಭರದಿಂದೆಳ್ದು ನಿತ್ಯಾ
ನಂದಿಯಹ ಗುರುಮೂರ್ತಿಯನು ನೆರೆ ಕಾಂಬ ತವಕದಲಿ
ಚಂದಮಾದರಿಪಿಂದ ನಿರುಕಿಪೆ
ನೆಂದು ಭೂವರ ಬೇಂಟೆಯಾ ನೆಪ
ದಿಂದಲುರೆ ಪೊರಡಲ್ಕೆ ಮಾನಸಕಿತ್ತು ಬರವಸವ ೨೧

ಪುರದಿ ಮನುಜರು ನೆರೆಯೆ ಪಡೆ ಮುಂ
ಬರಿಯೆ ಹಿತರಂದರಿಯೆ ದುಂದುಭಿ
ಮೊರೆಯೆ ವಿಮಲಾಕರಯಶೋದಯ ಮೆರೆಯೆ ಸುಮಸುರಿಯೆ
ಬೆರಸುತಾ ಬಿರುದಾವಳಿಯು ಭೂ
ವರನ ಬಳಸಿರೆ ಚೋಳರಾಜನು
ಪರಮತುರಗವನೇರಿ ವಿಪಿನದಿ ಭರದಿನೈತಂದ ೨೨

ಅಂದು ಗಜರಥವಾಜಿ ಸಂಕುಲ
ಮುಂದೆ ಬರೆ ಹಿಂದಿರೆ ನೃಪೋತ್ತಮ
ಬಂದು ಪಯಣವೆ ವರಪದಾತಿನಿಕಾಯಗಹನದಲಿ
ಬೆಂದು ಬೆಂಡಾದುದು ವಿಭಾಕರ
ನಿಂದೊಗೆದ ಸಾಸಿರದ ಕಿರಣದೆ
ನೊಂದು ಪಥದಲಿ ನಿಂದುದಂದಾ ತೃಷೆಯ ತವಕದಲಿ ೨೩

ಚರಿಪುದೊಂದೆಡೆ ರೇವಣಾರ್ಯನ
ಗಿರಿಯುದೊಂದೆಡೆ ತಣ್ಪನೆಸಗುವ
ಸರಸಿಯೊಂದೆಡೆ ದೈವವೊಂದೆಡೆಯಾಗಲಂದಿನಲಿ
ಪರಿಕರವು ಬಳಲುತಿದೆ ಮುಂದಿನ
ಪರಿಯನದನೇನೆಂಬೆ ಶಿವ ಶಿವ
ಮರವೆ ದೊರಕಿದುದಲ್ತೆ ನಿರುಕಿಸಲೆಂದ ಭೂಪಾಲ ೨೪

ಏಸುದೂರವು ಸವೆಯೆ ನಡೆಯಿಂ
ದೀಸು ನೀರಿಲ್ಲದಿರೆ ನೃಪಗಾ
ಭಾಸವೊದಗಲು ಮುಂದೆ ನೆರೆ ನಿಲ್ವಾಣದಾಸೆಯಲಿ
ವಾಸನಾಬಲದಿಂದ ಶೈಲವಿ
ಲಾಸಕುರುಪದಸರಿವೆನೆನುತಂ
ದಾ ಸಮಯದಲಿ ಬಂದ ರೇವಣಸಿದ್ಧಗಿರಿಯೆಡೆಗೆ ೨೫

ಬರುತಲಂದಾ ಗಿರಿಯ ತಪ್ಪಲ
ಸರಿಸದಲಿ ಗೂಡಾರ ಪೊಡೆಯಿಸಿ
ಸರಸಿಯಲಿ ನೀರಡಿಕೆಯನು ಕಳೆದುಳಿದು ದುಗುಡವನು
ಗುರುವರನು ರೇಣುಕನು ತಾಂ
ದೊರೆದುದನೆ ನೆನೆನೆನೆದು ತನ್ನಂ
ತರದಿ ಜಪಿಸುತಲಿರ್ದನಾತನ ಚೋಳಭೂಪಾಲ ೨೬

ವೃಜಿನನಿಚಯಧ್ವಂಸ ಸುರುಚಿರ
ಸುಜನಸಾರಸಹಂಸ ಪರತರ
ಭಜಕಪೂಜಿತನಕ್ಷಮಾಲಾಭರಣ ಶಿವಶರಣ
ಭುಜಗಭೂಷಣರೂಪ ಚಿನ್ಮಯ
ನಿಜಸುಬೋಧಕಲಾಪ ಸನ್ಮಯ
ತ್ರಿಜಗದೀಡಿತಚರಣ ಶಿವರಾತ್ರೀಶನೆಸೆದಿರ್ದ ೨೭

ಸಾರವಾದಾಧಾರದಲಿ ನೆರೆ
ಸೇರಿ ತಾಂ ಸ್ವಾಧಿಷ್ಠನೆಲೆಯಿರೆ
ತೂರಿ ಮುಂದಿನ ದಾರಿಯಿರೆ ಮಣಿಪೂರಕವ ಮೀರಿ
ಹಾರುತಂದೆಯನಾಹತಕೆ ಸಹ
ಕಾರಿಯೆನಿಸಿ ವಿಶುದ್ಧಿಗಾಜ್ಞಾ
ಗಾರವೇರಿ ವಿರಾಜಿಸಿದ ಶಿವರಾತ್ರಿಗುರುನಾಥ ೨೮

ಅನಿತಗಲಿ ರಾಜೇಂದ್ರಚೋಳಾ
ವನಿಪ ಭೂಧರಪಥವನೀಕ್ಷಿಸಿ
ಘನಗುರುವ ನೆನೆದಂವ ಪುಸರಿಸ ಪಥವನನುಸರಿಸಿ
ಮನಸಿಜಾರಾತಿಯ ನೆನೆದು ಸಲೆ
ಜನಪನುಳಿದು ವಸುಂಧರೆಯ ತಾ
ನನುಗೊಳಿಸಿ ಗಿರಿಯೇರಿ ಮೆರೆದನು ಕರದ ವಾಜಿಯಲಿ ೨೯

ನೆರೆದು ಭೀಮೇಶ್ವರನ ಸರಸಿಯು
ಸರಿಸಕುಹರದಲಿರುವ ಯೋಗೀ
ಶ್ವರನ ಸಂದರುಶನದಿ ಕರಗಳ ಮುಗಿದು ಭೂಪಾಲ
ತುರಗಮದನುರೆ ಬಂಧಿಸದೆ ಪದ
ಕೆರಗಿ ಪರಮಾನಂದದಲಿ ನಿಜ
ಶರಣ ನಿಂದಿರ್ದನು ಯಶೋಭರಿತಾಂಗ ಲಲಿತಾಂಗ ೩೦

ನಿಲುತೆ ಬಹಿರಾವರಣದಲಿ ಗುರು
ಕಲೆಯುನವಲೋಕಿಸುತ ಕನಸಿನ
ಸಲುಗೆಯುವನೆಂದರಿದು ನಾನಾವಿಧದ ನುತಿಯಿಂಪ
ಸುಲಲಿತವಲಾ ಮುಕುಳಿತಾಲಿಯು
ಸಲೆ ಸೊಬಗನಾಂತಿಳೆಯುರಸನವ
ತಲೆಯು ತೂಗುತೆ ಜಪವ ಪೊಗಳಿದನಾಗ ಗುರುವರನ ೩೧

ಗುರುವೆ ನಿತ್ಯಾದರವೆ ಸುಖಪದ
ದಿರುವೆ ಗುಣಮಣಿಸರವೆ ಗತಿಮಂ
ದಿರವೆ ಸಂಪದದರಿವೆ ನತಜನಫಲಿತಸುರತರುವೆ
ತಿರೆಯುಲೊದಗಿದೆ ಮರವೆಯಾಸಂ
ತಿರುವೆ ನೀನೇನೊರೆವೆ ಬೋಧಿಸೆ
ಕರೆವೆನುದ್ಧರಿಸಲ್ಕೆ ಕಣ್ದೆರೆಯೆಂದ ಭೂಪಾಲ ೩೨

ತುರಗಮಂದನಿತರಲಿ ತನ್ನಯ
ಶಿರವಿಳುಹಿ ವಿನಮಿಸುತೆ ಸದ್ಗುರು
ವರಪದಾಂಭೋಜಾತಯುಗ್ಮವನರಿದು ಹೂಂಕರಿಸೆ
ತೆರೆದೆರಡುಕಣ್ಗಳನು ಯೋಗೀ
ಶ್ವರ ವಿಶಾಲಯಶೋದಯನು ತಾ
ನಿರದೆಯಾಶೀರ್ವದಿಸಿ ಕುದುರೆಯನೀಕ್ಷಿಸುತೆ ನೃಪನ ೩೩

ಹರಸಿ ನೀರಿ ಬಾರೆನುತ ಕರೆಯು
ಲ್ಕಳಸ ಚೋಳಾವನಿಪನಿವನೆಂ
ದೊರೆಯುತಿದೆ ಲೋಕದಿ ವಿಲಾಸದಿ ಜನನಿವಹ ಹಿತದಿ
ಗುರುವ ಕರುಣಾಮೃತರಸವ ಸವಿ
ದುರುಪದವನೊಂದಲ್ಕೆ ಬಂದನ
ಕರೆವರಾ ರಾಜೇಂದ್ರಚೋಳಾಭಿದವನವನಿಯಲಿ ೩೪

ಇಂದು ಮುಕುತಿಯ ಬಯಸಿ ನಾನೈ
ತಂದೆ ವರಗುರುದೇವ ಕನಸಿನ
ಲಂದೆ ನೀನುರೆ ಬಂದು ಪೇಳ್ದುದರಿಂದೆ ಬಲಗೊಂಡು
ನಿಂದಿರುವೆ ಬಕುತಿಯಲಿ ಯೋಗಾ
ನಂದಿ ನತಜನಬಂಧು ನೀಂ ಕಾ
ಯೆಂದೆರಗಿ ಚರಚರಣಸಾರಸಕಾತನಿಂತೆಂದ ೩೫

ತಂದೆ ಕಾಶೀನಾಥ ಯಮಿವರ
ಗಂಧೊರೆದ ಪರಿಯರಿವೆ ನಾಂ ಕನ
ದಿಂದುಧರನುರುಕೃಪೆಯದೆಂತುಟೊ ಕಾಣೆ ವಸುಧೆಯಲಿ
ಮುಂದೆ ಬಹ ಕುರುಪರಿವರಾರೀ
ಚಂದವಾದ ಜಗತ್ತ್ರಯದಿ ನೀಂ
ಬಂದುದಕೆ ನಾನೊಲಿದೆನೆಂದಭಿಮತವನೊರೆದಿರ್ದ ೩೬

ಅರಸ ಕೇಳಾದರದೆ ನಿನಗಿಪ
ಪರಿಯರಿದೆ ಯೋಗದಲಿ ಸದ್ಗತಿ
ದೊರೆಯಲಾರದು ಗಿರಿಯಿದರಲುರೆ ಮುಂಪಯಣದಿರುವ
ತುರಗಮಿದರಿಂದರಿವೆ ನೀನೈ
ತರುವೆ ಕಪಿಲಾನದಿಯ ತೀರದ
ಲೊರೆವೆ ಮಂತ್ರವ ಬಾರೆನುತ ಮೈಗರೆದ ಗುರುನಾಥ ೩೭

ಅಂದು ಮರೆಯಾದಂ ನೆರೆ ಚಿದಾ
ನಂದ ಹೃದಯಂ ಗಿರಿಯ ಮೇಲ್ಗೈ
ತಂದು ಭೂವರತಿಲಕ ಬೆಕ್ಕಸವಾಂತು ಪಿಂದಿರುಗಿ
ನಿಂದು ಮೂಗಿನಬೆರಳಿನಲಿ ಸಾ
ನಂದದಿಂ ಗುರುವಿಟ್ಟ ಪೆಜ್ಜೆಯ
ನೊಂದುತಾಗಲೆ ಬಂದನಂದಾತುರದ ಮನದಿಂದ ೩೮

ತುರಗಮಿರದೇರುತೆ ಮಹೀಧ್ರುವ
ಚರಿಸುತಂದೋಡುತ ಪದಾಂಕದಿ
ಮರಳಿ ತಾಸಿದ್ದೆಡೆಗೆ ಬರಲಂದರಸನಿದಿರಿನಲಿ
ಕರದಲಶ್ವವ ಪಿಡಿದು ನೃಪವರ
ಗುರುವರನನರಸಲ್ಕೆ ಮಾರ್ಬಲ
ವೆರಸಿ ಶುಭಲಗ್ನದಲಿ ತಾನಂದುಳಿದನಾ ಗಿರಿಯ ೩೯

ಬರುತಲಾ ಪೊಳೆತಡಿಯೆರಡ ದಾಂ
ಟಿರುತ ಪರ್ವತ ವನತಟಾಕದ
ಸರಿಸವರಸುತ ಗುರುಪದಾಬ್ಜಾಂಕದಲಿ ನೆನಹಿಡುತ
ಭರದಿ ಪೆಜ್ಜೆಯ ಮೇಲೆ ಪೆಜ್ಜೆಯ
ನಿರಿಸಿ ಪಯಣದ ಮೇಲೆ ಪಯಣದಿ
ಹರಿಸುಮಿಹ ಭಾವದಲಿ ಭೂಪತಿಯಿರದೆ ಪೊರವಟ್ಟ ೪೦

ಇತ್ತಲಾ ಶಿವರಾತ್ರಿಗುರು ಬಹು
ಪತ್ತನಂಗಳ ಪುಗುತೆ ಚರಿಸುತ
ಲತ್ತ ಬಿತ್ತರವೆತ್ತ ವೀಧಿಯ ಹರ್ಮ್ಯಸಮುದಾಯ
ಮತ್ತಿರಲ್ಕವಲೋಕಿಸುತ ನರ
ರೊಕ್ಕಿಬರೆ ಪರಸುತ್ತ ಗರಪುರ
ದತ್ತ ಸಾರಿ ವಿಲಾಸದಲಿ ಬಿಸಗೊರಳನನು ಕಂಡ ೪೧

ಅಂದು ಕಪಿಲಾನದಿಯ ತೀರದಿ
ನಿಂದು ಯೋಗಾನಂದದಿಂದಿರೆ
ಬಂದು ಜಿತಘೋರಾಕ್ಷನಾಕ್ಷಣ ಲಕ್ಷ್ಯಮಂದಿರದಿ
ಮುಂದಿಹುದು ಕಪಿಲಾಶ್ರಮವು ಬಾ
ರೆಂದರುಪಿ ಮೈಗರೆಯೆ ಗುರುವರ
ನಂದು ತಾನಿರದೆದ್ದು ಮುಂದಿನ ಪಯಣಕನುವಾದ ೪೨

ಕಪಿಲಯತ್ಯಾಶ್ರಮವ ಪುಗೆ ತಾ
ನಪಗತಶ್ರಮನಪ್ಪ ನಿಜಗುರು
ಗುಪಿತದಿಂದಂದೊರೆದ ಪಂಚಾಕ್ಷರಿಯ ಪಠನೆಯಲಿ
ಚಪಲರಹಿತತೆಯಿಂದ ಸುರುಚಿರ
ವಿಪಿನಪಥದಲಿ ನಿಂದ ಬಿಯದನ
ವಿಪುಲಮಾನಸದಿಂದಲೀಕ್ಷಿಸುತವನ ಬೆಸಗೊಂಡ ೪೩

ಘೋರಗಹನಾಂತರದಿ ನೆರೆ ಸಂ
ಚಾರಿಯಹೆ ನೀನೀ ವನಾಂತರ
ಮಾರಿಗಿಹುದೆಲೆ ಜಪತಪಾಲಯದಿಂ ವಿಕಾಸದಲಿ
ಮಾರಮರ್ದನರೂಪರಾರೀ
ದಾರಿಯಲಿ ಪೋಗಿಹರು ನಿನಗೆ ವಿ
ಚಾರವಿರಿತಿರೆ ಪೇಳ್ವುದೆನಲಿಂತೆಂದನಾ ಶಬರ ೪೪

ಇಂದೆ ಕಿತ್ತಡಿಯೊರ್ವ ಜಡೆಮುಡಿ
ಯಿಂದ ದಂಡವ ಪಿಡಿದಿರುವ ಕರ
ದಿಂದ ಕಾವಿಯು ಪೊದಿದು ಕೊಂಡಿಹನೊರ್ವ ಮುಂದರಿದ
ಇಂದು ಕಪಿಲಮಹರ್ಷಿಯಾಶ್ರಮ
ಮೆಂದೊರೆವರಿದ ನಿರುತ ದಶರಥ
ನಂದನಂ ಬಂದಿಳಿದ ತಾಣವಿದೆಂದನಾ ಬೇಡ ೪೫

ಎಂದೆನಲ್ಕಾ ಬಿಲ್ಲ ತಾಪಸ
ನಂದೆ ಬೇಡನ ಮಾರ್ಗವನು ತೋ
ರೆಂದು ಕರೆಯಲ್ಕವ ವಿನೋದದಿನೊಡನೊಡನೆ ಬರುತ
ಸಂದಿರುವ ಸುಸ್ಥಾನದಿರುವಿಕೆ
ಯುಂದವನು ಪೇಳುತ್ತಲೊಲವಿಂ
ಮುಂದುವರಿಸಿದನಾ ಗುರುವ ನತಲೋಕಸುರತರುವ ೪೬

ಗುರುವರನು ವಿಪಿನದಲಿ ತಾ ಮುಂ
ಬರಿದ ಜಂಗಮನೊರ್ವನಂ ನೆರೆ
ನಿರುಕಿಸುತ ಮುಂದಣಪಥವ ತಿಳುಪೆನುತ ವಿನಯದಲಿ
ಹರಿಸದಿಂ ಗರಪುರಿವಿಚಾರವ
ನರುಪೆನಲ್ಕವನಿರದೆ ವಿಷಕಂ
ಧರನ ಕಥನವನೊರೆದನಂದಾ ಗಹನಮಧ್ಯದಲಿ ೪೭

ಮೌನಿಗಳಿಗಪಮಾನವೆಸಗಿ ವಿ
ಧಾನರಹಿತತೆಯಿಂದ ಯಜ್ಞವಿ
ತಾನವನೆ ಕೆಡಿಸುತ ವಿರೋಧಾಗಾರವಾಸದಲಿ
ಕಾನನದಿ ಸಂಚರಿಸಿ ಕೇಶೀ
ದಾನವನು ಭೂಜನರನೆಲ್ಲರ
ದೀನಭಾವದಲಿರಿಸಿಹನು ಚರವರನೆ ಕೇಳೆಂದ ೪೮

ಆತನುಪಟಳಕಂದು ಬೆದರಿ ಪು
ನೀತ ಯಮಿಚಯಮೈದಿ ಗಿರಿಸಂ
ಜಾತೆಯರಸನಲೊರೆಯೆ ರಜತಾಚಲವನುರೆಪುಗುತೆ
ಭೀತಿಯಿಂದರುಪಲ್ಕೆ ಹದನವ
ಭೂತನಾಥನುಮಾ ಗಣೇಶ ಸ
ಮೇತದಿಂದೈತಂದು ಕಪಿಲಾತೀರದಲಿ ನಿಂದ ೪೯

ಹರ ಜಲಂಧರನುರುಬಲವ ನೆರೆ
ಮುರಿದನೆಂಬುವನರಿದು ಕೇಳಾ
ದುರುಳರಕ್ಕಸನಿರದೆ ಮರೆಯಾದಂ ವನಾಂತರದಿ
ಭರಿತಮಹದಾನಂದದಿಂ ಯಮಿ
ವರರು ಬರುತಾ ವ್ಯೋಮಕೇಶನ
ಚರಣಕೆರಗಿ ವಿಲಾಸದಿಂ ನುತಿಸಿದರು ಹರಿಸ ಮಿಗೆ ೫೦

ಹರನೆ ಗಂಗಾಧರನೆ ಗೌರೀ
ವರನೆ ಮನ್ಮಥಹರನೆ ಗಜಸಂ
ಹರನೆ ಸುರಸುಖಕರನೆ ಗಗನಾಂಬರನೆ ಶಂಕರನೆ
ಚರನೆ ಪಾಪಾರಣ್ಯವೈಶ್ವಾ
ನರನೆ ಭಕ್ತೋದ್ಧರನೆ ವರಮೃಗ
ಕರನೆ ಸಲಹೆಂದೆನುತಲಬ್ಬರದಿಂದ ಬೊಬ್ಬಿರಿಯೆ ೫೧

ಗಿರಿಸುತಾಧವನಭವ ವಿಪಿನವ
ನುರೆ ನುಸುಳುತವಸರದಿ ಸಲಿಲವ
ಕರದಲವಧರಿಸುತಲಿ ದಾನವಗೆರಚಲವ ಕರಗಿ
ಗರಳವಾಗವತರಿಸಿಯಬ್ಬ್ರಟ
ನಿರದೆ ಜನರನು ಮೇಲ್ವರಿಯೆ ಭವ
ಹರ ಕರೆದು ಕಂಠದಲಿ ಧರಿಸುತಲೆಸೆದ ಕರೆಗೂರಲ ೫೨

ಹರನ ಗರಧರಲೀಲೆಯಾಯಿತ್ತು
ಧರೆಯ ಭೂಕೈಲಾಸ ವಾಸದಿ
ಪರಶುರಾಮ ಮನೋಭಿರಾಮ ವಿರಾಮ ಸುಸಮಯದಿ
ಕರುಬನಹ ಕರ್ಬುರನ ಭಾಧೆಯಿ
ನಿರದೆಯುಂದಾ ಶ್ರೋತ್ರಿಯರು ನೆಲ
ಸಿರುವ ಪರ್ಣಾಲಯದ ಕುರುಪದನೀಕ್ಷಿಸೆಂದೆನುತ ೫೩

ಮೃಗರೆಯುಲಭಿರಕ್ತ ಗುರು ಬೆರ
ಗಾಗಿ ಶಿವರಾತ್ರೀಂದ್ರ ಭಾಸುರ
ನಾಗ ಅರಸಿದ ಸಾಂದ್ರ ಕಪಿಲಾಶ್ರಮವಿಶಾಲದಲಿ
ಶ್ರೀಗಣಾಂಭೋರಾಶಿಚಂದ್ರ ವಿ
ರಾಗಯುತ ಹಿತ ಬಂದನೆಂಮುರೆ
ಬೇಗ ಮಿಗೆಸಂದಣೆಯುದ್ಭೈದಿತು ಪರಮನಿದಿರಾಗಿ ೫೪

ನರಿ ವೊಲಂ ಮೃಗ ಶುನಕನಜ ವಾ
ನರವಿತತಿ ಗೋವ್ಯಾಘ್ರನಿಕರಂ
ಕರಿಮೃಗೇಂದ್ರಬಿಡಾಲಸೂಕರನಿಕರವೊಂದುತಿರೆ
ಸರಸಮಿತ್ರತೆಯಿಹುದ ಚರನುರೆ
ನಿರುಕಿಸುತಲಿ ತಪೋನಿಲಯಮಂ
ದರದಿರದೆಯೆ ವಿಲಾಸದಲಿ ಜಪನೆಪದಲ್ಯೆತಂದ ೫೫

ಮುಂದರಿದು ಬರೆ ಕಂಡನಾಶ್ರಮ
ವೊಂದನತಿಶಯದಿಂದ ನಿತ್ಯಾ
ನಂದ ಯೋಗಾನಂದಮಂದಿರವೆಂದು ಗುರುವರ್ಯ
ಅಂದೆ ಪೊದರಿನ ಗೊಂದಣೆಯು ತರಿ
ದೊಂದು ಕುಹರವಗೈದು ನೆರೆ ಗೋ
ವಿಂದಮಿತ್ರನ ನುತಿಸಿದನು ಶಿವರಾತ್ರಿಯೋಗೀಂದ್ರ ೫೬

ಕೆಲದೆವಸದಲೆ ಬೆಳೆದ ಪುತ್ತಮು
ದಲುಗದಲೆ ರಾಜಿಸಿರಲಹಿಚಯ
ಮಲಸಿಕೆಯನೊಂದದೆಸು ವಾಸಿಸುತಿರ್ದವಂದಿನಲಿ
ಮಲೆತ ಗೋವೊಂದ್ಯೆದಿ ತೃಣಮಿರೆ
ಸುಲಲಿತದಿ ಮೇದಂದೆ ನಿಂದಿರೆ
ಸಲುಗೆಯಿಂದಾ ಭುಜಗವೆಡೆಯೆತ್ತಾಡಿದುದು ಮುಂದೆ ೫೭

ಇಂತೆಸೆಯಲಂದತ್ತ ಚೋಳನ
ನಂತ ಪರಿಕರಮಿರೆ ತೊರೆದು ಭೂ
ಕಂತುವಾಹವನೇರಿ ವಿಪಿನವ ಸೇರಿ ಪಯಣದಲಿ
ಕಂತುಪಿತಕಮಲಾಕ್ಷರಕ್ಷನ
ಚಿಂತಿತಾರ್ಥಫಲಪ್ರದನ ನೆರೆ
ಚಿಂತಿಸುತಲರಸಿದನು ಗುರುವಂ ಬೇಗ ಸಾದರದೆ ೫೮

ಒಂದೆಡೆಯು ತಾನರಸಿ ಬರೆ ಮುಗು
ಳ್ದೊಂದುಕಡೆಗೆಳೆದುದು ತರುಂಗಮ
ದೊಂದೆ ನೆನಪಿಂ ಮುಂದಿನಾಗಮಗತಿಯನಳವಡಿಸಿ
ಮುಂದರಿಸಿ ಧರಣೀಶನಶ್ವವ
ನೊಂದುತುರೆ ಸತ್ಪಾಂಥದಿ ಜನಾ
ನಂದಿ ಶಂಭುವ ನಂಬುತ್ಯೆದಿದ ಚೋಳಭೂಪಾಲ ೫೯

ಯಾಗತುರಗವಿದಾದುದಿಂದಿನ
ಬೇಗೆಯಲಿ ಮನಬಂದೆಡೆಗೆ ನೆರೆ
ಸಾಗುತಿಹುದನುರಾಗದಿಂ ಬೆಂಬಲದ ಪಡೆವಳ್ಳ
ನಾಗಿರುವೆ ನಾನಿದಕೆ ಮುಂದೇ
ನಾಗುವುದೊ ನಾನರಿಯೆ ಗುರು ಶಿವ
ಯೋಗಿದರ್ಶನಮೆಂತಹುದೊ ನಾಂ ಕಾಣೆನಕಟೆಂದ ೬೦

ಅನಿತರೊಳಗರ್ಕಾವತಿಯ ನೆರೆ
ದನುಪಮಿತ ಚಾರಿತ್ರ ದಾಂಟುತ
ಲನಘಮುನಿ ಮಾಂಡವ್ಯನಾಶ್ರಮದಿರುವ ಪರಿಕಿಸುತೆ
ವಿನಯದಿಂದಲ್ಲಿಂದ ಮುಂದಾ
ಘನಮಹಿಮನಹ ಕಣ್ವಮೌನಿಯ
ವನದೆಡೆಯ ನಿರುಕಿಸುತೆ ಮಹಿಷಾನಗರಿಗೈತಂದ ೬೧

ಅಂದೆ ಪೊರಡಿಸಿತಾ ತುರಗವದು
ಸುಂದರನ್ ರಾಜೇಂದ್ರಚೋಳನ
ಪೊಂದುಳಿಸಿ ಚತುರಂಗಸೈನ್ಯದ ತತಿಯನತಿಶಯದಿ
ಬಂದು ಸೇರ್ದುದು ಗರಪುರಿಯನಾ
ನಂದದಿಂ ಕಪಿಲಾನದಿಯ ಬಳಿ
ಸಂದು ನಿಂದುದು ಬೇಗ ನಂಜುಂಡೇಶ್ವರನ ದಯದಿ ೬೨

ಅಂದು ಸೊಗದಿಂ ಪೊಳೆಯ ತಟಮಾ
ನಂದ ತುಂದಿಲನೊಂದಿ ಜಲದೊಳ್
ಮಿಂದು ಭಸ್ಮತ್ರಿಪುಂಡ್ರಫಾಲಾನ್ವಿತ ಯಶೋಭರಿತ
ಇಂದು ಲಿಂಗಾನಂದಸಂಭ್ರಮ
ದಿಂದಿರಲ್ಕರ್ಹತೆಯ ನಾನುರೆ
ಪೊಂದಿ ರಾಜಿಪನಲ್ಲೆನುತಲಾ ರಾಜ ಯೋಚಿಸಿದ ೬೩

ಪೊಳೆಯ ವಾರಿಯಲಿಳಿದು ಹಯಮುರೆ
ಮುಳುಗಿ ಮುಂದಾ ಕಾನನವ ಬರೆ
ಸುಳಿದು ಘೋರಾಕಾರವಿಪಿನದಿ ನಿಂದು ಹೂಂಕೃತಿಯ
ಕಳೆಯುಲಿರಲೋಂಕಾರಕೂಪನ
ನೆಳೆಯುರಸನರಸಲ್ಕೆ ತಾನಂ
ದುಳಿದನಾ ಗರಪುರಿಯ ಸುಕ್ಷೇತ್ರಾಭಿಮಾನವನು ೬೪

ಅಶ್ವಮಹಿಮೆಯನರಿದಃಮಂದಾ
ವಿಶ್ವನಾಥನ ದಯದಲನಿಶಂ
ನಶ್ವರವಪದವಿಯನೆ ಬಯಸದೆ ಮೋಕ್ಷದಾತನಲಿ
ಅಶ್ವಮೇಧವ ಶತವಗೈದಾ
ವಿಶ್ವಪತಿಯಾ ಪದವನಾಸುತೆ
ಶಶ್ವದಮಿತನ ಪಾದಪದ್ಮವನರಸೆ ಹೊರವಂಟ ೬೫

ಸರಿಸರಿದು ಹರಿಯೊಂದಿ ಕಪಿಲೇ
ಶ್ವರವಿಲಾಸಾಶ್ರಮವನೊಳಪೊ
ಕ್ಕರಿದು ವಿನಮಿಸಿ ರಾಮಲಿಂಗೇಶಂಗೆ ಪೊಳೆದಾಂಟಿ
ಬರುತೆ ಶಿವರಾತ್ರೀಶನು ತಪ
ಶ್ಚರಣೆಯಿಂದಿಹ ಪೊದರ ಬಳಿ ಸಂ
ದಿರುತ ನಿಂದುದು ಬಸಿವ ಬಿಸಿಬೆಮರೆಸೆಯೆ ಪಸರಿಸುತೆ ೬೬

ಅಂದು ಬಳಸಿರಲಾ ಪೊದರನಾ
ನಂದರಸಮುರ್ಕಿರೆ ನೃಪಾಲನ
ಮಂದಮತಿಯಿಂ ವದವಡೆದು ಮುಂದರಿಸೆ ವಾಹನವ
ನಿಂದಿಸಲುಗಿಸೆ ಸರಿಯದಯೆ ಪರಿ
ವಂದಿಸುತ ನಿಂದೆಡೆಯೆ ನಿಂದಿರೆ
ಕಂದಿದಾನನದಿಂದ ನೃಪನಂದಾಳ್ದ ತಾಮಸವ ೬೭

ಬರಸಿಡಿಲು ಸಿಡಿದೆಡೆಬಿಡದೆ ಬರೆ
ಸರಿಯುದೆದೆನಡುಗಿರದೆ ಹಯಮಿರೆ
ಸುರಿದುದಾಲಿವರಲಿನಮಳೆ ಕಪಿಲಾಶ್ರಮವ ನುಸುಳಿ
ಗುರುಜಪಾಲಯದಾವರಣದೆಡೆ
ತರುವದೊಂದಿರಲವರ ಬಳಿಯೊಳು
ನರಪ ನಿಂದಚ್ಚರಿಯನಾಳ್ದ ವಿಶಾಲಮತಿಯಿಂದ ೬೮

ಘೋರವೃಷ್ಟಿಯಪಾಯಗೊಳಿಸುತ
ಧಾರಿಣಿಯಲುರೆ ಬೀಳುತಿರಲಾ
ವಾಳುವಂ ಬೆದರದಿರೆ ದಿಗಿಲಿಂದಂದೆ ನೃಪತಿಲಕ
ರಿರುವ ಬನವಾರದಿದು ಸಂ
ಚಾರಕೆಡೆಗೊಡದಿಹುದು ಮುಂದಕ
ಪಾರ ಭೀತಿಯು ತೋರುತಿಹುದೆಂಬರಿಂದ ಚಿತ್ತದಲಿ ೬೯

ಅನಿತರಲಿ ಗೋಪ್ಯೊಂದು ಬಂದಾ
ಘನಮಹಿಮ ಶಿವರಾತ್ರಿಮೂರ್ತಿಯ
ನೆನೆದು ತಾನಭಿವಂದಿಸಲು ಪೋಪುದೆನೆ ಪೊದರಿನಲಿ
ಜನಪನದರನುಮತಿಯನರಿದುರೆ
ಮನದಲಚ್ಚರಿಯಾಂತೊಲಿದು ವಾ
ಹನದ ಮಹಿಮೆಯ ಪೊಗಳಿದನು ರಾಜೇಂದ್ರಭೂಪಾಲ ೭೦

ಪುತ್ತ್ರದೆಡೆಯಿಹುದೇನೊ ಭೀತಿಯ
ನೆತ್ತುತರಸುವರಾರು ಗಿಡದೆಡೆ
ಯತ್ತ ದೇಗುಲಬಗೆಯಲಿಹುದಾ ದೃಷ್ಟಿವೊತ್ರದಲಿ
ಬಿತ್ತರವ ನಾಸರಿಯೆ ಗುರುವನೆ
ಚಿತ್ತದಲಿ ನೆನೆದಿದನೆ ತೊಡವೆನೆ
ನುತ್ತಲನುವಾದನು ಸವರಲಾ ಮೃಣ್ಮಯಾಲಯವ ೭೧

ಇದನರಿದು ಯೋಗದಲಿ ಪರಮನ
ಹೃದಯಮಧ್ಯದಲಿರಿಸುತುದಿಸಿದ
ಪದುಳದಲಿ ಪೊರಮಡುತೆ ಗುರುವಾ ನದಿಯ ಬದಿಗಾಗಿ
ಸದುಮಲಾಂಗ ಶಿಲಾಂತರಾಳದಿ
ವಿಧುಧರನ ನೆನಪಿಂದೆ ಮಂಡಿಸ
ಲೊದವಿತಂದೆ ಜಲಾಭ್ಯುದಯಮಂದಾ ಪ್ರವಾಹದಲಿ ೭೨

ಇಂತೆಸೆಯುಲಂದಾ ಜಲೋನ್ನತ
ಮಂತರಂಗಾಲಯದಲಾತ್ಮನ
ಸಂತಸದಿ ನಿಲಿಸುತೆ ವಿಶಾಲವಿನೋದರಚನೆಯಲಿ
ಕಂತುಹರನುರುದಯವನೊಂದ
ಲ್ಕಂತು ಯೋಗದಿ ಮೌನಭಾವದೊ
ಳಂತು ಜಲಮಧ್ಯದಿ ವಿರಾಜಿಸಿ ಕುಳಿತ ಗುರುನಾಥ ೭೩

ಮರುದಿವಸದುದಯದಲಿ ತನ್ನರು
ತುರಗಮಿರದಿರಲರಿದು ಭೂವರ
ನಿರುವರಿಯಲರಸಲ್ಕೆ ಪುತ್ತ್ರದ ನೆಪಮದೊಂದಿರಲು
ಕರದಸಿಯುಲಾ ಪೊದರನರಿದಂ
ದಿರಿದನಾ ವಲ್ಮೀಕಸದನವ
ನರಿಯುತದರೊಳಗಣ ವಿಚಾರವನರಸಿದನು ರಾಯ ೭೪

ಬಿದಿಯೊಡಪೆಯು ಲಲಾಟಲಿಖಿತವ
ದೊದಗುತಿದೆ ಫಲಚಯು ಧರಾತಲ
ಕದನರಿದು ನೀರ್ದೇರ ವರ್ಷಿಸೆ ಜನಮನೋರಥಕೆ
ಪದಪಿನಾ ಚಾತಕಗೆರಡೆ ಸಲೆ
ಏದಿತಮಹ ಕಂಕಣವೆ ಲಭಿಪವೊ
ಲದರ ತೆರಪಿಂದೆಸಗಿದಾ ಫಲವೆಂದ ನರನಾಥ ೭೫

ಪಿತನ ಪಾಲನೆಯಿಂದ ಫಲಿಸದ
ಸುತನ ಲಾಲನೆಯಿಂದ ಕುಹಕದ
ಸತಿ ವಿಪತ್ಕಾಲದಲಿ ಸಖನಿರವರಿಯದಾ ಕುಮತಿ
ಗತಿಯನೀವವ ಸಿಲುಕದಿರಲಾ
ಸತಿಶಯದಿ ರಾಜಿಪುದು ಸಜ್ಜನ
ಮತಮದಲ್ಲೆನುತರಿದೆ ಬರಿದೇ ಬಳಲ್ದೆ ನಾನೆಂದ ೭೬

ಕಾದ ಕಾರ್ಬೊನ್ನಲಿ ಸಮೀರಣ
ಪಾದ ನಾಲ್ಕರ ಮಳೆ ಸುರಿಯಲಂ
ದಾದ ಫಲವೇನಹುದು ಮುಕ್ತಾಫಲವು ದೊರೆಯುವುದೆ
ವೇದನುತಗುರು ದೊರೆತನಾದರು
ಮೇದಿನಿಯುಲೇನಾದುದೇಂ ಫಲ
ಮಾದೆ ಪಾತಕಿ ಧರಣಿಯೊಳಗಾನೆಂದನಾ ನರಪ ೭೭

ತುರಗಮಿರದೆಯದೆತ್ತಲಡಗಿತೊ
ಬರವಸೆಯುಸೊಲಿದಿತ್ತುಮೆನಗಾ
ದರವನೀಯದೆ ಗುರುವ ತೋರದ ನೆಲದೆಯುವಸರದೆ
ಧರೆಯುಲೇಕವತರಿಸಿತೋ ನೆರೆ
ದಿರದೆಯುದಕೆನಗಾವ ಸಖ್ಯವೊ
ಬರಹಮೆಂತಿಹುದೋ ಲಲಾಟವಲರಿಯೆ ನಾನೆಂದ ೭೮

ಆನಿತರಲಿ ಹಯ ನಲಿದು ತನ್ನುರು
ಘನಗುರುವ ತಪದಿರುವನರಿಯುತ
ಲನುಮತದಿ ಜಲಮುಯನೆಲದಿ ಮೊಗದೋರಿ ನಗೆಬೀರಿ
ಜನಪತಿಯು ಬಹಗತಿಯು ನಿರುಕಿಸು
ತ್ರನಘರೂಪನ ಗತಿಯು ಕಾಪಿನ
ಮನವೆಳಸಿ ನೆಲಸಿರ್ದುದಾ ಯೋಗೀಶಸಿದಿರಾಗಿ ೭೯

ಇತ್ತ ಗೋಪೊಂದ್ಯೆತರುತಲಾ
ಪುತ್ರಡೊತ್ತಿಲೆ ಸುತ್ತಿ ತಲೆಗೊಡ
ಹುತ್ತಲಲ್ಲಿನ ಬಿತ್ತರವ ನೆನೆಯುತ್ತ ಮಾನಸದಿ
ಮತ್ತೆ ಕಪಿಲಾನದಿಯ ತಟದೆಡೆ
ಯತ್ತ ಪೊರಡೆ ನೃಪೋತ್ತಮನು ಬೆಂ
ಬತ್ತಿ ಬಂದಾ ಪಶುವಿನೊತ್ತಿಲೆ ನಿಂದು ಭೂಪಾಲ ೮೦

ನೀರಲುರೆ ಮುಸುಡಿಯ ವಿಕಾಸವ
ತೋರುತಿರೆ ಹೂಂಕಾರ ವಾರುವ
ನಾರಯಿಪ ಧರಣಿಪ ಸುರಾಧಿಪರೂಪ ಜಿತಕೋಪ
ಬಾರ ಚೋಳಾವನಿಪನಾ ಸಿರಿ
ಬಾರ ದೇವಾಧೀಶನಾ ಹರಿ
ಬಾರ ನೀ ದುರಿತಾರಿ ವೇದಾಗಾರಿ ಬಾರೆಂದ ೮೧

ಅನಿತರಲಿ ಬೆಳೆದಾ ಪ್ರವಾಹದ
ಘನನಿನದಮಳಿದಾ ಜಲದಲಂ
ದನಘ ದರ್ಶನವಿತ್ತನಾ ಶಿವರಾತ್ರಿಗುರುಮೂರ್ತಿ
ಅನುಪಮಿತಚಾರಿತ್ರಯೋಗದಿ
ಸನುಮತದಿ ಮುದ್ರಾಂಕಿತದಲಿರೆ
ಜನಪನಾನಂದಾಶ್ರುವಿಂ ಬೆರಗಾದನಂದಿನಲಿ ೮೨

ಅನಿಲಸಖನಿಂ ವರ್ಧಿಸುತಲಾ
ಘನತರದ ಪನ್ನೆರಡೆಸಳಿನುರು
ವನಜಮುಕರುದವನು ಪೀರಲ್ಕೈದುತಾ ಭ್ರಮರ
ತನುವನುರೆ ತೊರೆದಂದೆ ಮುಂದಿನ
ಮನೆಯಲುರೆ ಸುತಸದಿ ಪಾಡಲು
ಅನುವಿನಿಂ ಲಾಲಿಸಿದನಾ ಶಿವರಾತ್ರಿಯೋಗೀಂದ್ರ ೮೩

ಬಾಲವನೆ ಶಿರವಾಗೆಣಿಸಿ ಬಹು
ಲೀಲೆಯಿಂದಬ್ಬರಿಸಿ ರುಧಿರ ವಿ
ಶಾಲದಾ ಪೆಡೆ ಪಾವೆಡೆಯು ರಾರಾಜಿಸುತಲಿರುವ
ನೀಲವರ್ಣದಿ ಪೊಳೆವ ಸದನದ
ಮೇಲೆ ರಸನಾರಹಿತ ಗಂಟೆಯು
ಕಾಲಕಾಲದೆ ದನಿಯತೋರ್ದುದನರಿದ ಗುರುನಾಥ ೮೪

ವಾರಿಧಿಯ ತುದಿಯನೆ ಬೆರೆಯದಾ
ಸಾರತರ ಗಂಗಾನದಿಯು ಝ
ಝುರ್ಝರವದ ಮಡುವಿನಲಿ ರಾಜಿಪ ದೀಪದಾಜ್ವಾಲೆ
ಮಿೂರಿರುವ ಕುಡಿಯೊಳಗೆ ತೋರಿದ
ವಾರಿವಾಹದ ದನಿಯು ಲಾಲಿಸಿ
ಧೀರಮನದಲಿ ನಿಂದನಾ ಶಿವರಾತ್ರಿಗುರುನಾಥ ೮೫

ಸರಸಿಜಾಪ್ತ ಶಶಾಂಕರನು ಸಂ
ದಿರದೆ ರಂಜಿಸಿ ಕಿರಿಯಬಾಗಿಲ
ಲುರೆ ಮೆರೆಯುತಿರ್ಪಪರದಿಗ್ಭಾಗದಲಿ ಭಾಸಿಸುವೆ
ಸುರುಚಿ ಪರಮನ ದೇಗುಲದಲಂ
ದಿರದೆ ಬೆರೆದೊಳಗಿರ್ದನಾ ಗುರು
ವರನು ಕರುಣಾಕರನು ಶಂಕರಭಕ್ತನರ್ತಿಯಲಿ ೮೬

ಮರೆದೊಡಾವೆಡೆಯರಸಲರಿಯದ
ಭರದಿನರಿದೊಡೆ ತೋರುತಿರ್ಪುದ
ಪರಮನುರುತರ ನೆಲೆಯಲಿರುವಾ ಬರಿಯ ಬಯಲಿನಲಿ
ತೊರೆಯು ಸಂಗದಿ ನೆರೆಯದಂಬುಧಿ
ಮೊರೆವ ನಿನದವನಾಲಿಸುತ ತಾ
ನುರೆ ಮೆರೆವ ಶಿವಯೋಗಿಯಂದಾ ಜಲದ ಮಧ್ಯದಲಿ ೮೭

ಅನಿತರಲಿ ಹಂಸಂಗಳೆರಡಿರ
ಲನುವಿನಿಂದವ ನುಂಗಿ ದಶವಿಧ
ನಿನದಮಿರೆ ಪಿಂದುಳುಪಿ ರಾಜಿಸುತಾರು ಬಣ್ಣದಲಿ
ಮಿನುಗುತಿಹ ಪೊಳೆ ಮೂರರೆಡೆಯಹ
ಮನೆಯ ಮುಂಗಡೆಯೆಯೋಂಕಾರಮ
ದನಿಪ ಕುಕ್ಕುಟ ಕೂಗೆ ಶಿವರಾತ್ರೀಶ ಕಣ್ದೆರೆದ ೮೮

ಅಂದಿರದೆ ನಿಮಿಷಾರ್ಧದಲಿ ಹರಿ
ಯೊಂದೆಯುನಿಮಿಷದೃಷ್ಟಿಯಲಿ ನೆರೆ
ಸಂದಿರಲ್ಕಾ ಗುರುಪದಾಂಬುಜ ನೆನಪಿನಿಂ ಜಲದಿ
ನಿಂದು ನೇತ್ರಾಂಬುವಿಲಿ ನೆರೆ ಬಳಿ
ಸಂದುತಲಿ ಶಿವಯೋಗಿಪದಕಾ
ನಂದದಲಿ ನಮಿಸಲ್ಕೆ ನೃಪ ಗುರುನಾಥನಿಂತೆಂದ ೮೯

ಪಾರಮಾರ್ಥವಿಚಾರ ಸಾರಾ
ಗಾರ ನುತ ಮಾರಂ ವಿನೋದೋ
ದಾರ ಘೋರಾಕಾರ ಕಾನನಕಾವಬಲದಿಂದ
ಸಾರಿರುವ ನಿಃಸೊರುವ ಸಹಜದಿ
ನಾರಿಗಸದಳಮಾದ ಗಹನದ
ದಾರಿಯಿದರಾಯತವನರುಪಿದರಾರು ಪೇಳೆಂದ ೬೦

ಬಾರ ಕಪಿಲಾಶ್ರಮ ವಿಪಿನಕಾ
ನಾರಯಿಪೆನೆಂದೊರೆಡ ನಿನ್ನಯ
ಕಾರಣದ ಬಲದಿಂದೆ ನಾನ್ನೈತಂದೆನೆಲೆ ತಂದೆ
ನೀರಮಡುವೆಡೆಯಡಗಿ ಕೆಡೆದಾ
ವಾರುವಂ ತಾ ಪಾರಿಗೆಳೆದಿತು
ಸಾರಮತಿ ಸದ್ಗತಿಯ ಕುಡು ಗುರುವರ್ಯ ನೀನೆನುತೆ ೬೧

ತುರಗದುರು ಪರಿಣತೆಯ ನೆರವಿಯ
ನರುಪರಿವೆನೆನೆ ಭೂಭುಜನು ತಾ
ಮೆರೆಯುವಾ ವಾರುವ ವಿಚಾರವನೊರೆದ ನತಪರದ
ಸುರಪನಿಂ ಬರೆ ಶಾಪಮುರೆ ಗಂ
ದರನಿಳಿದನಶ್ವಾಕೃತಿಯಲಾ
ದರದಲೆನ್ನಯ ದರುಶನದಿ ಗತಿಯಾಂತನವನೆಂದ ೬೨

ಮುಂದವನು ನಿನ್ನಯ ಕುಲದಿ ನೆರೆ
ಕಂದನಾಗುದಿಸುವನು ರಾಜ್ಯವ
ಚಂದದಿಂದಾಳುವನು ಪಿತೃಭಕ್ತಿಯಲಿ ಧಾತ್ರಿಯಲಿ
ಮುಂದವನ ಕಾಲದಲೆಯಾಳ್ವಿಕೆ
ಸಂದಪುದು ನುತವಂಶದಲಿ ಗತಿ
ಯೊಂದಿ ಬೆರೆಯುವನಾತ ಸುಗುಣಪುನೀತ ಪರಮನಲಿ ೬೩

ಎಂದೆನಲು ಗುರುವರ್ಯ ಭೂಪರ
ಚಂದು ತಾನಭಿವಂದಿಸುತ ಮರೆ
ಎಂದುಧರಸದ್ರೂಪನಲಿ ಮನದರಿಕೆಯದನರುಪೆ
ಎಂದು ಕರಯುಗ್ಮದಲಿ ತಾನಂ
ದೊಂದ ಬಿನ್ನವಿಸಿದನು ಗತಿ ಸ
ನ್ಮಂದಿರನಲಾ ನಯಗುಣದಲಾ ಚೋಳಭೂಪಾಲ ೬೪

ಹರಿ ವಿಧಾತೃಸುರಾದಿ ದಿಕ್ಪಾ
ಲರು ಮಹಾಶಿವಲಿಂಗಧಾರಣ
ಪರಮತೆಯನಾಂತಂದೆ ಲಿಂಗಾಂಗಿಗಳೆನಿಸಿ ಮೆರೆಯೆ
ತರಳೆಯರ ರೇಣುಕನ ಸೇವೆಯ
ಲಿರಿಸಿದರು ಮಜ್ಜನಕಗಂಡುರೆ
ದೊರೆಯುದಾದುದು ಲಿಂಗಸಂಸ್ಕಾರಮುದವನಿಗೆಂದ ೯೫

ಆತ ಕನಸಿನಲೊರೆದ ಹರಿಸದ
ಮಾತಿನಲಿ ನಿನ್ನಭಿಮತವ ನಾ
ನಾತುಕೊಂಡೈದಿದೆನು ದೀಕ್ಷಾಕ್ರಮವನನುಸರಿಸಿ
ಪ್ರೀತಿಯಿಂ ಮೋಕ್ಷಾರ್ಥಿಯೆನಿಸಲು
ಭೂತಲದಲಿ ಕೃತಾರ್ಥ ನಾಂ ಗುರು
ಜಾತನೆನಿಸುತಲೆಸೆಯೆ ಸದ್ಗತಿಯೆನಗೆ ಬಾಹಿರವೆ ೯೬

ದೇವ ನೀನದರಿಂದ ಸದ್ಗುಣ
ಭಾವದಲಿ ಮಂತ್ರೋಪದೇಶವ
ತೀವಿದತಿ ಸಂತಸದಲೆಸಗಿ ಕೃಪಾಳುಗುಣದಿಂದ
ಕಾವುದೆನೆ ಯೋಗಪ್ರಭಾವದಿ
ಸೋವೆನೆನುತಂದಭಯವೀಯುತೆ
ಭಾವಜಾರಿಯ ನೆನೆದು ಗುರುವೀಕ್ಷಿಸಿದ ಶುಭದಿನವ ೯೭

ಪಲದಿನಂಗಳು ಕಳೆಯೆ ಕಿಂಚಿ
ತ್ಫಲನಿಯಾಮಕದಿಂದ ಕಾಲವೆ
ಸುಲಲಿತದಲಂದೈದೆ ಶಿವರಾತ್ರೀಶ ಶರಣೇಶ
ಕಲಿತಮಂಟಪಶೋಭಿ ಬೋಧೆಯ
ನೊಲುಮೆಯಿಂದೆರೆಗೈದು ರಾಜನ
ನೆಲದಲಗ್ಗಳನೆನಿಸುತೊರೆದನು ಮುಂದಣಾ ಪರಿಯ ೯೮

ಇಂದು ಮೋಕ್ಷದ ಗುರುವು ನಾನಹೆ
ಮುಂದೆ ರಕ್ಷಾಗುರುವು ಬಹನದ
ರಿಂದ ನೀನಿಹುದಲ್ಲಿತನಕ ಪರೋಪಕಾರದಲಿ
ಚಂದದಿಂದವನೆನ್ನ ಶಿಷ್ಯನ
ಮುಂದಭಾಗ್ಯನಭೇದ ಜಂಗಮ
ವೃಂದದಿಂದೈತಹನು ವೇದವಿತಾನ ಘೋಷದಲಿ ೯೯

ಆವನಿಗುಪದೇಶಿಪ ವಿಧಾನದ
ವಿವರವನು ನಿನಗರುಹಿಸುವೆ ನೀ
ನವನ ಮರೆಪುಗು ತೀವ್ರದಿಂದಭಿಮತವನನುಸರಿಸಿ
ಭುವನದಲಿ ಕಾಯುವನು ನೀನನು
ಭವಿಪೆ ಸುಖಸಾಮ್ರಾಜ್ಯವನು ಪರಿ
ಭವವ ನೀನಾರೆ ಗೆಲ್ವೆ ಪತ್ತನವೊಂದ ರಚಿಸೆನುತೆ ೧೮೦

ಧರಣಿಯಲಿ ಮನ್ನಣೆಯನೆಸಗದ
ಪರಮದಾನದಿ ಜಸವನೊಂದದ
ಕರೆಯಿಸುತೆ ಗುರುಜಂಗಮರ ಪರಿಪಾಲಿಸದ ಮದದ
ತರುಣಿಪುತ್ರಾದಿಗಳ ಸಲಹದ
ಕರುಣೆಯೆನಿಪಾ ಸಖಿನ ಸೇರದ
ನರಪನಾಶ್ರಯವೇಕೆ ರಸೆಯೊಳಗೆಂದ ಗುರುನಾಥ ೧೮೧

ರಾಜನೀತಿಯ ಪರಿಕಿಸಲ್ ದ್ವಿಜ
ರಾಜವದನೆ ಪಣಾಂಗನೆಯು ಮರೆ
ಮಾಜಿಸುವುದದರಿಂದೆ ಭೂವರ ಭೂತಲದಲಿಂದೆ
ಸೋಜಿಗದ ಸದ್ಧರ್ಮಕಾರ್ಯವ
ನಿಜಗದಿ ವಿರಚಿಸುತೆ ಸುಗತಿಸ
ಮಾಜದಲಿ ಬೆರೆಯೆಂದನಾ ಶಿವರಾತ್ರಿಯೋಗೀಂದ್ರ ೧೮೨

ದುರುಳರಕ್ಕಸನುಪಟಳಕೆ ಯುವಿ
ವರರು ಪರಿತಂದಂದೆ ಸದನವ
ವಿರಚಿಸುತೆ ಮರೆಯಿಂದಲಿರ್ವರು ಪರ್ಣಶಾಲೆಯಲಿ
ಪರಮಶ್ರುತಿಮತರಿರದೆ ನೆಲಸಿದ
ತಿರೆಯಿದಕೆ ಶ್ರೋತ್ರೀಯಪುರವೆಂ
ದರುಹಿ ವಾಸಿಸು ಶಿಷ್ಯಬಹಪರಿಯಂತ ನೀನೆಂದ ೧೮೩

ಇದುವಲಾ ಸುತ್ತೂರಸೂತ್ರವು
ದಿದುವಲಾ ಮಹಿಮಾತಿಶಯದೆಡೆ
ಇದುವಲಾ ಮೋಕ್ಷಾರ್ಥಿಜನಗಳ ಹೃದಯದುಪಕಾರ
ಇದುವಲಾ ಪಂಚಾಸ್ಯಪಿಠವು
ದಿದುವಲಾ ರೇಣುಕನ ಸನ್ಮತ
ವಿದುವಲಾ ಗಣಪೂಜ್ಯಮಂದಿರವೆಂದ ಗುರುನಾಥ ೧೮೪

ಎನುತಲಾ ಸುಜ್ಞಾನಮುದ್ರೆಯ
ನನಘ ತಾನಂದಾಂತು ಜಪತಪ
ದನುವನನುಸರಿಸುತೆ ಕುಳಿತನಾ ಯೋಗಸದನದಲಿ
ಜನಪನಿತ್ತಲು ಪುರವ ವಿರಚಿಸ
ಲನುಗೊಳಿಸಿ ಸರ್ವಸ್ವವನು ಮನೆ
ಮನೆಯುಲಿಳಿಸಿದ ವೈದಿಕರನಾಶ್ರೋತ್ರಿನಗರಿಯುಲಿ ೧೦೫

ಬಂದುಸೇರ್ದುದು ನೂತನದ ಪುರಿ
ಗಂದೆ ಸಜ್ಜನವೃಂದ ಪುರಪುರ
ದಿಂದ ಜನರೈತಂದು ನೋಡಿ ನವೀನನಗರಿಯಿಹ
ಸುಂದರತ್ವವ ಮನದಲಚ್ಚರಿ
ಯೊಂದಿ ಗುರುಕೃಪೆಯಿಂದರಿದು ನೆರೆ
ಪಿಂದಿರುಗಿದರು ಮರಳಿಬಹ ತವಕದಲಿ ನಿಜಪುರಕೆ ೧೦೬

ಅತ್ತಲಾ ಶ್ರೀಶೈಲಗಿರಿಯುಲಿ
ಕೃತ್ತಿವಾಸನದಯುದಲುರೆ ನೆಲ
ಸುತ್ತಲಂಬಾಮಹಿಮೆಯಿಂ ನೆರೆ ಪಾಡಿ ಪಾರ್ವತಿಗೆ
ಚಿತ್ತಸದನವನಿತ್ತು ಶಯುನಿಸೆ
ಮತ್ತೆ ಕನಸಿನಲೈದಿ ಶಿವೆ ತಾ
ನಿತ್ತು ವರಗಳ ಕರೆದಳಾದರಂದಿಂದ ಗುರುವರನ ೧೦೭

ಪೊಡವಿಯೊಳಗುರೆ ಮೆರೆವ ಶಶಿಗಿರಿ
ಯೊಡವೆರಸಿದಾ ಮುಡುಕುದೊರೆಗುರೆ
ಸಡಗರದಿ ನೀಂ ಬಾರ ನಾನಲ್ಲಿರ್ಪೆನನವರತ
ಬಿಡದೆ ಬಕುತಿಯಿನೈತರಲು ನೀ
ನೆಡೆಬಿಡದೆ ಸದ್ಗತಿ ವಿಚಾರವ
ನೊಡನೆ ಪಡೆಯುವೆ ಮಲ್ಲಿನಾಥನ ದಯುದಿ ಕೇಳೆಸುತ ೧೦೮

ಮೃಗರೆಯುಲಾ ಚಣದೆ ದಿಗಿಲಿಂ
ದಾಗಲಾ ಚರವೃಂದದೊಡನನು
ರಾಗದಿಂ ಪೊರಮಟ್ಟು ತೆಂಕಣಕಡೆಯು ನೆನಹಿನಲಿ
ಬೇಗದಿಂದೈತಂದು ನಿರುಕಿಸಿ
ನಾಗಧರನರ್ಧಾಂಗಿಯುನು ತಲೆ
ಬಾಗಿಸುತ ನಿಂದಿರ್ದನೀಶಾನೇಶಭಕ್ತಿಯುಲಿ ೧೦೯

ಅಂದಿನಾತನ ವಿನಯದತಿಶಯ
ವಂದನೆಗೆ ಮಚ್ಚುತ ಮೃಡಾಣಿಯು
ಎಂವಳುರೆ ಕನಸಿನಲಿ ಕಪಿಲಾನದಿಯ ಜಲತಟದಿ
ಇಂದು ವಾಸಿಪ ಚರನೆ ನಿನ್ನಯ
ತಂದೆಯಹನೆಲೆ ಕಂದ ಗಿರಿಯೆಡೆ
ಮುಂದೆ ಬಾರೆಲೆ ಮಗನೆ ನಿನಗಾನೊರೆವೆನೆಂದಿನಲಿ ೧೧೦

ಎನುತಲೊರೆದಾ ಷಣ್ಮುಖಿನ ನಿಜ
ಜನನಿ ತಾಂ ಮೈಗೆರೆಯೆ ಗುರುವಿನ
ಕನಸಿನಲಿ ದಿಗಿಲಿಂದಲೆಚ್ಚರದಿಂದಲೆಳ್ದು ನಿಜ
ಘನಗುರುಷನರಸಲ್ಕೆ ಚರರೊಡ
ನನುಸರಿಸುತಲಗಸ್ತ್ಯನಾಶ್ರಮ
ವನದ ಕಪಿಲಾನದಿಯ ತೀರದಿ ನಿಂದ ಗುರುವರ್ಯ ೧೧೧

ಅಂದಿನಿರುಳಲಿ ಸದಯಮಾನಸ
ದಿಂದ ಶಿವರಾತ್ರೀಶ ಕನಿಕರ
ದಿಂದಲೀಶಾನೇಶದೇವನ ಕನಸಿನಲಿ ಬಂದು
ಚಂದದಿಂದಾ ಗರಪುರಿಯ ಪುಗು
ತಂದೆ ಬಾರೆನುತೊರೆದು ಗುರುವಾ
ತಂದೆ ಮರೆಯಾಗಲ್ಕೆ ತಾನುರೆ ತೊರೆಯುತಾ ಸ್ಥಳವ ೧೧೨

ಗರಪುರಿಯ ಸುಕ್ಷೇತ್ರದೆಡೆಗೈ
ತರುತಲಲ್ಲಿನ ಪರಿಯನರಿಯುತ
ಗಿರಿಜೆಯುರೆ ತಾನೊರೆದುದನೆ ನೆನೆನೆನೆದು ಮಾನಸದಿ
ಗುರುವರನು ತಾನರುಹಿದುಡ ನೆರೆ
ಮರೆಯುದಲ ನಿತ್ಯೋಕ್ತಕರ್ಮವ
ವಿರಚಿಸುತ ಬಲು ಲವಲವಿಕೆಯಿಂ ಪೊರಡಲನುವಾದ ೧೧೩

ಪರಮಕಪಿಲಾನದಿಯ ತೀರ್ಥದಿ
ಹರಿಸಮಿಗೆ ಮುಳುಗುತೆ ವಿಶಾರದ
ಗುರುಪದಾಂಬುಜಭಜನೆಯುಲಿ ತಾನುಳಿದು ಗರಪುರವ
ಚರನಿಕಾಯವನೊಂದಿ ಸುಗುಣಾ
ಕರನುಮೀಶಾನೇಶದೇವಂ
ಬರುತ ಕಪಿಲಾಶ್ರಮವ ಕಂಡನು ಮಾರ್ಗವಶದಿಂದ ೧೧೪

ಬನದ ಮಧ್ಯದಿ ಬರುತಲಲ್ಲಿನ
ವನಚರರ ಬೆಸಗೊಂಡು ಗುರುವಿನ
ಘನಮಹಿಮೆಯನು ಪುರದ ರಚನೆಯನನುಪಮಾದರದಿ
ಅನಿತನೆಲ್ಲವನರಿದು ಗುರುಪದ
ವನಜದಲಿ ತಾಂ ಬೆರೆದು ಸುಖಿಸುತೆ
ಚಿನುಮಯಾತ್ಮಕಯೋಗದೊಳಗಿರೆ ಕಂಡು ಬೆರಗಾವ ೧೧೫

ಕನಸಿನೊಳಗೈತಂದು ಕಪಿಲೆಯ
ಬನದೆಡೆಯಲಾಶ್ರಮದ ಮಹಿಮೆಯ
ನನುಸರಿಸಿ ನೆಲಸಿರುವೆ ನಾನತಿಶಯವಿಲಾಸದಲಿ
ಮನಸಿಜಾರಿಯ ನೆನೆದು ಬಾರೆಂ
ದೆನಗನುಜ್ಞೆಯನಿತ್ತ ವಿಲಸಿತ
ಘನನ ಕಂಡೆನೆನುತ್ತಲೀಶಾನೇಶ ಕೈಮುಗಿದು ೧೧೬

ಕಂಡೆನೆನ್ನಯ ದೇವದೇವನ
ಕಂಡೆನಾ ಸುಜ್ಞಾಸಭಾವನ
ಕಂಡೆ ದುರಿತಾರಣ್ಯದಾವಾನಲನ ಚರವರನ
ಕಂಡೆನೆನ್ನಯ ಕನಸಿನಾತ್ಮನ
ಕಂಡೆ ಸುಗುಣಾಧಾರ ಧೀರನ
ಕಂಡೆ ಶಿವರಾತ್ರೀಶ್ವರನ ವರಪಾದಸಾರಸವ ೧೧೭

ಎಂದೆರಗಿ ನುತಿಸುತ್ತೆ ಬಕುತಿಯ
ನೊಂದಿ ಗಣಚಯದೊಡನೆ ನಿಂದಿರ
ಲಂದು ಯೋಗದಲರಿದು ಪೂರ್ಣಾನಂದ ಕಣ್ದೆರೆದು
ಇಂದುವಿಈಶಾನೇಶ ಬಾರೈ
ಕಂದ ನೀನೀಶಾನಮೂರ್ತಿಗೆ
ತಂದೆ ರೇಣುಕನೆಂದರಿದೆ ಯೋಗದಿ ನಿಜಾಗಮವ ೧೧೮

ಎಂದೆನುತಲಭಿವಂದಿಸುತ ಗಣ
ವೃಂದಕಾಶೀರ್ವದಿಸಿ ಚಿತ್ತಾ
ನಂದವೊಳು ಯೋಗಾನುಸಂಧಾನದಲಿ ಬೋಧನೆಯ
ಚಂದದಿಂದೀಶಾನ ಗುರುವಿಂ
ಗಂದರುಹಿ ಷಟ್ಸ್ಥಲದ ಮಾರ್ಗವ
ಮುಂದುವರಿಸಿದನಾ ಚರೇಂದ್ರ ಮನೋನುರಾಗದಲಿ ೧೧೯

ಪ್ರತಿದಿನದಿ ಚರತತಿಯು ಕೂಡಿಸು
ತತಿಶಯದಿ ಬೋಧನೆಯುಗೈದೂರೆ
ಗತಿಯು ಸನ್ಮಾರ್ಗವನೆ ತೋರುತಲಮಲಮತಿಯಿಂದ
ಓತದಲಷ್ಟಾವರಣ ವಿವರವ
ನತುಲಿತಾಂತಃಕರಣನುಸುರುತ
ಲತಿವಿನೋದ ಶಿವಾನುಭವಮಂಟಪದಿ ರಾಜಿಸಿದ ೧೨೦

ಅತ್ತ ಪುರದಲಿ ಚೋಳಭೂವರ
ನುತ್ತಮೋತ್ತಮಮಠಮದೊಂದಂ
ಮತ್ತೆ ಸೋಮೇಶ್ವರನ ದೇವಾಲಯುವ ವಿರಚಿಸುತೆ
ಬಿತ್ತರದ ಚತುರಂಗಸೈನ್ಯದ
ಮೊತ್ತಮದನೊಡಗೊಂಡು ಗುರುವಿನ
ಹತ್ತಿರಕೆ ನಡೆತಂದನಾ ರಾಜೇಂದ್ರಭೂಪಾಲ ೧೨೧

ಬಂದರೆಗಿ ಗುರುವರನ ಚರಣಕೆ
ನಿಂದು ಕರಯುಗ್ಮದಲಿ ಬೇಡಿದ
ನಂದು ನೂತನಮಠಕೆ ದಯಮಾಡೆಂದು ವಿನಯದಲಿ
ತಂದಿರಿಸಿದಾಂದೋಳದಲಿ ನುತಿ
ಯಿಂದೆ ಕುಳ್ಳಿರಿಸುತೆ ವಿಚಾರದ
ಮಂದಿರನ ತಾಂ ಕರೆದುತಂದ ನೃಪಾಲ ಭಕ್ತಿಯಲಿ ೧೨೨

ಗುರುವು ತಾನೊಳಪುಗುತೆ ಮಠಮಂ
ಪರಸಿ ಮಂತ್ರಾಕ್ಷತೆಯನಿಡುತಂ
ದುರುತರದ ಸಭೆನಡುವೆ ಭದ್ರಾಸನದಿ ಮಂಡಿಸುತೆ
ಇರದೆ ರೇಣುಕದೇವ ತನಗಂ
ದೊರೆದ ವಿವರವನೊಂದ ಬಿಡದಂ
ದರುಪುತಿರ್ದ ವಿಲಾಸಭಾವದಿ ಕಲಿತ ಶುಭದಿನದಿ ೧೨೩

ಹಿಂದೆ ಕನಸಿನಲೈದುತೆನ್ನಯ
ತಂದೆ ರೇವಣಸಿದ್ಧನಾಜ್ಞೆಯ
ಮುಂದುವರಿಸಲ್ಕಾನೆ ಸಿಂಹಾಸನವ ವಿರಚಿಸುತೆ
ಇಂದುವಿಶಾನೇಶ ಶಿಷ್ಯಗ
ಮುಂದಮತಿಗಧಿಕಾರವೀಯುಷೆ
ನೆಂದವನ ಕುಳ್ಳಿರಿಸುತಾ ಪಂಚಾಸ್ಯಪೀಠದಲಿ ೧೨೪

ವೇದಮಂತ್ರವಿಧಾನದಲಿ ವರ
ಬೋಧನೆಯನುರೆ ಗೈದು ಮುಂದಿನ
ಹಾದಿಯುದ ಸರಿಗೊಳಿಸಿ ರಾಜೇಂದ್ರಾಖ್ಯನಿದಿರಿನಲಿ
ಸಾದರದಿ ಸುತಸೂತ್ರಸೂತ್ರವ
ಮೇದಿನಿಯುಲೆಡೆಬಿಡದೆ ಸಲಹುವ
ನಾದ ಮೊದಲಿಗನೆನಿಸುತೀ ಪಂಚಾಸ್ಯಪೀಠದಲಿ ೧೨೩

ಅರಸನನು ಕೈವಿಡದೆ ಗತಿಮಂ
ಥಿರದಲಿರಿಸುವ ಬರವಸವನೊಂ
ದಿರುವುದೆನಗಾಗೆನುತೊರೆದು ಜಯಜಯನಿನಾದದಲಿ
ಬರುತ ದೇವನ ದೇಗುಲಕೆ ಸಂ
ವರಿಸುತಂದಿರಿಸಿರುವ ಸೋಮೇ
ಶ್ವರನ ವಿಗ್ರಹಮೂರ್ತಿಯನು ತಾನಷ್ಟಬಂಧನದಿ ೧೨೪

ಭರದಲೇ ಸ್ಥಾಪನೆಯಗೈಸುತ
ಲುರುತರದ ವಿಧಿಯಿಂದ ಗುರು ಪಿಂ
ದಿರುಗುತಾ ಚರವೃಂದಸಹಿತಾ ಪರ್ಣಮಂದಿರಕೆ
ಬರುತಲಂದು ಪುರಾತನರ ಸ
ಚ್ಚರಿತೆಯದನರುಪುತೆ ವಿಶಾರದ
ನಿರುತಲೆಸೆದನು ಕಾಡಮಠವೊಂದರಲಿ ಗುರುನಾಥ ೧೨೫

ಅನುಭವದ ಮಂಟಪವ ರಚಿಸುತ
ಲನುದಿನದಿ ಸದ್ಗೋಷ್ಠಿಯಲಿ ನೆರೆ
ದನುಭವಿಸಿ ಶೈವಾನುಭವಸಿದ್ಧಾಂತರಸದಿರುವ
ಮನಸಿಜಾರಾತಿಯ ಘನದಲುರೆ
ನೆನೆದನಘ ಬೋಧಿಸುತಲನಿಬರ
ಘನಮಹಿಮರನುಗ್ಗೈದ ಶಿವರಾತ್ರೀಶ ಜಗದೀಶ ೧೨೬

ಒಂದುದಿನ ಗಣವೃಂದಸಹಿತಾ
ನಂದಮೂರ್ತಿಯು ಪರಮಲಿಂಗಾ
ನಂದವಿಭವನಲಿರುವ ಶಿವಲಿಂಗಾಂಗಸಮರಸದಿ
ಪಿಂದುಳಿಯದೀ ಧರೆಯ ಮೋಕ್ಷದ
ಮಂದಿರದಿ ನೆಲಸಿರಲುಮರಿದದ
ಮುಂದಿ ಕವಿದುದು ಜನಜನಿತ ಸದ್ವಾರ್ತೆಯಿಂ ಭರದಿ ೧೨೭

ಬಂದವಿೂಶಾನೇಶವೊಡೆಯಂ
ಚಂದದಿಂ ರಾಜೇಂದ್ರನೊಡನೆಯಾ
ಮುಂದುವರಿಸಿದನಾಶ್ರಮದ ಗದ್ದುಗೆಯ ಕಜ್ಜವನು
ಅಂದಿನಾ ದಿನ ಸಿದ್ಧಗೊಳಿಸ
ಲ್ಕಂದೆ ಬಾಹಿರಮುಖದಿ ಕೇಳ್ದೆ
ತಂದೊಡನೆ ತಾಂ ಪೇಳಿದನು ರಾಜೇಂದ್ರನಿದಿರಿನಲಿ ೧೩೦

ಎಸೆದೆ ನೀನಾ ತುರಗಮುಖದಿಂ
ದೆಸೆದೆ ವಾಜಿಯ ನಮ್ರಗುಣದಿಂ
ದೆಸೆವೆ ಮುಂದೀಶಾನದೇವನ ಬಲದಿ ಧರಣಿಯಲಿ
ಎಸೆಯಲೀ ಪುರ ಮುಸಡಿನಾಮದಿ
ನೆಸೆಯಲಾ ಸೋಮೇಶನಿದಿರಲಿ
ರಸೆಯೊಳಗೆ ನಿಜವಿಗ್ರಹವು ಕೇಳೆನುತ ಗುರುನಾಥ ೧೩೧

ಕಂದ ಕೇಳೀಶಾನಮೂರ್ತಿಯೆ
ಬಂದು ನಿನಗಾನೊರೆವೆ ಪರಮಾ
ನಂದ ನೀ ನೆನೆದಂದೆ ಯೋಗಾನಂದಮಂದಿರದೆ
ಮುಂದಕಾನೆ ಪರಂಪರೆಯಲ್ಲಿ
ತಂದು ಸಲಹುವೆನೆಂದು ಭಾಷೆಯ
ನೊಂದನೀಯಲು ಕರದತಾಡನದಿಂದ ಜನರುಲಿಯೆ ೧೩೨

ಅನಿಬರಿಂಗಾಶೀರ್ವದಿಸಿ ತಾ
ನನುವಿನೊಳಗಂದಾ ಸದೇಹದಿ
ಘನಮಹಿಮ ಗದ್ದುಗೆಯನೊಳವೊಕ್ಕನು ಕೃಪಾಜಲಧಿ
ಜನನಿಚಯ ಜಯಜಯನಿನಾದದಿ
ನನಘ ನಿನಗುಘೆಯೆನಲು ಗದ್ದುಗೆ
ಮನೆಯ ಬಾಗಿಲ ಮುಚ್ಚಿದುದು ಗಣವೃಂದ ಜಯರವದಿ ೧೩೩

ಜಯತು ರವಿಸಂಕಾಶ ಜಯಜಯ
ಜಯತು ಭವಭಯನಾಶ ಜಯಜಯ
ಜಯತು ದುರಿತಾಂಬೋಧಿಬಡಬಾನಲ ಯಶೋಭರಿತ
ಜಯತು ಜಯತಾವರಣಪುರಪತಿ
ಜಯತು ಪಂಚಾಸ್ಯಾದಿಗುರು ಜಯ
ಜಯತು ಶಿವರಾತ್ರೀಶನೆಂದಂದುಲಿದುದಾ ನಿಕರ ೧೩೪

ನೆರೆ ಮಹಿಷದಾನವಪುರೀಶ್ವರಿ
ಸರಸ ನಾಲ್ವಡಿಕೃಷ್ಣ ಸುಖಕರಿ
ಗರಪುರಿಯ ಭವರೋಗಹರ ಮೃಡದೇವ ಹಿತಕಾರಿ
ದುರಿತಹರೆ ಭೈರವಿ ದಯಾಪರೆ
ಹರಿಸದಿಂ ಶಿವೆ ಗಿರಿಕುಮಾರೀ
ಪೊರೆ ನಿರುತ ಚಾಮುಂಡಿಕಾಂಬೆಯೆ ಭಕ್ತಸಂತತಿಯ ೧೩೫

# ಈಶಾನೇಶವೊಡೆಯ ಕಥನಂ

ವೀರಶೈವಾಚಾರ ಜೀರ್ಣೋ
ದ್ಧಾರನೀಶಾನೇಶವೊಡೆಯುಂ
ಸಾರತರ ಸುತ್ತೂರ ಸಿಂಹಾಸನದಿ ರಾಜಿಸಿದ

ಶ್ರೀ ರಜತಗಿರಿವಾಸ ವೇದಾ
ಗಾರ ಬಲಿಸುಕುಮಾರಪೋಷ ಕು
ಮಾರಹಿತ ಭೂತೇಶ ಪುಷ್ಕರಕೇಶ ಗೌರೀಶ
ದಾರುಕಾದಿಗಣೇಂದ್ರತೋಷ ವಿ
ಚಾರಪಾರಾವಾರಪೂತ ಕು
ಬೇರಸಖ ಕುಡು ಸೋಮನಾಥನೆ ಜಗಕೆ ಮಂಗಲವ ೧

ಲಾಲಿಪುದು ಸನ್ಮಂತ್ರಸದನ ವಿ
ಶಾಲಕೀರ್ತಿ ಪ್ರಮಥಪೂಜಾ
ಲೋಲ ರಚಿತವೃಷೇಂದ್ರಗೃಹ ವರಸಿದ್ಧಲಿಂಗಾಖ್ಯ
ಶೀಲ ಸಂಸ್ಕೃತಪಾಠಶಾಲಾ
ಪಾಲಕೇಶಾನೇಶ್ವರನ ಗುಣ
ಜಾಲಕಥನವನೆನುತೊರೆದ ಶಿವರಾತ್ರಿಗುರುನಾಥ ೨

ಗುರು ಸದೇಹದಿ ನಿಜಸಮಾಧಿಯ
ನುರೆ ಪುಗಲು ಜಿತಕರಣ ಪೂಜಾ
ಚರಣೆಯಿಂ ಗದ್ದುಗೆಯ ಸೊಬಗಿಂದವನತಾಶಯದಿಂ
ನೆರೆದು ಪರಮೋತ್ಸಾಹರತ ವೈ
ಖರಿಯ ವೈದಿಕನಿಚಯ ನೆರೆ ಓಂ
ಕಿರುಗೆ ಮಠಕೈತಂದನೀಶಾನೇಶನೊಲವಿಂದ ೩

ಮರುದಿವಸ ಕೆಂಗದಿರನೂರೆ ಬರ
ಲರಸನವನೊಡ್ಡೋಲಗದಿ ಗಣ
ಪರಿಕರದ ನಡುವಣದ ಠಾಣದಿ ಸಿಂಹಪೀಠದಲಿ
ಸುರುಚಿರದಿನೆಸೆದಾ ಗುರುವಿನೆಡೆ
ಯುರುಕರಂಗಳ ಮುಗಿಯೆ ಮುಂದಾ
ವರಣಪುರಿ ಪೌರಾಭ್ಯುದಯ ನಿನದೆನುತೆ ಭೂಪಾಲ ೪

ಗುರುಪದಾಂಬುಜಭೃಂಗನಾತನ
ಪರತರಾಶೀರ್ವಾದದಿಂ ನೃಪ
ನಿರದೆ ಪಯಣವ ಮುಂದುವರಿಸಿದನಂದೆ ನಿಜಪುರಕೆ
ಚರಕುಲಾಂಬುಧಿಚಂದ್ರ ಭಕ್ತಾ
ವರಣಮಧ್ಯದಿ ರಾಜಿಸಿದನಾ
ವರಣಪುರಸೂತ್ರಾನುಸರಣವಿಲಾಸನವನಿಯಲಿ ೫

ಪರಮಪುರುಷೌಂಕಾರ ರೂಪಿಂ
ದಿರುವನಾತನಲುದಿಸುತಂದುರೆ
ಭರವಲಾ ಸುಜ್ಞಾನಚಿತ್ತಮದಿರಲದನೆ ಬೆರೆದ
ಸುರುಚಿವರ್ಣಗಳೋಮ ಮೂರಿಂ
ದುರುತರಾಶಯದಿಂದಲುದಿಸುತೆ
ಮೆರೆದುದಂದಾ ನಾದಬಿಂದುಕಲಾವಿನೋದದಲಿ ೬

ಇಂತೆನಿಪ್ಪಾ ಪ್ರಣವಮೂರ್ತಿಯ
ನಂತರೂಪೊಂದಾಗಿ ತೇಜೋ
ವಂತನೆನಿಸುತ ದಳಹಕಾರಸಕಾರಮಧ್ಯದಲಿ
ಸಂತಸದಿ ಮಾಲಿಂಗನೆನಿಸುತೆ
ಚಿಂತಿತವನವನೀಯುತಿರೆ ನಿ
ಶ್ಚಿಂತೆಯಿಂದ್ಧಾತನನುಮೀಶಾನೇಶ ಜಾನಿಸಲು ೭

ಬಂಧನತ್ರಯದಿಂದಲನಿಲನ
ಬಂಧಿಸುತಲಿಹ ಪಠಮನೊಂದದ
ಸಂಧಿಯಲಿ ಮಾಲಿಂಗತೇಜೋನ್ನತಿಯ ನಿರುಕಿಸುತ
ಬಂಧುರಾಸನದಿಂದ ಕರುಣಾ
ಸಿಂಧು ಮಾಯಾತೀತ ನತಜನ
ಬಂಧು ತಾನಸದಿರ್ದನಾ ಸುಜ್ಞಾನಮುದ್ರೆಯಲಿ ೮

ಅಂದಿನೊಳಗೆ ವಿರಾಗಿ ಯೋಗಾ
ನಂದಮಾಂತಾ ಪೊಳ್ತ ನಲಿದ್ಯೆ
ತಂದು ಶಿವರಾತ್ರೀಂದ್ರನೊರೆದಾ ಸಾರದಭಿಮತವ
ಪಿಂದೆ ಕಪಿಲಾಶ್ರಮವ ನಿರುಕಿಪು
ದೆಂದನವನಿಹ ಕಾರ್ಯಗಿರಿಯಲಿ
ಚಂದದಿಂ ಸ್ಥಾಪಿಸಿಹುದಾತನ ವಿಗ್ರಹವನೆನುತೆ ೯

ಅರುಹುಗೊಟ್ಟವನವನೆ ರೇವಣ
ಗುರುಕಣಾ ನೀನವನ ಜಾತ್ರೆಯ
ನುರೆನಡಿಸು ಸಿದ್ಧಾಶ್ರಮದ ಗಿರಿತಟದಲತಿಮುದದಿ
ವರುಷಕೊಂದೇಬಾರಿ ನೀನಾ
ವರಣಪುರಿಯದನುಳಿದು ಸಿದ್ಧೇ
ಶ್ವರನ ಪೂಜಿಸಿ ಬಾರೆನುತ ಗುರುನಾಥ ಮೈಗರೆಯೆ ೧೦

ಗುಅಂದೆ ದಿಗಿಲೆಳ್ಚರದಿ ಬಕುತರ
ಗೊಂದಣಿಯಲದನರುಪಿ ಲಿಂಗಾ
ನಂದಿ ಮೋದವನೊಂದಿ ಸಿದ್ಧಾಶ್ರಮದ ಗಿರಿಗೈದಿ
ಅಂದಮಾದಾ ಕುಸುಮಫಲಚಯ
ದಿಂದಲರ್ಚಿಸಿ ಧೂಪದೀಪಗ
ಳಿಂದಲಂಕೃತನೆನಿಸಿ ನುತಿಸಿದನಾತ ರೇಣುಕನ ೧೧

ಅನುಪಮಾನಂದಾಬ್ಧಿ ಭವಹರ
ಜನನನಿಧನವಿದೂರ ಸುರುಚಿರ
ದಿನಪತೇಜೋಭಾಸ ರೇವಣಸಿದ್ಧ ನತವರದ
ಘನಗುರುವನುಗ್ರಹದಲಾ ಪದ
ವನಜಯುಗಳವ ನೋಡಿ ಮನದೊಳ
ಗನಿತನತಿ ತೋಷಿಸಿದೆನೆನುತುರೆ ನುತಿಸುತಾ ಯತಿಯು ೧೨

ಅಂದದಿಂ ಪಿಂದಿರುಗಿ ಪರಿಕರ
ದಿಂದಮೀಶಾನೇಶ ಮಠಕಾ
ನಂದದಿಂ ಬಂದಾ ಪ್ರಮಥವರವೃಂದದೆಡೆಗೈದಿ
ಅಂದವರನುಪಚರಿಸಿ ಯೋಗಾ
ನಂದ ಬೋಧಾವರದ ಶಿಷ್ಯನ
ಲೆಂದನೊಂದಭಿಮತವನಾ ನಿಜಲಿಂಗದೇವನಲಿ ೧೩

ಒಂದುದಿನದಿ ಗಿರೀಂದ್ರನಂದನೆ
ಬಂದು ಕನಸಿನಲೊಂದೊರೆದಳುರೆ
ಮಂದಮತಿ ಹರ ಮಾಘಮಾಸದಲಂದೆ ಬಾರೆನುತೆ
ಬಂದುದೀಸರೊಳೆಸೆವ ಪೊಳ್ತದ
ರಿಂದ ಹವಣಿಪೆ ಪಯಣಕಾನಿ
ಲ್ಲಿಂದ ನೀನಿರು ಮಠದಿ ನಿತ್ಯೋತ್ಸವದ ಕಜ್ಜದಲಿ ೧೪

ಅಕುಟಿಲಾಂತಃಕರಣ ಗುರುವಾ
ವಿಕಲತಾಮತಿ ಪಥವನುಳಿದಾ
ಸುಕಲೆಯಿಂದಾವರಣಪುರಿಸೂತ್ರಾನುಗತಸುಮತ
ಸಕಲಬಿರುದಿಂದೆಸೆದು ಶಶಧರ
ಮಕುಟರಾಜಿತಗಭಿನವಿಸುತಾ
ಪ್ರಕರಯುತ ಶಿವರಾತ್ರಿಮೂರ್ತಿಯ ನೆನೆದು ಹೊರವಂಟ ೧೫

ಗುರುವಿನಾಗಮಗತಿಯರಿಯುತೀ
ಧರಣಿಯುರೆ ಬಕುತಿಯುಲಿ ಪಾಸಿದ
ಸುರುಚಿರದ ಧವಳಾಂಬರದ ನಡೆಮಡಿಯಿದೆಂದೆನಲು
ಸುರನರೋರಗಯಕ್ಷಕಿನ್ನರ
ಗರುಡಗಂಧರ್ವರಿಗೆ ನೆರೆ ಗೋ
ಚರಿಸುತಾ ಕಾವೇರಿಯತಿಶಯದಿಂದ ರಾಜಿಸಿತು ೧೬

ಘೋರಕಾಂತಾರದಲಿ ನೆರೆ ಬೀ
ಡಾರವಿಳಿಯಿಸುತಂದೆ ವರಕಾ
ವೇರಿಯಿರಲದ ದಾಂಟಿ ಪಶ್ಚಿಮವಾಹಿನೀತಟವ
ಸೇರಿ ನಿತ್ಯಾಚಾರಧರ್ಮವ
ತೀರಿಸುತಲಾ ಸಗರಸದನವ
ತೂರಿ ವಿಪಿನವ ಮೀರಿ ಶಶಿಗಿರಿಯೇರಲನುವಾದ ೧೭

ವರಸುರಾಸುರ ನಮಿತಮೂರ್ತಿಯೆ
ದುರಿತಹರಗುಣಭರಿತಕೀರ್ತಿಯೆ
ಸುರಚಿಶಶಿಗಿರಿನಾಥ ನಿರ್ಜರಧೇನು ವರದಾತ
ಭರದೊಳಾ ಶ್ರೀಗಿರಿಯ ಬಿಡುತಂ
ದಿರದೆ ನೆಲಸಿಹೆ ನಾಗವಿಪಿನದಿ
ಪೊರೆವುದೆನ್ನ ದಿಲೀಪಸುಖದ ವಿಮುಕ್ತಿ ವರದಾತ ೧೮

ಎನುತೆ ನುತಿಸುತಲೇರ್ದನಾ ಗಿರಿ
ಯನು ಕುತೂಹಲಹೃದಯ ತಾನತಿ
ಸನಯಚಿತ್ತದಿ ಮಲ್ಲಿಕಾರ್ಜುನನಿದಿರ ನಿಂದಿರುತೆ
ಘನಕುಸುಮಚಯದಿಂದಲರ್ಚಿಸು
ತನುಮತಂಗಾ ಪ್ರಣತಿಯರ್ಪಿಸಿ
ವಿನಯಭಾವದಲಿರ್ದ ಭಕ್ತರನೀಕ್ಷಿಸುತೆ ಮುದದಿ ೧೯

ಈಶ ಕಪಟವಿನಾಶ ವೃಷಭಾ
ಧೀಶ ಭೂಕೈಲಾಸವಾಸ ಮ
ಹೇಶ ಪರಮವಿಲಾಸ ಕರ್ಬುರಮುಖ ವಿನಾಶಕರ
ಕ್ಲೇಶಪಂಚಕಹರಣ ಶಿವ ಸ
ರ್ವೇಶ ಸಾಮಾಲೋಲ ಚಂದ್ರಗಿ
ರೀಶ ಕುಡು ನೀ ಭಕ್ತಲೋಕಕೆ ಸಕಲಮಂಗಲವ ೨೦

ಲಿಂಗರೂಪಶುಭಾಂಗ ಸರುಚಿಕು
ರಂಗಧರ ಭಸ್ಮಾಂಗ ದುರಿತವಿ
ಭಂಗ ಮಂಗಳೆಯರಸ ಗಂಗಾಧರ ಗಣೋತ್ತುಂಗ
ಭೃಂಗಿನುತಪದ ರಂಗಧಾಮತು
ರಂಗ ವರದಕೃಪಾಂಗ ಕಾಂತಿತ
ರಂಗ ಕುಡು ನೀ ಭಕ್ತಲೋಕಕೆ ಸಕಲಮಂಗಲವ ೨೧

ಶರಣಜನಮಂದಾರ ಸುಗುಣಾ
ಕರ ವಿಜಿತಸಿಂಧೂರ ಜನನಾ
ದರರಹಿತ ಜಿತಮಾರ ಕರುಣಾಪೂರ ಪರಿಪೂರ್ಣ
ಚರ ವಿರತಿಗಣಸಾರ ವ್ಯಾಘ್ರಾಂ
ಬರ ಸುಗತಿಗಾಧಾರ ವರವಿಷ
ಧರ ವಿಲಾಸದಿ ಕುಡು ಪದವ ನೀಂ ಮಲ್ಲಿನಾಥೇಶ ೨೨

ಎನುತಲರ್ಥಿಸಿ ಮಲ್ಲಿನಾಥನ
ನೆನಪಿನಿಂದುರುತರದಿ ನಿಂದಿರ
ಲನುಮತಿಯಿನಾ ಸುಮವನೊಂದ ವಿನೋದದಿಂದೀಯ
ಅನುವಿನಿಂದದ ಕೊಂಡು ಶಾಂಭವ
ವನಿತೆಯಾ ಭ್ರಮರಾಂಬಿಕೆಯ ನಯ
ವಿನಯದಿಂದಾರಾಧಿಸಲು ದೇವೀಗೃಹಕೆ ಬಂದ ೨೩

ನಿಂದು ದೇವಿಯ ಮುಂದೆ ಮಾತೃವ
ನಂದಭೀಕ್ಷಿಸಿ ಬೆಂಬಲದಲುರೆ
ಬಂದು ಕಾಪಾಡೆಂದು ಮುಕುಳಿತವಾದ ಕರಯುಗದಿ
ಕುಂದಪಾಟಲ್ಯಾದಿ ಸುಮಚಯ
ದಿಂದಲರ್ಚಿತೆಯಾಗಿ ನೆರೆ ಸೊಬ
ಗಿಂದಲೊಪ್ಪಿಹ ಗಿರಿಕುಮಾರಿಯ ಬೇಡಿದನು ಶುಭವ ೨೪

ತಾಯೆ ಪರಶಿವಜಾಯೆ ಸುರಮುನಿ
ಗೇಯೆ ವಿಲಸಿತಮಾಯೆ ಸುಂದರ
ಕಾಯೆ ಗತಿಗೃಹನೇಯೆ ವಂದ್ಯನಿಕಾಯೆ ಮತಿಯಿೊಯೆ
ನೋಯೆ ಭವಬಂಧನದಿ ನೀನೇ
ಕಾಯೆ ಚಿಂತಾಗ್ನಿಯಲಿ ಬೀಳುತೆ
ಬೇಯೆ ವಚನೋಪಾಯೆ ದುರಿತಕಪಾಯೆ ಪಾರ್ವತಿಯೆ ೨೫

ಹಿಂದೆಯಾ ಶ್ರೀಶೈಲದಲಿ ನೀ
ನೆಂದ ನುಡಿಯಂ ನೆನೆಯುತಾನ್ನೆ
ತಂದೆ ವರಸುತ್ತೂರು ಸಿಂಹಾಸನದಿ ನೆರೆನಿಂದೆ
ಕುಂದೆ ನಾನ್ಯೆದಿದುದು ಭವದಲಿ
ನೊಂದೆ ಸುಖಪದ ನಿಲುಕದಿರಲುರೆ
ಬೆಂದೆ ಮನದಲಿ ಕಂದಿದಾನನದಿಂದಲಿಹೆನೆಂದ ೨೬

ಎಂದು ತಾನಭಿನಮಿಸುತಕುಟಿಲ
ನಂದೆ ಶ್ರುತಿಮತದಿಂದೆ ಜಡಗುಣ
ಸಂದೆ ದಾಕ್ಷಾಯಣಿಯ ಗಿರಿನಂದನೆಯ ವೈಭವವ
ಮುಂದರಿಸುತಭಿನಯಿಸಿ ಗಾನವ
ನಂದೊಲಿದು ಪಲವಗೆಯ ರಾಗಗ
ಳಿಂದಮೊಶಾನೇಶವೊಡೆಯಂ ಪಾಡಿ ಕೊಂಡಾಡೆ ೨೭

ಅಂದಿನಿರುಳಾ ತುಹಿನಭೂಧರ
ನಂದನೆ ವಿಬುಧವೃಂದ ವಂದಿತೆ
ಮಂದಗಮನದಿನ್ಯೆದಿ ಗುರುವಿನ ಕನಸಿನಲಿ ನಿಂದು
ಮುಂದೆ ನಿನ್ನ ಪರಂಪರೆಯು ಸುಖ
ದಿಂವಲಿಲ್ಲಿಗೆ ಬಂದು ಸೇವಿಸ
ಲೆಂದನುಜ್ಞೆಯನೀಯುತವಸರದಿಂದ ಕನಿಕರದಿ ೨೮

ಭಾವಶುದ್ಧಿಯ ಭಜನೆಗಂದಾ
ಭಾವಜಾಂತಕನಾರಿಯೊಲವಿಂ
ದೋವಲಾ ಸುಮವೀವೆನೆನುತಲುದಾರಭಾವದಲಿ
ಆವಗಂ ಶ್ರೀಗಿರಿಗೆ ಬಾರಾ
ಭಾವಬೇರೆಂದಿರದೆಯಿರೆ ಮುಂ
ದಾವ ಭಯಮಿನಿತಿಲ್ಲವೆಂದೆನುತೊರೆಯುತಾ ದೇವಿ ೨೯

ಮೈಗರೆಯ ಶರ್ವಾಣಿ ಕನಸಿನ
ಲಾಗಲೆಳ್ಚರಿನೆಳ್ದು ಗುರುವನು
ರಾಗದಿಂ ಶಾಸನವ ಲಿಖಿಸಿದನಾ ಶಿಲಾಂತರದಿ
ನಾಗಧರನರ್ಧಾಂಗಿ ಸೇವೆಯ
ದಾಗಿ ರಚಿಸಿದನೊಂದು ಧನವ ವಿ
ಭಾಗವನು ಮುಂದೈತಹರ ಕುರುಪಿಂಗೆ ಬರವಸದಿ ೬೦

ಬರೆಯಿಸುತೆ ಶಾಸನವ ನೆರೆ ಪಿಂ
ದಿರುಗಿದನು ಗುರುದೇವ ಮುದದಿಂ
ಮೊರೆಯೆ ವಾದ್ಯನಿನಾದ ಕಹಳಾರವ ವಿಶೇಷದಲಿ
ಬಿರುದಿನಾ ಸಮುದಾಯ ಸೊಬಗಿಂ
ಮೆರೆಯುಲಂದಾ ಪಯಣ ಸರಿದಾ
ದರವನಿತ್ತುದು ಚರನ ಪರಿಕರವಂದೆ ವಿಭವದಲಿ ೩೧

ಪರಿಜನರನೊಡವೆರಸುತಂದಾ
ವರಣಪುರಸಿಂಹಾಸನಾಧೀ
ಶ್ವರ ವಿಲಾಸದಿ ಮಠವನೊಳಪುಗುತಾದರದಿ ಗುರುವ
ಚರಣಕರುಣವಲಂಬಿಕಾಧವ
ದರುಶನಮುದಾಪ್ತಿ ನುತ ಶಿಷ್ಯಂ
ಗೊರೆದನಭಿಮತದಿರುವನೀಶಾನೇಶ ಗುರುನಾಥ ೩೨

ಧೀರ ನಿನಗಾನೀವೆನೆನ್ನಧಿ
ಕಾರವನು ಜಿತಮಾರ ನೆರೆ ಸು
ತ್ತೂರುಸೂತ್ರವ ನಡೆಯಿಸೆಲೆ ಸಿಂಹಾಸನಾಗ್ರದಲಿ
ಸೇರುವೆಂ ಶ್ರೀ ಗಿರಿಯ ಕುಹರವ
ಮೀರೆ ನಾಂ ಭ್ರಮರಾಂಬೆಯುಭಯುವ
ಕೋರುತಾ ಶುಭದಿನವ ಪಟ್ಟಂಗಟ್ಟಲೆಣಸಿರುವೆ ೩೩

ಮುಸಡಿನಾಮುವ ಪುರಕೆ ಮೆರೆಯಿಸು
ಪಸರಿಪುದು ರಾಜೇಂದ್ರಚೋಳನ
ಜಸವ ರಸೆಯೊಳಗಸಮಸಾಹಸ ಗುಣವಿರಸದಿಂದ
ಪೊಸತೆನಿಸು ಗುರುಪೀಠವನು ನೆರೆ
ಬಿಸಗೊರಲನಾಶಯದಿ ಬಂದೀ
ವಸುಧೆಯಲಿ ರಾಜಿಸುವ ಸಿದ್ಧೇಶ್ವರನ ಜಾತ್ರೆಯನು ೩೪

ಮಾಡಿಸುತಲಾ ಮೂರ್ತಿಯನು ಕೊಂ
ಡಾಡಿ ಮನುಜಾವಳಿಗೆ ಸೌಖ್ಯವ
ನೀಡಿ ಸುತ್ತೂರೆಡೆಯ ಮಡುವಿನ ನೀರ ರವಿದಿನವ
ನೋಡಿ ತರಿಸುತಲಲ್ಲಿ ನೀನೆಡೆ
ಯಾಡಿ ಭಕ್ತಿಯ ಕೂಡಿ ವಿನಯದಿ
ಬೇಡಿ ಮೊದಲಭಿಷೇಕ ರಚನಕ್ರಮದಲಿಹುದೆನುತ ೩೫

ಬರಿಸುತಂ ನಿಜಲಿಂಗಮೂರ್ತಿಯ
ಕರೆಯಿಸುತೆ ವೈದಿಕನಿಕಾಯವ
ಗುರುತರದ ಪಟ್ಟಾಭಿಷೇಕವ ರಚಿಸುತೊಲವಿಂದ
ಪುರಜನರ ಹರಸುತ್ತಲಂದಾ
ದರದಲನಿಬರ ಸಂತವಿಸುತಾ
ವರಣಪುರಿ ಸೌಭಾಗ್ಯವನು ಪಿಂದುಳುಪಿ ಪೊರಮಟ್ಟ ೩೬

• ಅಂದು ಮೆರೆದಾ ಕುಂಭಸಂಭವ
ನಿಂದ ನೆರದಾಶ್ರಮವ ನುಸುಳುತ
ಬಂದು ಸೇರ್ದನು ಬಂಧುರಾಸನಬಂಧ ಗಜವನಕೆ
ಮುಂದುವರಿದನು ಮುಡುಕುದೊರೆಗಾ
ನಂದದಿಂ ಕೆಲದಿನಗಳೆಯೆ ಬಳಿ
ಸಂದು ತಾ ಕಿಷ್ಕಿಂಧೆಯಿಂ ಶ್ರೀಶೈಲಕೈತಂದ ೩೭

ಕಾಲಭೀತಿವಿನಾಶಕರೆ ಕರು
ಣಾಲವಾಲೆ ಯಶೋವಿನೋದೆ ವಿ
ಶಾಲಮಹಿಮಾಗಾರೆ ನತಮುನಿವರದೆ ಶರ್ವಾಣಿ
ಶೀಲೆ ಭೂಧರಬಾಲೆ ಮಣಿಮಯ
ಮಾಲೆ ಸಿಂಹಾರೂಢೆ ಸುರಪರಿ
ಪಾಲೆ ಕೊಡು ಚಾಮುಂಡಿಕಾಂಬೆಯೆ ನತರಭೀಷ್ಟಗಳ ೩೮

# ನಿಜಲಿಂಗಶಿವಾಚಾರ್ಯ ಕಥನಂ

ಜ್ಞಾನಮುಕ್ತಾಲಮದ್ಯೈದ ದಯದಿಂ
ಸೋಮಧರಸನ್ಮಂತ್ರಮಹಿಮೆಯ
ನೇಮದಲಿ ಸಲಹಿದನು ಭಕ್ತರನಾಗ ನಿಜಲಿಂಗ

ಶ್ರೀಗಜಾನನಜನಕ ಪರಶಿವ
ನಾಗಧರ ಪರಮಾಂಬಿಕಾಧವ
ಯೋಗಿಹೃದಯನಿವಾಸ ಕಲುಷವಿದೂರ ಹಿತಭಾವ
ಶ್ರೀಗುಹಾನಂದಾಬ್ಧಿ ಶಶಧರ
ರಾಗರಹಿತಾನಂತ ಸುಖಕರ
ಬೇಗ ನೀ ಕುಡು ಸೋಮನಾಥನೆ ಧರೆಗೆ ಮಂಗಲವ ೧

'ಕೇಳುಕೇಳೆಲೆ ಸಿದ್ಧಲಿಂಗ ಕೃ
ಪಾಳು ಚಕ್ರಪುರಾಂತರಾಳದ
ಲಾಳಿದನು ಪಂಚಾಸ್ಯಪೀಠಾಧೀಶ ಸದ್ಗುರುವ
ಏಳಿಗೆಯ ನಿಜಲಿಂಗಮೂರ್ತಿಯ
ಬಾಳುವಿಕೆಯಿಂದಾದ ಕಥನವ
ಪೇಳುತಿಹೆನೆಂದೊರೆದನಾ' ಶಿವರಾತ್ರಿಗುರುದೇವ ೨

ಪರಮನಿಃಶಾನೇಶನಾ ಶ್ರೀ
ಗಿರಿಯ ಕುಹರದಿ ತಪದಲುಂದುರೆ
ಮೆರೆದ ಕುರುಪದನರಿದು ನಿಜಲಿಂಗಾರ್ಯಗುರುಮೂರ್ತಿ
ಬೆರೆದ ಬಕುತಿಯನಾದರದಿ ಗುರು
ವರನು ಶಿವರಾತ್ರೀಂದ್ರ ಮೂರ್ತಿಯು
ಸುರುಚಿರದ ಗದ್ದುಗೆಯ ರಚಿಸಿದ ನೂತನಾಂಕದಲಿ ೩

ಆದಿಗುರು ಶಿವರಾತ್ರಿದೇವನ
ನಾದಬಿಂದುಕಲಾಸ್ವಭಾವನ
ಪಾದಪದ್ಮಮಹಾಮಹಿಮೆಯಿಂದಾತನಾ ಶಿಷದಿ
ವೇದಸದನನ ಗದ್ದುಗೆಯನ
ತ್ಯಾದರದಿ ವಿರಚಿಸುತ ಗುರುವಾ
ಮೇದಿನಿಯು ಕೊಂಡಾಡೆ ಲಿಖಿಸಿದನಂದೆ ಶಾಸನವ ೪

ಧರಣಿಪತಿ ರಾಜೇಂದ್ರಚೋಳನ
ಸುರುಚಿರಾಮಳಕೀರ್ತಿ ಪಸರಿಸೆ
ಪರಮಗುರು ನಿಜಲಿಂಗ ಕರುಣಾಸುಧೆಯ ಸೂಸುತಲೆ
ಬರುವ ಶರಣನಿಕಾಯುವಿರೆ ಪತಿ
ಕರಿಸಿ ಶಿವರಾತ್ರೀಶನಭಿಮತ
ವೆರಸುತೀಶಾನೇಶಕರಕಂಜಾತನೆಸೆದಿರ್ದ ೫

ಧರಣಿಯಲಿ ಕಲ್ಯಾಣನಗರಿಯ
ಶರಣಸಂಚಯ ಬಸವರಾಜನ
ಪರತರಾಶ್ರಯದಿಂದೆ ಹರಿಸದೆ ತೆಂಕಣದ ದೆಸೆಗೆ
ಬರುತಲಾ ನಿಜಲಿಂಗಮಹಿಮಾ
ಕರನೆನಿಪುಡಂದಾ ಪ್ರದಕ್ಷಿಣ
ಪುರಿಗೆ ಬಂದುದು ಸಡಗರದೆ ಸೋಮೇಶ್ವರನ ದಯದಿ ೬

ನೆರೆದುದಗಣಿತಗಣವಿಸರ ಸ
ದ್ಗುರುವ ಪದಸಾರಸದಿ ಹುದುಗಿಹ
ಕರುಣದಿಂದೊಗೆದಾ ರಸಾಂಬುಧಿಗಿಳಿಯುತವನಿಯಲಿ
ಅರಸ ಬಿಜ್ಜಳನನುವಿನಲಿ ಬಸ
ವರಸ ಸುತ ತರುಣೀಸಮೇತದಿ
ತೆರಳೆ ಕಾನನಕಿಂದು ನಾವೈತಂದೆವೆಂದೆನುತ ೭

ಚರಪದಾಬ್ಜಭ್ರಮರನಮಳಿನ
ಶರಣಸಂಕುಲ ಕುಮುದಸಖ ಮಾ
ದರಸಸುಕುಮಾರಕನ ಚಿತ್ರವಿಚಿತ್ರಮಹಿಮೆಗಳ
ನೊರೆದೊರೆದು ಗುರುವಿದಿರಲಂದಾ
ವರಣಪುರಿಯಲಿ ಸುಖದಿ ನೆರೆದಿರೆ
ಮೆರೆದರಾ ಶಿವಶರಣರೆಲ್ಲ ವಿನೋದಭಾವದಲಿ ೮

ಅನಿತರಲಿ ರವಿತನಯ ರೋಹಿಣಿ
ಯನುಮತಿಯ ಗೃಹಕ್ಕೈದೆ ಭೂಮಿಯ
ನನುಗೊಳಿಸಲಾ ಕ್ಷಾಮದೇವತೆ ಚಿಂತಿತಾಶಯದೆ
ಘನಮಹಿಮ ನಿಜಲಿಂಗಮೂರ್ತಿಯ
ಮನಸಿಜಾರಿಯೆಯೆನುತ ಯೋಚಿಸಿ
ಕೆನೆದುದಂದಾ ಸುಜನಸಂಕುಲ ಮಂತ್ರಪಠನೆಯಲಿ ೯

ಬಂದು ಗುರುವರನಡಿಗೆರಗುತ್ತೈ
ತಂದ ಹದನವನರುಪಿ ನುಡಿತೊದ
ಲಿಂದಲಿರಲದನೊಂದನುಸಿರ್ದುದು ಜನದ ಸಂದಣಿಯು
ಹಿಂದೆ ಗೌತಮಾಯಮಿವರನು ಬಳಿ
ಸಂದವರ ಪೊರೆದಂದ ಪರಮಾ
ನಂದಿ ಸಲಹೈ ಸೆರೆವಿಡಿದು ನೀಂ ಕ್ಷಾಮದೇವತೆಯ ೫೦

ಎಂದು ಮೆಲ್ಲಡಿಗೆರಗಿ ನತಜನ
ವೃಂದ ಬಂದೆಡರಿಂದ ನೊಂದೆವು
ತಂದೆ ನೀಂ ಗುರುದೇವ ಕಾವುದೆನುತ್ತಲುರೆ ಕೊರಗೆ
ಆಂಪನಿಬರಿಂಗಭಯಮಿತ್ತುರೆ
ನೊಂದು ಮಾನಸಗೃಹದಲಿ ಚಿದಾ
ನಂದಮೂರ್ತಿಯು ಪೇಳ್ದ ಮುಂದಣ ಕಥನಸಂಗತಿಯ ೮೧

ಪರಮಶಿವಪಂಚಾಕ್ಷರಿಯನಿರ
ದೊರೆಯೆ ನೆರೆ ಬರಗಾಲ ಸರಿದಾ
ಸರೆಯು ದೊರೆವುದದೆಂದು ಸಾರುತಲಿಹುದು ಯಮಿನಿಚಯ
ಧರೆಯಲಿದು ಪುಸಿಯಹಡೆ ತಾನಂ
ದುರುಳುವನು ಕಮಲಾಪ್ತ ನಭದಿಂ
ಪೆರತದೇನುಂ ಸಲ್ಲದೀ ಕ್ಷಾಮದ ನಿವಾರಣೆಗೆ ೮೨

ತ್ರಿಣಯನನ ರೂಪಕನೆನಲು ಗುರು
ಮಣಿದು ಮಹಿಮಾಸ್ಪದನ ಪಾದಕೆ
ಗುಣವಿಲಾಸಕ ಭಸ್ಮಲೇಪಾನಂದ ಮಂತ್ರಗೃಹ
ಅಣುಗರಿಂಗೆಣೆಯಾವು ಜಂಗಮ
ಗಣದ ಚಿಂತಾಮಣಿಯೆ ಪರುಷದ
ಕಣಿಯೆ ಮಂತ್ರದಲಾರು ವಿಗಡರು ಪೇಳ್ವುದೆನೆ ನಿಕರ ೮೩

ಪಂಚಮುದ್ರಾಧಾರಣಾಂಕಿತ
ಸಂಚಿತಾಲಂಕಾರ ಸುಚರಿತ
ಪಂಚಬ್ರಹ್ಮವಿಲಾಸ ಪಂಚಾಚಾರ ಮತಿಸಾರ
ಚಂಚಲಾಶಯದಿಂದ ಮಾನವ
ಸಂಚಯಮದಿರೆ ಬೋಧಿಸಿದನಾ
ಸಂಚ ಪಂಚಾಕ್ಷರಿಯ ಮಹಿಮೆಯು ನೈಜಭಾವದಲಿ ೮೪

ಮನಸಿಜಗೆ ತಾಂ ಶ್ವೇತ ನಾಮಾ
ವನಿಪನೊಡನೆಯೆ ಸೋಲ್ದು ಕಡೆಯೊಳ
ಗಿನಕುಮಾರನ ಬರವರಿದು ರಂಭೋಪದೇಶದಲಿ
ಮನಸಿಜಾರಿಯನೊಲಿಸಿ ಮರಣದ
ಘನವಿಕಾರವನುಳಿದು ಮೋಕ್ಷಾಂ
ಗನೆಯ ಸೇರ್ದನವಂದ ಪಂಚಾಕ್ಷರಿಯ ಮಹಿಮೆಯಲಿ ೧೫

ಮಲುಹಣೆಯ ನಾಮದಲಿ ವೇಶ್ಯಾ
ಲಲನೆಯಿರಲಂದೊರ್ವಳಾಕೆಯ
ಸೆಲಸೊಬಗಿಗೊಲಿದಂದ್ರ ಸುಪ್ರೌಢಾಂಗನಾಮಣಿಯ
ಕಲೆಯ ನಿರ್ವಾಣವನರಿದು ರತಿ
ಕಲೆಯಿನಳಿಯುವ ಭುಜಗ ರಜತಾ
ಚಲವ ಸೇರ್ದನು ಪರಮಪಂಚಾಕ್ಷರಿಯ ಮಹಿಮೆಯಲಿ ೧೬

ಪರಮಯತಿ ಸಾನಂದ ಕಾಲನ
ಪುರದಿರುವನದನರಿದು ತಾನಾ
ದರದಲದ ಪುಗುತಂದೆ ನಾರಕಿಗಳ ನಿಕಾಯವಿಲೆ
ನರಳುತಿರಲ್ವತವರಪಾಯವ
ನಿರುಕಿಸುತ ಕೈಲಾಸನಗರಿಗೆ
ಹರಿಸಮಿಗೆ ಕಳುಪಿದನು ಪಂಚಾಕ್ಷರಿಯ ಮಹಿಮೆಯಲಿ ೧೭

ಭರದೆ ದಂಭಾಸುರನ ವಧೆಗಾ
ಹರಿಯ ನರನಾರಾಯಣಾಕೃತಿ
ವೆರಸಿ ಪರಮನ ನಿಲಿಸಿ ದಳಯುಗ್ಮದಲಿ ಪತಿಕರಿಸಿ
ವರಸಮೂಹವನೊಂದುತಾತನ
ಧುರದಲೋಡಿಸಿ ಬದರಿಕಾಶ್ರಮ
ದರಸನೆನಿಸಿದ ವಿಷ್ಣು ಪಂಚಾಕ್ಷರಿಯ ಮಹಿಮೆಯಲಿ ೧೮

ಕಂಬುಚಕ್ರಗದಾಧರನು ಶಿವ
ಶಂಭುವಿನ ಪಾದಾಂಬುಜವ ನೆರೆ
ನಂಬಿ ಪೂಜಿಸುತಿರ್ದನಾ ಪುತ್ರಾಭಿಲಾಷೆಯಲಿ
ಜಾಂಬವಾತ್ಮಜೆಯೆನಿಸಿ ಮೆರೆದಾ
ಜಾಂಬವತಿಯ ಸುಗರ್ಭದಲಿ ಸುತ
ಸಾಂಬನುದಿಸಿದನಂದೆ ಪಂಚಾಕ್ಷರಿಯ ಮಹಿಮೆಯಲಿ ೧೯

ಧುರಜಯಪ್ರದಕಾಗಿ ಪೂರ್ವದಿ
ಭರದೊಳಗ್ರಜನಾಜ್ಞೆಯಿಂದೈ
ತರುತ ರಜತಾಚಲಸಮೀಪದಲಿಂದ್ರಕೀಲದಲಿ
ನಿರತ ತಪವಾಚರಿಸಿ ಹರನಿಂ
ಶರತತಿಯನುರೆ ಪೊಂದಿ ಧರೆಯಲಿ
ಮೆರೆದನಂದಾ ಪಾರ್ಥ ಪಂಚಾಕ್ಷರಿಯ ಮಹಿಮೆಯಲಿ ೨೦

ಖ್ಯಾತಿಯಿಂ ಗೋದಾವರಿಯನೀ
ಭೂತಲದಿ ಸೃಜಿಸುತ್ತಲಂದಾ
ಭೂತನಾಥನ ದಯದಿ ಮೋಕ್ಷಾಪೇಕ್ಷಗುಣವಂತ
ಗೌತಮನು ಮಳೆಯಂ ಸುರಿಸುತ ಸು
ನೀತ ಬುಧರನು ರಕ್ಷಿಸಿದ ಸಂ
ಪ್ರೀತಿಯಿಂದಾ ಶಿವನ ಪಂಚಾಕ್ಷರಿಯ ಮಹಿಮೆಯಲಿ ೨೧

ಪದುಳ ಪಂಚಾಕ್ಷರಿಯ ಮಹಿಮೆಯಿ
ನೊದಗುವುದು ಸಕಲೇಷ್ಟಸಂಪದ
ಮದನರಿದು ನೀವರಿದರದ ಬರಕಂದೆ ಕಡೆಗಾಲ
ಹದನವಿಂತಿರ್ಪುದನೊರೆದೆ ನಾ
ನಿದನು ನೀವಿಂದೇನೆಸಗುವಿರಿ
ಪದಪಿನಿಂದುರೆ ಪೇಳಿರೆನಲಂದೊರೆದುದಾ ವಿಸರ ೨೨

ಭಾವಜಾರಿಯ ಮಂತ್ರಪಠನಾ
ಭಾವವನೆ ಕಲ್ಪಿಪುದು ಸದ್ಗುಣ
ಭಾವನಿನಗುಂಟರರೆ ದೀಕ್ಷಾಕ್ರಮವನನುಸರಿಸಿ
ಶೀವಿದತಿದಯದಿಂದ ಬೋಧನೆ
ಗೈವುದೆಲೆ ಗುರುನಾಥ ನೀಂ ಮ
ಜ್ಜೀವವಲ್ಲವೆ ಕಾವುದೆನೆ ನಿಜಲಿಂಗನಿಂತೆಂದ ೨೩

ಹರನ ಪರತರಮತದಿ ನೀವಿಂ
ದುರುತರದಿ ಜನಿಸಿಹಿರಿ ಪಂಚಾ
ಕ್ಷರಿಯನರಿದೊಡೆ ಕಾಣ್ಬರಾತನ ನೆನೆಯೆ ಮಾನಸದಿ
ಅರಿವಿನರಿದೊಡೆ ಕಿರಿಯನಾದರು
ಸುರುಚಿರೆಯ ಮೋಕ್ಷಾಂಗನೆಯನುರೆ
ಬೆರೆಯುವನು ಸಿದ್ಧಾಂತವಿದು ಕೇಳೆಂದನಾಚಾರ್ಯ ೨೪

ಧರಣಿಯಲಿ ವರವೀರಶೈವನು
ಪೊರೆಯುವನು ತಾನಾಗಲಪ್ಪಾ
ವರಣವಿರೆ ಗುರುಕರುಣದಿಂದಾ ಶಿವನ ಭಕ್ತಿಯಲಿ
ನಿರತದಲಿ ವರನಿತ್ಯಕರ್ಮಾದಿ
ಬೆರೆದು ಶಿವಲಿಂಗವನು ಪೂಜಿಸ
ಲರಿವಿನರಮನೆಗರಸನಾತನೆ ಕೇಳಿ ನೀವೆಂದ ೨೫

ಕರ್ಮನೈಮಿತ್ತದಲಿ ಸೂತಕ
ವರ್ಮವಿಹುದದರಿಂದ ಗುರುವನೆ
ಪೆರ್ಮೆಯಿಂ ಪೂಜಿಸುತ ತೀರ್ಥಪ್ರಸಾದವನೆ ಕೊಂಬ
ಧರ್ಮಮಾರ್ಗವನನುಸರಿಸಿದವ
ನಿರ್ಮಲಾಂತಃಕರಣಿಯೆನಿಸುವ
ಕರ್ಮಹರಲೋಕವನೆ ಸೇರುವನಾತ ಕೇಳೆಂದ ೨೬

ಬಂದ ಬಳಿಗವನೊಂದಿ ಜಂಗಮ
ಸುಂದರನ ಚರಣಾರವಿಂದವ
ಚಂದದಿಂದರ್ಚಿಸುತ ನೆರೆ ಕಾಮ್ಯಾಭಿಲಾಷೆಯಲಿ
ಮುಂದುವರಿವವನವನೆ ಸದ್ಗತಿ
ಮಂದಿರದಿ ವಾಸಿಸುವನವ ಲಸ
ದಿಂದುಧರನಗರಿಯಲಿ ರಾಜಿಪನವನೆ ಕೇಳೆಂದ ೨೭

ಲಿಂಗತೀರ್ಥವೆ ದಿನದಿನದ ಕ
ರ್ಮಂಗಳಲಿ ಬೆರೆದಿಹುದು ಧರೆಯಲಿ
ತುಂಗಗುರುವಿನ ತೀರ್ಥ ನೈಮಿತ್ತಿಕದ ಕಾರಿಯದ
ಸಂಗದಲಿ ಬೆರೆದಿಹುದು ಜಂಗಮ
ಲಿಂಗತೀರ್ಥವೆ ಕಾಮ್ಯಕರ್ಮದ
ಸಂಗವಾದುದರಿಂದ ತೀರ್ಥದಿ ಮಹಿಮೆಯಿಹುದೆನುತೆ ೨೮

ಒಂದುದಿನ ಶುಭಲಗ್ನದಲಿ ಪುರ
ವೃಂದಮನಿತನು ದೀಕ್ಷೆಯಭಿಮತ
ದಿಂದಲುರೆ ಸಂತುಷ್ಟಿಗೊಳಿಸುತಭೀಷ್ಟಮಂತ್ರವನೆ
ಚಂದದಿಂ ಬೋಧಿಸಲು ಪರಮಾ
ನಂದದಿಂದಾ ಚೌಡದೇವನ
ಮುಂದ ಪಂಚಾಕ್ಷರಿಯ ಮಹಿಮೆಯಿನೆಸೆದನವನಿಯಲಿ ೨೯

ಪುರದ ಮಧ್ಯದಿ ನಿಂದು ಪಂಚಾ
ಕ್ಷರಿಯು ಮಂತ್ರದ ಪಠನೆಯಲಿ ದಿನ
ಕರನ ಸುಪಥವನೀಕ್ಷಿಸುತಲಾ ಮುಸಡಿಚೊಡಾರ್ಯ
ಪರಶಿವನ ಮಳೆಗರೆಯಿಸೆನುತಾ
ಗುರುವರನ ಪದಪಂಕಜದಿ ತಾಂ
ಬೆರೆಯುತನುಸಂಧಾನಿಯೇಕಾಸನದಿ ಶೋಭಿಸಿದ ೩೦

ಅನಿತರಲಿ ಮಳೆಗರೆಯಲುರೆ ಭೂ
ವನಿತೆ ಬಲುಸೊಬಗಿಂದ ಗುರುಪದ
ವನಜದಲಿ ನಿಜದರಿವಿಕೆಯನರುಪಲ್ಕೆ ಬಂದಳೆನೆ
ಜನಿತ ಗಂಧಸುವಾಸನೆಯಲಾ
ಜನವಿನುತೆ ಶೃಂಗಾರಗುಣವಾಂ
ತನುವಿನಿಂ ಸುಖದಿಂದ ಬಾಳ್ವಪೆನೆನುತಲಾ ಧರಣಿ ೩೧

ಎತ್ತನೋಡಿದೊಡತ್ತ ಬೆಳೆಗಳ
ವೊತ್ತಮೆಸದಿರಲತ್ತನೋಡಿದೊ
ಡತ್ತ ಪಂಚಾಕ್ಷರಿಯ ಪಠನೆಯುವೊತ್ತವೆತ್ತತ್ತ
ಚಿತ್ತಜಾರಿಯ ಭಜನೆಯಿರೆ ತಾ
ನೆತ್ತನೋಡಿದೊಡತ್ತ ಗುರುನೆನ
ಪೆತ್ತನೋಡಿದೊಡವನ ಜಪವುಮ್ಮಾಯ್ತುಲ್ಲೆ ಚೊಡಕನ ೩೨

ಜರಿದು ತಾನರಿವರ್ಗವಾರನು
ನೆರೆದು ಪಂಚಾಕ್ಷರಿಯ ಧೀರನು
ಮಿರದೊರೆಯುತದ ಪುರದವೀಧಿಯಲಂದೆ ಮಂತ್ರವನು
ಸುರಿಯಿಸಿದನಾ ವೃಷ್ಟಿಯನು ನೆರೆ
ಮರೆಯಿಸುತ ಬರಗಾಲಗೀಲವ
ಮೆರೆಯಿಸಿದನಾವ್ವರಣ್ಣಪುರಿಯಾ ಮುಸಡಿಚೊಡಾರ್ಯ ೩೩

ಅನಿತರಲಿ ಕಲ್ಯಾಣಪುರದಿಂ
ದನಘ ತಾನೆಂದೊರ್ವ ಜಂಗಮ
ನನಿಬರೊಡನೈತಂದನಾ ನಿಜಲಿಂಗನಾಥನಲಿ
ಜನಪನಹ ಬಿಜ್ಜಳನ ಪರಿಯನು
ಘನಮಹಿಮ ಬಸವೇಶನಿರವನು
ಮನಸಿಜಾಂತಕನುರ್ಧಯುವನುರೆಯೊರೆದನತಿಶಯದಿ ೩೪

ಹರನನುಜ್ಞೆಯನಾಂತು ಬಸವೇ
ಶ್ವರನು ಶಿವಧರ್ಮವನು ಧರಣಿಯ
ಲಿರದೆ ತಾಂ ಸ್ಥಾಪಿಸುತಲಂದು ತಪೋವನದಲಿರಲು
ಅರಸ ಬಿಜ್ಜಳನರಿದದನೆ ಸಾ
ದರದೆ ಭಕ್ತಿಯ ಗುಣದಿ ಪುನರಪಿ
ಕರೆಯಿಸಿದ ಕಲ್ಯಾಣಪುರಕುರೆ ನೊಂದವಾನಸದಿ ೩೫

ಎನಲು ನೋಳ್ಪಾತುರವ ತನ್ನಯ
ಮನದಲೆಣಿಸುತಲಂದೆ ಗುರುವರ
ದಿನಪಕೋಟಿವಿಕಾಸ ಮುಂದಿನ ಕಜ್ಜಕಳವಡಿಸಿ
ದಿನಶುಭದಲಿರೆ ಸಿದ್ಧನಂಜನಿ
ಗನುವಿನಿಂದಾ ಪಟ್ಟಗಟ್ಟುತ
ಲನಿಬರಿಂದೊಡಗೂಡಿ ಮುಸುಡಿಯ ಚೂಡದೇವನನು ೩೬

ಕರೆದು ಸನಿಹಕೆ ಶುಭಪುರಿಗೆ ನಾ
ವಿರುವರಲಸಿಕೆಯುಳಿದು ಬಸವೇ
ಶ್ವರ ಮಹಾಶಿವಶರಣನಾ ಮಹಿಮಾವಲೋಕನಕೆ
ಪೊರಡಬೇಕೆನುತರಿದೆ ನಾನೆನು
ತೊರೆದು ನಿಜದಲಿ ಬೆರೆದು ತಾನಾ
ವರಣಪುರಿಯಿಂ ಬಿರುದಿನಲಿ ನಿಜಲಿಂಗ ಹೊರವಂಟ ೩೭

ಪೂತೆ ಭುವನಖ್ಯಾತೆ ನಿಗಮಾ
ತೀತೆ ಶಿವಸಂಪ್ರೀತೆ ಷಣ್ಮುಖ
ಮಾತೆ ಲಲಿತಾಭಿದೆ ವಿಶಾರದೆ ಶಾರದಾದಿನುತೆ
ಸಾತಿಶಯ ಹಿತಗೀತೆ ದುರಿತವಿ
ಘಾತೆ ಸುಗುಣೋಪೇತೆ ಭೂಧರ
ಜಾತೆ ಕುಡು ಚಾಮುಂಡಿಕಾಂಬೆಯೆ ಧರೆಗೆ ಮಂಗಲವ ೩೮

# ಸಿದ್ಧನಂಜದೇಶಿಕೇಂದ್ರ ಕಥನಂ

ಸಿದ್ಧಗಿರಿಯಾಲಿ ಪರಮರೇವಣ
ಸಿದ್ಧನಿಂ ಸಿದ್ಧಿಯಪಡೆದ ವರ
ಸಿದ್ಧನಂಜಂ ರಾಜಿಸಿದ ಸುತ್ತೂರು ಪೀಠದಲಿ

ಶ್ರೀಮದಮಲಾನಂದ ದಶರಥ
ರಾಮವರದ ನಿರಾಮಯಾಶ್ರಯ
ಭೀಮ ಸರ್ವಾಧಾರ ಮುನಿ ಹೃತ್ಪದ್ಮ ಕಲಹಂಸ
ಆ ಮಹಾರಜತಾದ್ರಿಚಾಪ
ಪ್ರೇಮಿ ಪರತರ ತತ್ತ್ವಮೂರ್ತಿಯೆ
ಕಾಮಹರ ಕುಡು ಸೋಮನಾಥನೆ ಧರೆಗೆ ಮಂಗಳವ ೧

ಶುದ್ಧವಿದ್ಯಾಮೋದ ಜಿತಮದ
ಸಿದ್ಧಲಿಂಗಾಖ್ಯಾರ್ಯ ಲಾಲಿಸು
ಸಿದ್ಧನಿಚಯವನೊಂದುತಾ ಚರವೃಂದವನೆ ಕಾಯ್ದ
ಸಿದ್ಧನಂಜಯತೀಂದ್ರ ವಿನತರ
ನುದ್ಧರಿಸಿದುದನೊರೆವೆನೆನುತಾ
ಬುದ್ಧತತ್ತ್ವದಿನರುಪಿದನು ಶಿವರಾತ್ರಿ ಗುರುನಾಥ ೨

ಪ್ರತಿದಿನದಿ ಗುರುಸಮಾಧಿಯನಿರ
ದತಿಶಯದಿ ಬಳಸುತ ನಿರಘ ತಾ
ನತಿಥಿಸತ್ಕಾರವನು ಕೈಕೊಂಡಿರುತಲಭಿಮತದಿ
ಕ್ಷಿತಿಯೊಳೊಲ್ದು ನಿರಾಕುಳದಿ ಶಿವ
ಮತವನುದ್ಧರಿಸುತೆ ಲಸತ್ಸ
ದ್ಗತಿಪಥವನರುಪಿದನು ಕಪ್ಪಿನ ನಂಜಯತಿಪತಿಗೆ ೩

ಪರಮಶಿವನಪರಾವತಾರನ
ಸುರುಚಿರಾಮಳಘನನ ಸದನಾ
ವರಣದೆಡೆಯಾವರಿಸೆ ಕಪಿಲಾಜಲವಿಶಾಲದಲಿ
ಚರವರನ ಪೂಜೋಪಕರಣಕೆ
ಭರದಿನೊದಗಲ್ಕಂದೆ ವಿಘ್ನವು
ದಿರದೆಯುದರಿಂ ಸಿದ್ಧನಂಜಯತೀಂದ್ರ ಗುಣಸಾಂದ್ರ ೪

ಗುರುವೆ-ನಾನನುದಿನದಿ ನಿನ್ನಯ
ದರುಶನವನೊಂದದೆಯೆ ಭುಂಜಿಸು
ತಿರುವೆನೇ ನಾನತಿಥಿಗಳನುಪಚರಿಸದಲೆ ಜಗದಿ
ಅರಿವಿನಿಂದೀ ತನುವ ನಿಜಪದ
ಸರಸಿಜದಿ ಬೆರೆಯಿಸುವೆನೆನುತಂ
ದೊರೆದು ಪದ್ಮಾಸನದೆ ಪೂಜಾಗೃಹದಿ ಮಂಡಿಸುತೆ ೫

ಲಿಂಗಪೂಜೆಯು ಮಾಡಿದನು ಗುಣ
ತುಂಗನಂದಾಚಾರಲಿಂಗವ
ಸಿಂಗರದ ಗುರುಲಿಂಗವಾ ಶಿವಲಿಂಗಮೂರ್ತಿಯನು
ಜಂಗಮಾಭಿದಲಿಂಗವಾ ಮು
ಕ್ತ್ಯಂಗನಾಲಿಂಗಿತ ಪ್ರಸಾದದ
ಲಿಂಗವನು ಪೂಜಿಸುತಲಂದಾ ಸಿದ್ಧನಂಜಾರ್ಯ ೬

ಗಂಗೆ ಜಗುನೆಯೆನಿಪ್ಪೆರಡರಾ
ಸಂಗಮದಿ ರಾರಾಜಿಸುತಲಿಹ
ರಂಗಮಂಟಪದಂತರಾಳದ ಚಿತ್ರತತ್ತ್ವದಲಿ
ಮಂಗಳಾಂಗ ನಿರಂಗ ಸುಮಹಾ
ಲಿಂಗವಿರಲುರೆ ಕುರುಪರಿದು ಗುಣ
ತುಂಗನಾತನ ಭಯದೊಳಾ ಮಾನಸದಿ ಪೂಜಿಸಿದ ೭

ಸುರುಚಿರಾಮಳಭಕ್ತಿಜಲಮಿರ
ಲೆರೆದು ಚಿದ್ಭಸ್ಮವ ಧರಿಸಿ ಗತಿ
ಗೆರೆಯುಗಂದಾ ವಿರತಿಗಂಧವನಂದೆ ಲೇಪಿಸುತೆ
ಇರದೆಯಂತಃಕರಣಮಿಂದ್ರಿಯ
ಮೆರೆಯಲದನಕ್ಷತೆಯು ತರದಿಂ
ದಿರಿಸುತರಿವೆಂಬುರುತರದ ಸುಮನಿಚಯವನೆ ಕೊಟ್ಟು ೮

ಹರಿಸ ಪೆಸರಿನ ಧೂಪವರ್ಪಿಸಿ
ಸುರುಚಿ ಪರಬಿಂದುವಿನ ದೀಪವ
ನಿರದೆಯುದನೆತ್ತುತೆ ವಿಲಾಸದಿನೆಸೆಯೆ ಪರಿಪೂರ್ಣ
ಸ್ವರಸಫಲದ ನಿವೇದನದಲುರೆ
ಪರಮಗುಣತಾಂಬೂಲವೀಯುತ
ಗುರುವರನು ಲಿಂಗಾಂಗಸಂಗದ ಭಾವದಿಂದಿರ್ದ ೯

ಅಂದು ಶಿವರಾತ್ರೀಶ ಯೋಗಾ
ನಂದವಮಂದಿರದೆಡೆಗೆ ತಾನ್ಯೆ
ತಂದು ದರ್ಶನವೀಯುತಂದಾ ಸಿದ್ಧನಂಜನನು
ಚಂದದಿಂ ಪರಸುತ್ತ ಶರಣರ
ವೃಂದ ಬಹಪರಿಯೊರೆದು ಭರದೊಳೆ
ಗಂದಿನಲಿ ಮೈಗರೆಯಲಾ ಗುರುನಾಥ ಕಣ್ದೆರೆದ ೧೦

ಗುರುವ ನೆನಪಿಂದಲ್ಲಿಗಲ್ಲಿಗೆ
ಚರಿಸಿ ಸುಳಿಸುಳಿದಾಡಿ ಮನದಲಿ
ಕೊರಗಿ ಬಂದಾತನನು ತೊರೆದೆನೆನುತ್ತ ಹಂಬಲಿಸಿ
ದೊರೆಯದಿರೆ ತನುವಿದನೆ ಜಲದಲಿ
ತೊರೆವನೆಂದಂದರಿದು ಚಪಲತೆ
ಮೆರೆಸಿ ಮುಂದರಿದರಸಿದನು ವರ ಸಿದ್ಧನಂಜಾರ್ಯ ೧೧

ದೊರೆಯೆ ಬಾ ಹೃದಯಾಂತರದಿ ನೀಂ
ನೆರೆಯ ಬಾ ವಚನಾಮೃತದಿ ನೀಂ
ಮೆರೆಯೆ ನೀನಾವರದಿ ಬಾಬಾ ಭಕ್ತಿಮಾನಸಕೆ
ನಿರುಪಮನೆ ಬಾರೆನುತ ನಿರಘನ
ಪರನಿರಂಜನ ನಿರಶನನ ಗುರು
ವರನನರಸುತಲಿರ್ದನಾ ವರಸಿದ್ಧನಂಜಾರ್ಯ ೧೨

ತೋರದಿರಲಾಕೃತಿಯು ನಾನೀ
ನೀರಿನೊಳಪುಗುವುದೆ ಸಹಜ ಗುರು
ಬಾರ ನೀನೆಲೆ ವೀರಶೈವಮತೋದ್ಧರಾಚಾರ್ಯ
ಬಾರ ನೀಂ ಗುರು ಸಾರ್ವಭೌಮ ವಿ
ಚಾರಪರ ಗುಣಧಾಮ ವರದ ವಿ
ಕಾರರೂಪವನಾಂತೆನೆನುತನುಪಾಗೆ ಬಗೆಯಿಂದ ೧೩

ಇರದಿರದೆಯಾ ಗದ್ದುಗೆಯಿನುರೆ
ಮೊರೆಯಲೋಂಕಾರದ ನಿನಾದವೆ
ಸರಿದು ಘನಮೂರ್ತಿಯನಪೇಕ್ಷಿಸುತುರೆ ನಿರೀಕ್ಷಿಸಿರೆ
ಮಿರುಮಿರುಗಿ ಶಿವರಾತ್ರಿಗುರುವರ
ದರುಶನವನಂದೀಯಲತ್ತಾ
ದರದಿ ರೋಮಾಂಚನದಲಾನಂದಾಶ್ರುವಿಂದೆಸೆದು ೧೪

ಬೆರೆದ ನಿಜದಿಂ ಪಾದಯುಗ್ಮವ
ನಿರದೆಯುಂದಾ ಬಾಹುಯುಗಳವ
ಹರಿಸಮಿಗಿಲಿಂದೆದೆಪಣೆಯನಾ ಕರವೆರಡುವೆರಸಿ
ಕರಣಚಯುಮಿರದೆಸಗಿರುವ ಬಹು
ದುರಿತವಿತತಿವಿನಾಶಕೋಸುಗ
ಗುರುವೆ ಸಾಷ್ಟಾಂಗದಿ ನಮಿಪೆ ನಾನೆಂದನಾಚಾರ್ಯ ೧೫

ಅನಿತನಿತರಲಿ ಸರಿಯೆಜಲಮಿರ
ದನಘ ತಾನುರೆ ಗದ್ದುಗೆಯ ನೆರೆ
ದನುವಿನಿಂದೊಳಪೊಕ್ಕು ಬಂಧಿಸುತಾ ಕವಾಟಗಳ
ಘನಗುರುವ ನಿರುಕಿಸುತ ನಿಜಪದ
ವನಜಕರುಣಾರಸವನೀಂಟುತ
ಜನಿತಸಂಭಾಷಣೆಯಲಿರ್ದ ನಿಜಾನುಭಾವದಲಿ ೧೬

ಮುಂದಿನಾಶಯುಪರಿದು ತಾನೈ
ತಂದು ಮಠಕಾನಂದತುಂದಿಲ
ನಂದು ಜಂಗಮವೃಂದವನೆ ತಣಿಸಿದನು ಭೋಜನದಿ
ಚಂದದಲಿ ರೇಣುಕನ ದರ್ಶನ
ದಿಂದಲುರೆ ಕೃತಕೃತ್ಯನಾಗ
ಲ್ಕೆಂದು ಸಿದ್ಧರ ಗಿರಿಗೆ ಪರಿಕರವೆರಸಿ ಹೊರವಂಟ ೧೭

ಇತ್ತಲಂತಿರಲತ್ತ ಜಂಗಮ
ವೊತ್ತಕಭಿನಮಿಸುತ್ತ ಪರಮ ಮ
ಹತ್ತಿಗೊಳಗಾಗುತ್ತಲಾ ಗುರುಬಸವರಾಜೇಂದ್ರ
ಮತ್ತಮಂದಾ ವಚನಗಳ ಪಾ
ಡುತ್ತ ಕಾಲಜ್ಞಾನವಮದನೊರೆ
ಯುತ್ತ ಕಲ್ಯಾಣದಿಂ ಕಪಡೀಕ್ಷೇತ್ರಕೈತರುತ ೧೮

ಬಸವರಾಜಂ ಸಂಗಮೇಶ್ವರ
ನೆಸೆವ ಪದಪಂಕಜವ ಪುಗಲಂ
ದಸಮನಾ ಪ್ರಭುವಿರದಲಾ ಶ್ರೀಗಿರಿಗೆ ತಾನೈದೆ
ಮಸಲೆವೆಳಗಿನ್ನಲೆಳ್ದು ಪ್ರಮಥ
ಪ್ರಸರವೊಡನಂದೈದಲಲ್ಲಿಗೆ
ಡಸವೆರೆದ ವಿಭು ಸಿದ್ಧಗಿರಿಗೈತಂದನನಿತರಲಿ ೧೯

ಸಲ್ಲಲಿತ ವಿಭುವಿರವ ನಿರುಕಿಸು
ತಲ್ಲಿರಲುವಾ ಶರಣಸಂಕುಲ
ರೆಲ್ಲರಾ ನವನಾಥಸಿದ್ಧಾಶ್ರಮವ ಪರಿಕಿಸುತ
ಮೆಲ್ಲನಂದಾ ಕದಳಿಯಾ ಬನ
ದೆಲ್ಲೆಯಲಿ ಸಂಚರಿಸುತಿರುತುರೆ
ತಲ್ಲಣಿಸುತಾತನ ಬಯಸುತಲ್ಲಿರ್ದುದಾ ವಿಸರ ೨೦

ಭರದಿ ನಿಜಯುವುದತಿಹಿತದಿ ವಿಭು
ವರನನಾ ಪಾತಾಳಗಂಗೆಯ
ಕರೆಯಲರಸುತಲಾವ ಗತಿಯೆಂದೊರೆದು ಚಿಂತಿಸಿರೆ
ಪರಶಿವನ ಪರಮಾಂಶಮಂದೈ
ತರುತ ಬಾಲಕರೂಪಿನಿಂದವ
ತರಿಸಿ ಮಾದೇಶ್ವರನ ನಾಮದಿ ನಿಂದುದರ್ತಿಯಲಿ ೨೧

ಸಾನುರಾಗದಿ ದಂಡಕರನಭಿ
ಮಾನದಿಂದುರೆ ನಿಂದ ಶರಣವಿ
ತಾನವಿವರವನರಿಯುತಾ ಸದ್ಧರ್ಮಮಾರ್ಗದಲಿ
ಭಾನುಭಾಸರೆ ಚಿಂತೆಯೇಕಭಿ
ಮಾನಿಯೆನಿಸಿಹನಾ ಪರಮ ನಿಮ
ಗೇನಿಹುದು ದುಮ್ಮಾನಮೊರೆಯುವುದೆಂದನಾ ಬಾಲ ೨೨

ಜಂಗಮಾಗ್ರಣಿಯೆನಿಪ ವಿಭುವಿನ
ಸಂಗದಿಂದುಪದೇಶ ದೊರೆಯದೆ
ಭಂಗಮಾನಸರಾದವೀ ಭವಬಂಧನದಿ ಸಿಲುಕಿ
ಇಂಗಿತವನದನರಿದು ಮಾಳ್ಪುದ
ನಂಗಹರ ತಾನರಿವ ಬಾಲಕ
ನಿಂಗೆ ನುಡಿಯಿದು ಸಲ್ಲದೆನೆ ಮಾದೇಶನಿಂತೆಂದ ೨೩

ಮುಂದೆ ತಾನಿಂದೊರ್ವ ಜಂಗಮ
ಚಂದದಿಂ ತೆರಳಿದುದ ನಾಂ ಮುದ
ದಿಂದಲೀಕ್ಷಿಸಿ ಬೆಸಗೊಳಲು ನೆರೆ ಸಿದ್ಧಗಿರಿಯೆಡೆಗೆ
ಇಂದೆ ಪೋಗುವೆನೆಂದನವ ಸಾ
ನಂದದಿಂದುರೆ ಪೆಜ್ಜೆಯಾ ಕುರು
ಪಿಂದಲಾಂ ಕರೆದೊಯ್ವೆ ನೀವ್ಯೆತಹುದೆನುತೆ ತರಳ ೨೪

ಕರೆದು ತಂದಾ ಶರಣನಿವಹವ
ನುರುತರದ ಸುವಿಲಾಸವಚನದಿ
ನೆರೆದನಂದಾ ಕಾರ್ಯದೆಡೆಯಿಹ ಸಿದ್ಧಭೂಧರವ
ಪರಿಕರವನುರೆವೆರಸಿ ಸುತ್ತೂ
ರೆರೆಯನತುಲಿತ ಶರಣರೆಡೆಗೈ
ತರುತ ಬೀಡಾರವನು ಪೊಯ್ಸುತಲಿಳಿದನಾದರದಿ ೨೫

ಚರತತಿಯನವಲೋಕಿಸುತ ಗುರು
ವರ ವಿನೋದಾಲಯದಿನೆಸೆದಾ
ಗಿರಿಯನೇರುತಪಾರವೈಭವವಾಂತ ಬಿರುದಿನಲಿ
ಹರನಮುಖಸಂಭೂತ ರೇವಣ
ಗುರುವಿಗಾಭರಣಗಳ ರಚನೆಯ
ವಿರಚಿಸುತ ಜನರುಘೆಯೆನಲು ತಾನೆಳೆಯಿಸಲು ರಥವ ೨೬

ಅಂದು ಬಾರದಿರಲ್ಕೆ ರಥವಾ
ನಂದರಹಿತತೆಯಿಂದ ಗುರುವಿನ
ಲೆಂದುದಾ ಹದನವ ವಿಷಾದದಿ ನೊಂದ ಮರ್ತ್ಯಚಯ
ಕಂದಿದಾನನದಿಂದಲುರೆ ಬಳಿ
ಸಂದು ಗುರುವರ ಸಿದ್ಧನಂಜನ
ಮುಂದ ತಾನೈತಂದ ಗುರು ರೇವಣನ ರಥದೆಡೆಗೆ ೨೭

ತೇರನೆಳೆಯಿಸೆ ಬಾರದಿರೆ ಪರಿ
ವಾರಮಿಳ್ತುಹಲು ಮೊಗವ ಗುರುವರ
ಕಾರಣಾಂತರವರಿಯಲರುಪಿದನಾಪ್ತಭಕ್ತರಲಿ
ಸೇರುತೆಸೆದು ಗುಹಾಂತರದಿ ಮಾ
ರಾರಿ ರೂಪನ ನುತಿಸಿ ಯೋಗಾ
ಗಾರದಲಿ ರೇವಣನ ಕಂಡಾತಂಗೆ ನತನಾಗೆ ೨೮

ಹರಸಿ ತನ್ನುರುಸಭೆಯ ಮಧ್ಯದ
ಲಿರುವ ಸುತ್ತೂರೆರೆಯನನು ಪತಿ
ಕರಿಸುತುಚಿತಾಸನವನಿತ್ತುರೆ ಸಂತಸದಲವನ
ಬರವರಿದು ಯಾತ್ರಿಕನಿಕಾಯದ
ಲುರಗನಿಂದೊಗೆದಾ ಗರಳದಿಂ
ದೊರುವನಸುವುಂದರಿದಿಹುದು ಪಿಂದಿರುಗಿಸದನೆನುತ ೨೯

ಭರದಲಾಗಾ ಮಂತ್ರಸಿದ್ಧಿಯ
ನೊರೆಯುತಂದಾ ತಂತ್ರಬುದ್ಧಿಯ
ಮೆರೆಯಿಸುತೆ ಮರಳಲ್ಕೆ ತಾನನುವಿತ್ತು ಮರೆಯೊಗೆ
ಹರಿಸ ಮಿಗೆ ತೆರೆದಾಲಿಗಳ ಗುರು
ವರನ ಭುಜಗಕಡಿದಿರುವಾತನ
ಹರಿಸಿಕ್ಕೈದುತಲೆರಚಿ ಮಂತ್ರೋದಕವನವಸದ್ದೆ ೩೦

ಅಂದೆ ರೇವಣಸಿದ್ಧನಾ ರಥ
ಮುಂದುವರಿದುದು ಪರಮಯಾತ್ರಾ
ನಂದಕರು ಪಿಡಿವೆಳೆಯೆ ರಜ್ಜುವ ಜಯನಿನಾದದಲಿ
ಚಂದದಲಿ ಶಿವಶರಣವೃಂದವು
ದೊಂದುಗೂಡುತೆ ಗುರುವಿನೆಡೆಗೈ
ತಂದು ಮಹಿಮಾಕರನೆ ಜಯಜಯವೆನುತ ನುತಿಸಿದುದು ೩೧

ಅನಿತರೊಳಗಾ ಕಾಲವಶದಲಿ ಸಲೆ
ದನದ ಪಸರದಿ ರುಜೆಯನುವಿನಿಂ
ದನುಸರಿಸೆ ಜನಜನಿತವಾರ್ತೆ ವಿಶಾಲದಿಂದುದಿಸೆ
ಮನದಲಾ ಗುರುಮೂರ್ತಿ ಸಿದ್ಧನ
ನೆನೆದು ಯೋಗಾನಂದದಿಂದಿರ
ಲನಘ ತಾನುರು ಜವದಿ ಬರುತ್ತಂ ನಿತನರಃ ಪ್ರುಕಲಿ ೩೨

ಸಾಗುತುರೆ ಯೋಚಿಸುತ ಗುರುವು ವಿ
ರಾಗಿ ಶರಣನಿಕಾಯದಿಂದನು
ರಾಗಿಯೆನಿಸುತಲೆಸೆದ ಮಾದೇಶ್ವರನ ನಿರುಕಿಸುತ
ನಾಗಧರನಪರಾವತಾರನೆ
ಬೇಗ ಬಾ ರುಜೆಯಾವರಿಸುತಿದೆ
ನೀಗು ಪಶುಸಂಕುಲದ ದಣಿವದನೆಂದನಾಚಾರ್ಯ ೩೩

ಎನಲು ಬಾಲಕನಂದೆ ಗುರುಪದ
ವನಜಯುಗ್ಮದಲೆರೆದು ವಾರಿಯ
ನೆನಿತುವನು ಕೈಗೊಂಡು ಪಶುಸಂಚಯದ ಬಳಿಗಾಗಿ
ಘನವಿಭುವ ನೆನೆದಂದು ಪೊರಡುತ
ಲನುಸರಿಸುತಾ ಶಿವನ ಮಂತ್ರದಿ
ದನದನಿವಹಕೆ ಪರಸಿ ಕರುಣಿಸುತಿರ್ದನಾ ಬಾಲ ೩೪

ಅಂದು ರಾಜೆಯಡಗಡರೆ ಸಡಗರ
ಗೊಂದೆಗೊಂದಣೆಯುಂದೆ ಮಹದಾ
ನಂದವಡೆದುದು ಚಿಕ್ಕಸದೆ ಗುರುಸಿದ್ಧನಂಜಾರ್ಯ
ಚಂದದಿಂ ಮಾದೇಶ್ವರನ ಬಳಿ
ಸಂದು ನೀನೈತಂದ ಹದನವ
ನಿಂದೊರೆವುದೆಂದವನ ಬೆಸಗೊಳಲಾತನಿಂತೆಂದ ೩೫

ಪರಮಶರಣೋತ್ಕರ ಪುಡುಕುತ್ತೈ
ದಿರಲಿಕಾ ಪ್ರಭುವರನ ಭಕ್ತರ
ನೆರವಿಗಾ ಪರಿಚರಿಯಕಾನೈತಂದೆ ಗುರುವರ್ಯ
ನರಸೆ ಸಿದ್ಧಶರಾಧರವ ನೆರೆ
ದಿರನು ಸೂಕ್ಷ್ಮ ವಿಚಾರದಿಂ ನೀ
ನರಿದದನು ತಿಳುಪೆಂದೊರೆಯಲಾ ಬಾಲನಾಚಾರ್ಯ ೩೬

ಬಾಲ ಬಾರ ಸರಾಗದಿಂ ಗುಣ
ಶೀಲ ವಿಲಸಿತ ಬಾ ವಿಶದಮತಿ
ಪಾಲಿಪಾಶಯದಿಂದೊರೆವೆ ಯೋಗಾನುಸಂಧಿಯಲಿ
ಕಾಲಕಳೆದುದು ಯಾತ್ರೆಯಲಿ ಸ
ತ್ಕಾಲಹರಣಕೆ ಪೊಳ್ತುದಗುವುದು
ಕಾಲಹರ ಸದ್ರೂಪ ನೆರೆ ಬಾ ಪುರಿಗೆ ನೀನೆನುತ ೩೭

ಇರದೊರೆಯೆ ಗುರುವರ್ಯನಾತನ
ಪರಿಕರದಿನೊಡವೆರೆಯುತುರುತರ
ಶರಣನಿಕರವನೊಂದುತವರನೆ ಪಾಡಿ ನಲಿದಾಡಿ
ಹರನ ಲೀಲಾಚರಿತೆಯೊರೆದಾ
ದರದಿ ಗುರುಮಠಕೈದಿ ಮೆರೆದಾ
ವರಣಪುರದಿ ವಿರಾಗಿಯಿರೆ ಮಹಿಮಾತಿಶಯದಿಂದ ೩೮

ಒಂದುದಿನವಾ ಸಿದ್ಧನಂಜಾ
ನಂದ ಗುರು ಬೆರೆದಾ ಸಮಾಧಿಯ
ನಂದು ರಾಜಿಸಲಲ್ಲಿಗಾ ಪ್ರಭುವಾಗಮಿಸೆ ದಯದಿ
ವಂದಿಸುತಅಘನಾಶಿಷವ ನೆರೆ
ಪೊಂದಿ ಬಾಲಾಶಯವ ಲಾಲಿಸಿ
ಪಿಂದಿರುಗಿ ಬಹನೆಂದೊರೆದು ಕಣ್ದೆರೆದ ಗುರುನಾಥ ೩೯

ಬಾಲಕನ ಬಳಿಸಂದು ಶರಣರೆ
ಜಾಲವನೆ ಕರೆದಂದು ಸುರುಚಿರ
ಶೂಲಧರನಿವನೆಂಬರಿವನರುಪುತೆ ವಿಲೋಕಿಸುತ
ಪಾಲಿಪುದು ನೀನೆಂದುಮೆಮ್ಮ ವಿ
ಶಾಲಮತಿ ಮಾದೇಶ್ವರನೆ ನಿಜ
ಕಾಲಗತಿಯುದನರಿದೆನಾ ಪ್ರಭುದೇವ ತಾ ನುಡಿದ ೪೦

ಎಂದೆನಲು ಗುರುದೇವ ಸಹಜಾ
ನಂದಭಾವದಿ ಬೆರೆದು ಶರಣರ
ವೃಂದವನೆ ಗಜವಿಪಿನದಂತರ ಸಿದ್ಧಗಿರಿಯೆಡೆಗೆ
ಮುಂದುವರಿಸುತಲಾವರಣಪುರಿ
ಯುಂಠಕುರೆ ಬೆರಗಾಗಿ ನಿಂದನ
ಮುಂದ ಬಾಲಕ ಸಂದಣಿಯನೊಡಗೂಡಿ ಹರ್ಷದಲಿ ೪೧

ಬಾಲಚಯದೊಡನಾಡಿ ಶಿವದೇ
ವಾಲಯುವನೊಳಪೊಕ್ಕು ವರ ಸುಮ
ಜಾಲಮಾಲೆಯಧರಿಸಿ ಕುಣಿಕುಣಿದಾಡಿ ಕುಪ್ಪಳಿಸಿ
ಕಾಲಹರಣಕೆ ಮನಗೊಡದೆ ಗುಣ
ಶೀಲಭಾವವನೆಡಬಿಡದೆ ವಿಭು
ಪಾಲನೆಯುಲಿಹೆನೆಂದೆನುತೆ ಸೋಮೇಶನಿದಿರಿರಲು ೪೨

ಶಿರದಿ ಧರಿಸಿದ ಹಿಮದ ಕಿರಣನ
ಪರತರಾಮಲಕಾಂತಿಯೆಸೆಯು
ಲ್ಸರನೆನಿಪ ವಿಡತೆಯನು ತಾನಂದುರುಹಿ ಬಾಲಕನ
ಸುರುಚಿಮಾನಸಮಂದಿರದಿ ನೆಲ
ಸಿರುವ ಬಹುಸಂದೇಹತಮವನು
ಹರಿಸಿ ತಾ ಹರದಿ:ಪನಿಜಪರಮಾಂಬಿಕಾಗ್ರದಲಿ ೪೩

ಆಶೆಯುರೆ ಜಗದೊದವ ಬಯಸುವು
ದಾಶೆಯುದುವೆ ವಿವಾದಕಿಳಿಸುವು
ದಾಶೆಯಿಂ ದ್ವೀಪಾಂತರದ ಸಂಚಾರ ತೊಡರುವುದು
ಆಶೆವಾರ್ಧಿಯ ದಾಂಟಿಸುವುದ
ತ್ಯಾಶೆ ನಿನ್ನೊಲುಮೆಯುನೆ ಮೀರಿಸುವ
ದೇಶವಾಸನೆಯಾಶಯುವನಳಿಸೆನುತೆ ಮಾದೇಶ ೪೪

ಗುರುವೆ ನಾನನುದಿನದಿ ನಿನ್ನಯ
ದರುಶನವನೊಂದದೆಯೆ ಭುಂಜಿಸು
ತಿರುವೆನೇ ನಾನತಿಥಿಗಳನುಪಚರಿಸದಲೆ ಜಗದಿ
ಅರಿವಿನಿಂದೀ ತನುವ ನಿಜಪದ
ಸರಸಿಜದಿ ಬೆರೆಯಿಸುವೆನೆನುತಂ
ದೊರೆದು ಪದ್ಮಾಸನದೆ ಪೂಜಾಗೃಹದಿ ಮಂಡಿಸುತೆ ೫

ಲಿಂಗಪೂಜೆಯ ಮಾಡಿದನು ಗುಣ
ತುಂಗನಂದಾಚಾರಲಿಂಗವ
ಸಿಂಗರದ ಗುರುಲಿಂಗವಾ ಶಿವಲಿಂಗಮೂರ್ತಿಯಸು
ಜಂಗಮಾಭಿದಲಿಂಗವಾ ಮು
ಕ್ತ್ಯಂಗನಾಲಿಂಗಿತ ಪ್ರಸಾದದ
ಲಿಂಗವನು ಪೂಜಿಸುತಲಂದಾ ಸಿದ್ಧನಂಜಾರ್ಯ ೬

ಗಂಗೆ ಜಗುನೆಯೆನಿಪ್ಪೆರಡರಾ
ಸಂಗಮದಿ ರಾರಾಜಿಸುತಲಿಹ
ರಂಗಮಂಟಪದಂತರಾಳದ ಚಿತ್ತತತ್ತ್ವದಲಿ
ಮಂಗಳಾಂಗ ನಿರಂಗ ಸುಮಹಾ
ಲಿಂಗವಿರಲುರೆ ಕುರುಪರಿದು ಗುಣ
ತುಂಗನಾತನ ಭಯದೊಳಾ ಮಾನಸದಿ ಪೂಜಿಸಿದ ೭

ಸುರುಚಿರಾಮಳಭಕ್ತಿಜಲವಿರ
ಲೆರೆದು ಚಿದ್ಭಸ್ಮವ ಧರಿಸಿ ಗತಿ
ಗೆರೆಯುಗಂದಾ ವಿರತಿಗಂಧವನಂದೆ ಲೇಪಿಸುತೆ
ಇರದೆಯಂತಃಕರಣವಿಂದ್ರಿಯ
ಮೆರೆಯಲದನಕ್ಷತೆಯ ತರದಿಂ
ದಿರಿಸುತರಿವೆಂಬುರುತರದ ಸುಮನಿಚಯುವನೆ ಕೊಟ್ಟು ೮

ಹರಿಸ ಪೆಸರಿನ ಧೂಪವರ್ಪಿಸಿ
ಸುರುಚಿ ಪರಬಿಂದುವಿನ ದೀಪವ
ನಿರದೆಯುದನೆತ್ತುತೆ ವಿಲಾಸದಿನೆಸೆಯೆ ಪರಿಪೂರ್ಣ
ಸ್ವರಸಫಲದ ನಿವೇದನದಲುರೆ
ಪರಮಗುಣತಾಂಬೂಲವೀಯುತ
ಗುರುವರನು ಲಿಂಗಾಂಗಸಂಗದ ಭಾವದಿಂದಿರ್ದ ೯

ಅಂದು ಶಿವರಾತ್ರೀಶ ಯೋಗಾ
ನಂದಮಂದಿರದೆಡೆಗೆ ತಾನೈ
ತಂದು ದರ್ಶನವೀಯುತಂದಾ ಸಿದ್ಧನಂಜನನು
ಚಂದದಿಂ ಪರಸುತ್ತ ಶರಣರ
ವೃಂದ ಬಹಪರಿಯೊರೆದು ಭರದೊಳೆ
ಗಂದಿನಲಿ ಮೈಗರೆಯುಲಾ ಗುರುನಾಥ ಕಣ್ದೆರೆದ ೧೦

ಗುರುವ ನೆನಪಿಂದಲ್ಲಿಗಲ್ಲಿಗೆ
ಚರಿಸಿ ಸುಳಿಸುಳಿದಾಡಿ ಮನದಲಿ
ಕೊರಗಿ ಬಂದಾತನನು ತೊರೆದೆನೆನುತ್ತ ಹಂಬಲಿಸಿ
ದೊರೆಯದಿರೆ ತನುವಿದನೆ ಜಲದಲಿ
ತೊರೆವೆನೆಂದಂದರಿದು ಚಪಲತೆ
ವೆರಸಿ ಮುಂದರಿದರಸಿದನು ವರ ಸಿದ್ಧನಂಜಾರ್ಯ ೧೧

ದೊರೆಯೆ ಬಾ ಹೃದಯಾಂತರದಿ ನೀಂ
ನೆರೆಯೆ ಬಾ ವಚನಾಮೃತದಿ ನೀಂ
ಮರೆಯೆ ನೀನಾವರದಿ ಬಾಬಾ ಭಕ್ತಿಮಾನಸಕೆ
ನಿರುಪಮನೆ ಬಾರೆನುತೆ ನಿರಘನ
ಪರನಿರಂಜನ ನಿರಶನನ ಗುರು
ವರನನರಸುತಲಿರ್ದನಾ ವರಸಿದ್ಧನಂಜಾರ್ಯ ೧೨

ತೋರದಿರಲಾಕೃತಿಯ ನಾನೀ
ನೀರಿನೊಳಪುಗುವುದೆ ಸಹಜ ಗುರು
ಬಾರ ನೀನೆಲೆ ವೀರಶೈವಮತೋದ್ಧರಾಚಾರ್ಯ
ಬಾರ ನೀಂ ಗುರು ಸಾರ್ವಭೌಮ ವಿ
ಚಾರಪರ ಗುಣಧಾಮ ವರದ ವಿ
ಕಾರರೂಪವನಾಂತೆನೆನುತನುವಾಗೆ ಬಗೆಯಿಂದ ೧೩

ಇರದಿರದೆಯಾ ಗದ್ದುಗೆಯಿನುರೆ
ಮೊರೆಯಲೋಂಕಾರದ ನಿನಾದವೆ
ಸರಿದು ಘನಮೂರ್ತಿಯನಪೇಕ್ಷಿಸುತುರೆ ನಿರೀಕ್ಷಿಸಿರೆ
ಮಿರುಮಿರುಗಿ ಶಿವರಾತ್ರಿಗುರುವರ
ದರುಶನವನಂದೀಯಲಚ್ಛಾ
ದರದಿ ರೋಮಾಂಚನದಲಾನಂದಾಶ್ರುವಿಂದೆಸೆದು ೧೪

ಬೆರೆದ ನಿಜದಿಂ ಪಾದಯುಗ್ಮವ
ನಿರದೆಯುಂದಾ ಬಾಹುಯುಗಳವ
ಹರಿಸಮಿಗಿಲಿಂದೆದೆಪಣೆಯನಾ ಕರವೆರಡುವೆರಸಿ
ಕರಣಚಯಮಿರದೆಸಗಿರುವ ಬಹು
ದುರಿತವಿತತಿವಿನಾಶಕೋಸುಗ
ಗುರುವೆ ಸಾಷ್ಟಾಂಗದಿ ನಮಿಪೆ ನಾನೆಂದನಾಚಾರ್ಯ ೧೩

ಅನಿತನಿತರಲಿ ಸರಿಯೆಜಲಮಿರ
ದನಘ ತಾನುರೆ ಗದ್ದುಗೆಯ ನೆರೆ
ದನುವಿನಿಂದೊಳಪೊಕ್ಕು ಬಂಧಿಸುತಾ ಕವಾಟಗಳ
ಘನಗುರುವ ನಿರುಕಿಸುತ ನಿಜಪದ
ವನಜಕರುಣಾರಸವನೀಂಟುತ
ಜನಿತಸಂಭಾಷಣೆಯಲಿರ್ದ ನಿಜಾನುಭಾವದಲಿ ೧೪

ಮುಂದಿನಾಶಯವರಿದು ತಾನೈ
ತಂದು ಮಠಕಾನಂದತುಂದಿಲ
ನಂದು ಜಂಗಮವೃಂದವನೆ ತಣಿಸಿದನು ಭೋಜನದಿ
ಚಂದದಲಿ ರೇಣುಕನ ದರ್ಶನ
ದಿಂದಲುರೆ ಕೃತಕೃತ್ಯನಾಗ
ಲ್ಕೆಂದು ಸಿದ್ಧರ ಗಿರಿಗೆ ಪರಿಕರವೆರಸಿ ಹೊರವಂಟ ೧೫

ಇತ್ತಲಂತಿರಲತ್ತ ಜಂಗಮ
ವೊತ್ತಕಭಿನಮಿಸುತ್ತ ಪರಮ ಮ
ಹತ್ತಿಗೊಳಗಾಗುತ್ತಲಾ ಗುರುಬಸವರಾಜೇಂದ್ರ
ಮತ್ತಮಂದಾ ವಚನಗಳ ಪಾ
ಡುತ್ತ ಕಾಲಜ್ಞಾನಮದನೊರೆ
ಯುತ್ತ ಕಲ್ಯಾಣದಿಂ ಕಪಡೀಕ್ಷೇತ್ರಕೈತರುತ ೧೬

ಬಸವರಾಜಂ ಸಂಗಮೇಶ್ವರ
ನೆಸೆವ ಪದಪಂಕಜವ ಪುಗಲಂ
ದಸಮನಾ ಪ್ರಭುವಿರದಲಾ ಶ್ರೀಗಿರಿಗೆ ತಾನೈದೆ
ಮಸಲವೆಳಗಿನಲಲ್ಲು ಪ್ರಮಥ
ಪ್ರಸರವೊಡನಂದೈದಲಲ್ಲಿಗೆ
ಜಸವೆರೆದ ವಿಭು ಸಿದ್ಧಗಿರಿಗೈತಂದನನಿತರಲಿ ೧೯

ಸಲ್ಲಲಿತ ವಿಭುವಿರವ ನಿರುಕಿಸು
ತಲ್ಲಿರಲುಮಾ ಶರಣಸಂಕುಲ
ರೆಲ್ಲರಾ ನವನಾಥಸಿದ್ಧಾಶ್ರಮವ ಪರಿಕಿಸುತ
ಮೆಲ್ಲನಂದಾ ಕದಳಿಯಾ ಬನ
ದೆಲ್ಲೆಯಲಿ ಸಂಚರಿಸುತಿರುತುರೆ
ತಲ್ಲಣಿಸುತಾತನ ಬಯಸುತಲ್ಲಿರ್ದುದಾ ವಿಸರ ೨೦

ಭರದಿ ನಿಚಯಮದತಿಹಿತದಿ ವಿಭು
ವರನನಾ ಪಾತಾಳಗಂಗೆಯು
ಕರೆಯಲರಸುತಲಾವ ಗತಿಯೆಂದೊರೆದು ಚಿಂತಿಸಿರೆ
ಪರಶಿವನ ಪರಮಾಂಶಮಂದೈ
ತರುತ ಬಾಲಕರೂಪಿನಿಂದವ
ತರಿಸಿ ಮಾದೇಶ್ವರನ ನಾಮದಿ ನಿಂದುದರ್ಶಿಯಲಿ ೨೧

ಸಾನುರಾಗದಿ ದಂಡಕರನಭಿ
ಮಾನದಿಂದುರೆ ನಿಂದ ಶರಣವಿ
ತಾನವಿವರವನರಿಯುತಾ ಸದ್ಧರ್ಮಮಾರ್ಗದಲಿ
ಭಾನುಭಾಸರ ಚಿಂತೆಯೇಕಭಿ
ಮಾನಿಯೆನಿಸಿಹನಾ ಪರಮ ನಿಮ
ಗೇನಿತುದು ದುಮ್ಮಾನಮೊರೆಯುವುದೆಂದನಾ ಬಾಲ ೨೨

ಜಂಗಮಾಗ್ರಣಿಯೆನಿಪ ವಿಭುವಿನ
ಸಂಗದಿಂದುಪದೇಶ ದೊರೆಯದೆ
ಭಂಗಮಾನಸರಾದಿರೀ ಭವಬಂಧನದಿ ಸಿಲುಕಿ
ಇಂಗಿತವನದನರಿದು ಮಾಳ್ಪುದ
ನಂಗಹರ ತಾನರಿವ ಬಾಲಕ
ನಿಂಗೆ ನುಡಿಯಿದು ಸಲ್ಲದೆನೆ ಮಾದೇಶನಿಂತೆಂದ ೨೩

ಮುಂದೆ ತಾನಿಂದೊರ್ವ ಜಂಗಮ
ಚಂದದಿಂ ತೆರಳಿದುದ ನಾಂ ಮುದ
ದಿಂದಲೀಕ್ಷಿಸಿ ಬೆಸಗೊಳಲು ನೆಲೆ ಸಿದ್ಧಗಿರಿಯೆಡೆಗೆ
ಇಂದೆ ಪೋಗುವೆನೆಂದನವ ಸಾ
ನಂದದಿಂದುರೆ ಪೆಜ್ಜೆಯಾ ಕುರು
ಪಿಂದಲಾಂ ಕರೆದೊಯ್ವೆ ನೀವ್ಮೈತಹುದೆನುತೆ ತರಳೆ ೨೪

ಕರೆಮು ತಂದಾ ಶರಣನಿವಹವ
ನುರುತರದ ಸುವಿಲಾಸವಚನದಿ
ನೆರೆದನಂದಾ ಕಾರ್ಯದೆಡೆಯಿಹ ಸಿದ್ಧಭೂಧರವ
ಪರಿಕರವನುರೆವೆರಸಿ ಸುತಸ್ತೊ
ರೆರೆಯುನತುಲಿತ ಶರಣರೆಡೆಗೈ
ತರುತ ಬೀಡಾರವನು ಪೊಯ್ಸುತಲಿಳಿದನಾದರದಿ ೨೫

ಚರತತಿಯನವಲೋಕಿಸುತ ಗುರು
ವರ ವಿನೋದಾಲಯದಿನೆಸೆದಾ
ಗಿರಿಯನೇರುತಪಾರವೈಭವಮಾಂತ ಬಿರುದಿನಲಿ
ಹರನಮುಖಸಂಭೂತ ರೇವಣ
ಗುರುವಿಗಾಭರಣಗಳ ರಚನೆಯು
ವಿರಚಿಸುತ ಜನರುಘೆಯೆನಲು ತಾನೆಳೆಯಿಸಲು ರಥವ ೨೬

ಅಂದು ಬಾರದಿರಲ್ಕೆ ರಥವಾ
ನಂದರಹಿತತೆಯಿಂದ ಗುರುವಿನ
ಲೆಂದುದಾ ಹದನವ ವಿಷಾದದಿ ನೊಂದ ಮರ್ತ್ಯಚಯ
ಕಂದಿದಾನನದಿಂದಲುರೆ ಬಳಿ
ಸಂದು ಗುರುವರ ಸಿದ್ಧನಂಜನ
ಮಂದ ತಾನೈತಂದ ಗುರು ರೇವಣನ ರಥದೆಡೆಗೆ ೨೭

ತೇರನೆಳೆಯಿಸೆ ಬಾರದಿರೆ ಪರಿ
ವಾರಮಿಳುಹಲು ವೊಗವ ಗುರುವರ
ಕಾರಣಾಂತರವರಿಯಲರುಪಿದನಾಪ್ತಭಕ್ತರಲಿ
ಸೇರುತೆಸೆದು ಗುಹಾಂತರದಿ ಮಾ
ರಾರಿ ರೂಪನ ನುತಿಸಿ ಯೋಗಾ
ಗಾರದಲಿ ರೇವಣನ ಕಂಡಾತಂಗೆ ನತನಾಗೆ ೨೮

ಹೆರಸಿ ತನ್ನುರುಸಭೆಯು ಮಧ್ಯದ
ಲಿರುವ ಸುತನ್ನೂರೆರೆಯನನು ಪತಿ
ಕರಿಸುತುಚಿತಾಸನವನಿತ್ತುರೆ ಸಂತಸದಲವನ
ಬರವರಿದು ಯಾತ್ರಿಕನಿಕಾಯುದ
ಲುರಗನಿಂದೊಗೆದಾ ಗರಳದಿಂ
ದೊರುವನಸುವುಂದರಿದಿಹುದು ಪಿಂದಿರುಗಿಸದನೆನುತ ೨೯

ಭರದಲಾಗಾ ಮಂತ್ರಸಿದ್ಧಿಯ
ನೊರೆಯುತಂದಾ ತಂತ್ರಬುದ್ಧಿಯ
ಮೆರೆಯಿಸುತೆ ಮರಳಲ್ಕೆ ತಾನನುವಿತ್ತು ಮರೆಯೂಗೆ
ಹರಿಸ ಮಿಗೆ ತೆರೆದಾಲಿಗಳ ಗುರು
ವರನ ಭುಜಗಕಡಿದಿರುವಾತನ
ಹರಿಸಕೈದುತಲೆರಚೆ ಮಂತ್ರೋದಕವನವನದ್ದೆ ೩೦

ಅಂದೆ ರೇವಣಸಿದ್ಧನಾ ರಥ
ಮುಂದುವರಿದುದು ಪರಮಯಾತ್ರಾ
ನಂದಕರು ಪಿಡಿವೆಳೆಯೆ ರಜ್ಜುವ ಜಯನಿನಾದದಲಿ
ಚಂದದಲಿ ಶಿವಶರಣವೃಂದಮ
ದೊಂದುಗೂಡುತೆ ಗುರುವಿನೆಡೆಗೈ
ತಂದು ಮಹಿಮಾಕರನೆ ಜಯಜಯವೆನುತ ನುತಿಸಿದುದು ೩೧

ಅನಿತರೊಳಗಾ ಕಾಲವಶದಲಿ ಸಲೆ
ದನದ ಪಸರದಿ ರುಜೆಯನುವಿನಿಂ
ದನುಸರಿಸೆ ಜನಜನಿತವಾರ್ತೆ ವಿಶಾಲದಿಂದುದಿಸೆ
ಮನದಲಾ ಗುರುಮೂರ್ತಿ ಸಿದ್ಧನ
ನೆನೆದು ಯೋಗಾನಂದದಿಂದಿರ
ಲನಘ ತಾನುರು ಜವದಿ ಬರುತುಂ ನಿತಸರುಂಪ್ರತಲಿ ೩೨

ಸಾಗುತುರೆ ಯೋಚಿಸುತ ಗುರುವು ವಿ
ರಾಗಿ ಶರಣನಿಕಾಯದಿಂದನು
ರಾಗಿಯೆನಿಸುತಲೆಸೆದ ಮಾದೇಶ್ವರನ ನಿರುಕಿಸುತ
ನಾಗಧರನಪರಾವತಾರನೆ
ಬೇಗ ಬಾ ರುಜೆಯಾವರಿಸುತಿದೆ
ನೀಗು ಪಶುಸಂಕುಲದ ದಣವದನೆಂದನಾಚಾರ್ಯ ೩೩

ಎನಲು ಬಾಲಕನಂದೆ ಗುರುಪದ
ವನಜಯುಗ್ಮದಲೆರೆದು ವಾರಿಯ
ನನಿತುವನು ಕೈಗೊಂಡು ಪಶುಸಂಚಯದ ಬಳಿಗಾಗಿ
ಘನವಿಭುವ ನೆನೆದಂದು ಪೊರಡುತ
ಲನುಸರಿಸುತಾ ಶಿವನ ಮಂತ್ರದಿ
ದನದನಿವಹಕೆ ಪರಸಿ ಕರುಣೆಸುತಿರ್ದನಾ ಬಾಲ ೩೪

ಅಂದು ರುಜೆಯುಡಗಡರೆ ಸಡಗರ
ಗೊಂದೆಗೊಂದಣೆಯುಂದೆ ಮಹದಾ
ನಂದವಡೆದುದು ಬೆಕ್ಕಸದೆ ಗುರುಸಿದ್ಧನಂಜಾರ್ಯ
ಚಂದದಿಂ ಮಾದೇಶ್ವರನ ಬಳಿ
ಸಂದು ನೀನೈತಂದ ಹದನವ
ನಿಂದೊರೆವುದೆಂದವನ ಬೆಸಗೊಳಲಾತನಿಂತೆಂದ ೩೫

ಪರಮಶರಣೋತ್ಕರ ಪುಡುಕುತೈ
ದಿರಲಿಕಾ ಪ್ರಭುವರನ ಭಕ್ತರ
ನೆರವಿಹಾ ಪರಿಚರಿಯುಕಾನೈತಂದೆ ಗುರುವರ್ಯ
ನರಸೆ ಸಿದ್ಧಶರಾಧರವ ನೆರೆ
ದಿರನು ಸೂಕ್ಷ್ಮ ವಿಚಾರದಿಂ ನೀ
ನರಿದದನು ತಿಳುಪೆಂದೊರೆಯಲಾ ಬಾಲನಾಚಾರ್ಯ ೩೬

ಬಾಲ ಬಾರ ಸರಾಗದಿಂ ಗುಣ
ಶೀಲ ವಿಲಸಿತ ಬಾ ವಿಶದಮತಿ
ಪಾಲಿಪಾಶಯದಿಂದೊರೆವೆ ಯೋಗಾನುಸಂಧಿಯಲಿ
ಕಾಲಕಳೆದುದು ಯಾತ್ರೆಯಲಿ ಸ
ತ್ಕಾಲಹರಣಕೆ ಪೊಳ್ತುದಗುವುದು
ಕಾಲಹರ ಸದ್ರೂಪ ನೆರೆ ಬಾ ಪುರಿಗೆ ನೀನೆನುತ ೩೭

ಇರದೊರೆಯೆ ಗುರುವರ್ಯನಾತನ
ಪರಿಕರದಿನೊಡವೆರೆಯುತುರುತರ
ಶರಣನಿಕರವನೊಂದುತವರನೆ ಪಾಡಿ ನಲಿದಾಡಿ
ಹರನ ಲೀಲಾಚರಿತೆಯೊರೆದಾ
ದರದಿ ಗುರುಮಠಕ್ಕೈದಿ ಮೆರೆದಾ
ವರಣಪುರದಿ ವಿರಾಗಿಯಿರೆ ಮಹಿಮಾತಿಶಯದಿಂದ ೩೮

ಒಂದುದಿನವಾ ಸಿದ್ಧನಂಜಾ
ನಂದ ಗುರು ಬೆರೆದಾ ಸಮಾಧಿಯ
ನಂದು ರಾಜಿಸಲಲ್ಲಿಗಾ ಪ್ರಭುವಾಗಮಿಸೆ ದಯದಿ
ವಂದಿಸುತಲವನಾಶಿಷವ ನೆರೆ
ಪೊಂದಿ ಬಾಲಾಶಯವ ಲಾಲಿಸಿ
ಪಿಂದಿರುಗಿ ಬಹೆನೆಂದೆರೆದು ಕಣ್ದೆರೆದ ಗುರುನಾಥ ೩೯

ಬಾಲಕನ ಬಳಿಸಂದು ಶರಣರ
ಜಾಲವನೆ ಕರೆದುದು ಸುರುಚಿರ
ಶೂಲಧರನಿವನೆಂಬರಿವನರುಪುತೆ ವಿಲೋಕಿಸುತ
ಪಾಲಿಪುದು ನೀನೆಂದುಮೆಮ್ಮ ವಿ
ಶಾಲಮತಿ ಮಾದೇಶ್ವರನೆ ನಿಜ
ಕಾಲಗತಿಯುದನರಿದೆನಾ ಪ್ರಭುದೇವ ತಾ ನುಡಿದ ೪೦

ಎಂದೆನಲು ಗುರುದೇವ ಸಹಜಾ
ನಂದಭಾವದಿ ಬೆರೆದು ಶರಣರ
ವೃಂದವನೆ ಗಜವಿಪಿನದಂತರ ಸಿದ್ಧಗಿರಿಯೆಡೆಗೆ
ಮುಂದುವರಿಸುತಲಾವರಣಪುರಿ
ಯುಂಡಕುರೆ ಬೆರಗಾಗಿ ನಿಂದನ
ಮಂದ ಬಾಲಕ ಸಂದಣಿಯನೊಡಗೂಡಿ ಹರ್ಷದಲಿ ೪೧

ಬಾಲಚಯದೊಡನಾಡಿ ಶಿವದೇ
ವಾಲಯವನೊಳಪೊಕ್ಕು ವರ ಸುಮ
ಜಾಲಮಾಲೆಯುಧರಿಸಿ ಕುಣಿಕುಣಿದಾಡಿ ಕುಪ್ಪಳಿಸಿ
ಕಾಲಹರಣಕೆ ಮನಗೊಡದೆ ಗುಣ
ಶೀಲಭಾವವನೆಡೆಬಿಡದೆ ವಿಭು
ಪಾಲನೆಯಲಿಹನೆಂದೆನುತ ಸೋಮೇಶನಿದಿರಿರಲು ೪೨

ಶಿರದಿ ಧರಿಸಿದ ಹಿಮದ ಕಿರಣನ
ಪರತರಾಮಲಕಾಂತಿಯೆಸೆಯು
ಲ್ಸುರನೆನಿಪ ಮಿಡತೆಯುನು ತಾನಂದುರುಹಿ ಬಾಲಕನ
ಸುರುಚಿಮಾನಸಮಂದಿರದಿ ನೆಲ
ಸಿರುವ ಬಹುಸಂದೇಹತಮವನು
ಹರಿಸಿ ತಾ ಹರದಿ:ಪನಿಜಪರಮಾಂಬಿಕಾಗ್ರದಲಿ ೪೩

ಆಶೆಯುರೆ ಜಗದೊದವ ಬಯಸುವು
ದಾಶೆಯುದುವೆ ವಿವಾದಕೆಳೆಸುವು
ದಾಶೆಯಿಂ ದ್ವೀಪಾಂತರದ ಸಂಚಾರ ತೊಡರುವುದು
ಆಶೆವಾರ್ಧಿಯ ದಾಂಟಿಸುವುದ
ತ್ಯಾಶೆ ನಿನ್ನೊಲುಮೆಯುನೆ ಪಾರೆಸುವ
ದೀಶವಾಸನೆಯಾಶಯುವನಳಿಸೆನುತೆ ಮಾದೇಶ ೪೪

ಸಮನಿಶೆಯು ಸಮಯದಲಿ ತಾನಂ
ದಮಿತಗುಣನನುಮಿಂದ ಮೋದದಿ
ಯಮ ನಿಯಮ ಮೊದಲಾದ ಸಗುಣಾಷ್ಟಾಂಗಯೋಗವನು
ಕ್ರಮದಲನುಸರಿಸಂತೆ ಸುಮತನಾ
ವಿಮಲನಾರ್ಗೊರೆಯುವಲೆ ಕಪಿಲಾ
ಶ್ರಮವನುಳಿದನಿತರಲೆ ಸಿದ್ಧರ ಗಿರಿಗೆ ಹೊರಮಂಟ ೪೫

ಬರುತಲಂದಾ ಗಜವಿಪಿನೆದೆಡೆ
ಯಿರುವ ಸಿದ್ಧರಗಿರಿಯನೇರುತ
ಮರೆವ ವಿಭುವಾಲಯವನಿರುಕಿಸುತವನ ಪದಕೆರೆಗೆ
ಪರಮನಾ ಮಂತ್ರೋಪದೇಶವ
ನಿರದೆಸಗೆ ಕುಂತೂರ ತಾನುರೆ
ತೊರೆದು ಕಹುವಳಗಾಲವಾದ್ರಿಯುಲೆಸೆದ ತಪಸಿನಲಿ, ೪೬

ಇತ್ತಲಂದಾವರಣಪುರಜನ
ಮೊತ್ತಮೊತ್ತದಿನೈದಿ ತರಳನ
ಬಿತ್ತರವ ನೆನೆನೆನೆಯುತರಸುತಲಿರ್ದರಾದರದಿ
ಮತ್ತೆ ಗುರುವರ ಕಳೆವಳಿಸುತುರೆ
ಚಿತ್ತದಲಿ ತಾನೊಂದ ಯೋಚಿಸು
ತಿತ್ತನಾಜ್ಞೆಯನನುಚರರಿಗರಸಲ್ಕೆ ಬಾಲಕನ ೪೭

ದೊರೆಯದಿರಲಾ ಪರಮ ಮಾದೇ
ಶ್ವರ ವಿಚಾರವನರುಪೆ ನೆರೆ ಪರಿ
ಸರದ ನಿಚಯುಮದಂದೆ ದುಗುಡವನಾಂತು ಮಾನಸದಿ
ಗುರುವರನು ತಾನರಸೆ ಪೊರಡಲು
ಮಿರದೆ ಕಪ್ಪಿನನಂಜದೇವಂ
ಗುರುತರದ ಪಟ್ಟಾಭಿಷೇಕವ ರಚಿಸುತವಸರದಿ ೪೮

ಬಂದನಂದಾ ಸಿದ್ಧಗಿರಿಯೆಡೆ
ಗಂದೆ ಮನದಲಿ ನೊಂದೆ ಬಾಲಕ
ನಂದವದನರಿದಿರದೆ ನಡೆದನು ಗಾಲವಾಶ್ರಮಕೆ
ಚಂದದಿಂದೇರುತಲಿ ಗಿರಿಯಾನ
ಮುಂದ ಮಾದೇಶ್ವರನಿರದೆಯಾ
ನಂದದಿಂ ಮುಂದೈದಿರುವನೆಂದರಿದು ಪೊರಮಟ್ಟ ೪೯

ಆನಿತನಿತರಲೆ ಪೋದನೆಂಬಾ
ಜನಜನಿತ ಪಸರಿಸೆ ವಿಶಾಲದಿ
ದಿನಪಕೋಟಿವಿಕಾಸರೂಪಿಂದೆಸೆದ ಗುರುರಾಜ
ಘನತೆಯೇ ನೀನೆನ್ನನುಳಿವುದು
ಕನಿಕರವದಿನಿತಿಲ್ಲವೇ ನಿಜ
ದನುವನೊರೆಯದೆ ತೆರಳಬಹುದೇ ಸರಿಯೆ ನಿಜವಂತಕೆ ೫೦

ಎನುತಲಂದಾ ಸಿದ್ಧನಂಜೇ
ಶನು ಶಿವಾನಂದಾಶ್ರಮದ ನೆಲೆ
ವನೆಯಿನಾದರಮಾವ ವರ ಕಫಕಾದ್ರಿಗೈತರುತ
ಮನಸಿಜಾರಿಯ ನೆನೆದು ಶಯನಿಸೆ
ಕನಸಿಗಾ ಮಾದೇಶ್ವರನು ಬಂ
ದನುನಯದಿ ತಾನೊಂದನೊರೆದ ಗುಣಾಂಕನತಿಶಯದಿ ೫೧

ಬರುತೆ ನಾನಾವಿಪಿನದೆಡೆಯಿಂ
ಗಿರಿಗಳಾರಿರೆ ದಾಂಟಿ ಬಗ್ಗವ
ಕರೆಯುತದರಬ್ಬರವ ಹರಿಸಿ ವಿನೋದರಚನೆಯಲಿ
ಇರದಲೇರುತೆ ಗೋಚರಿಸದಲೆ
ನೆರೆದು ಗೋಪ್ಯವಿಲಾಸ ಪೊದರಿನ
ಲಿರುವೆ ಲಿಂಗಾಕೃತಿಯ ನಾನಾಂತಾದರದಲೆಂದ ೫೨

ಇಂದು ನಾನಿಹನೇಳನೆಯ ಮಲೆ
ಯೆಂದು ರಾಜಿಪ ಗಿರಿತಳದಲಾ
ನಂದದಿಂದಾ ಬಿಯದಗೊಂದಣಿಗಿತ್ತು ಸಂತಸವ
ಚಂದದಿಂದಿಹೆ ಸೂಕ್ಷ್ಮ ರೂಪದಿ
ಬಂದು ಭಕ್ತರಿಗೊರೆದು ನಿಲು ನೀ
ನೆಂದರುಪಿ ಮರೆಯಾಗಲಚ್ಚರಿಯಿಂದ ಕಣ್ದೆರೆದು ೫೩

ಬರುತಲಂದಾ ಸಪ್ತಮದ ಗಿರಿ
ಪರಿಯುರಿದು ವನಚರನಿಚಯದಿಂ
ದುರುತರದ ಕುರುಪರಿಂದ ತಾಣವ ಪರಿಕಿಸಲ್ಕಾತ
ಮೆರೆದ ಸಾಲೂರಿನ ಮಠದ ಗುರು
ವರನನವಲೋಕಿಸುತ ಮಾದೇ
ಶ್ವರನ ಸಂದರ್ಶಿಸೆ ಹೊರಟ ಗುರುನಾಥ ದೇಗುಲಕೆ ೫೪

ಬಂದು ದೇವಾಲಯದೆಡೆಯೊಳಾ
ನಂದದಿಂದಾ ಲಿಂಗಮೂರ್ತಿಯ
ಸಂದರುಶನದಿ ಹಿಗ್ಗಿ ನುತಿಸುತೆ ಬಗ್ಗದೇರನನು
ಚಂದದಿಂದುಸಿರದೆಯೆ ನೀನೈ
ತಂದು ನೆಲಸಲುಬಹುದೆ ಮಾನಸ
ಕೊಂದು ಕುಂದದನಿತ್ತೆಯಾ ಪಾದೇಶ ನೀನೆನುತೆ ೫೫

ಅಂದವನ ವಿಸ್ತಾರಕಥನವ
ನಂದದಿಂದುರೆ ಪೇಳ್ದು ಭಕ್ತರ
ಸಂದಣಿಯು ಸಂತಸಗೊಳಿಸಿ ಸಾಲೂರಮಠದೆಡೆಗೆ
ಪಿಂದಿರುಗುತೈತಂದು ಜಂಗಮ
ವೃಂದಮಿರಲವಲೋಕಿಸುತ ಸಾ
ನಂದದಿಂದಾ ಮಠದೆರೆಯಗೊರೆದೆಸೆದ ಗುರುನಾಥ ೫೬

ಇಂತಿರಲು ದುಷ್ಕಾಲಮದು ಬಹು
ಚಿಂತೆಯನು ತಾನೀಯೆ ನರರಿಗ
ನಂತ ಭಾಗದಿ ಯೋಚಿಸುತೆ ದೌರ್ಭಾಗ್ಯ ಗತಿವಶದಿ
ಸಂತಸದಿ ಗುರುಸಿದ್ಧನಂಜನು
ಚಿಂತಿತಾರ್ಥವ ಮುಂದುವರಿಯಿಸು
ತಂತರಂಗದಿ ನೆನೆದು ಸದ್ಗತಿಪಥವ ಮುದದಿಂದ ೫೭

ಗುರುವರನು ಶಿವಶರಣಗೋಷ್ಠಿಯ
ಲಿರುತಲಂದಾ ಬಸವರಾಜನ
ಮೆರೆಯಿಸಿದ ಶಿವಯೋಗನಿದ್ರಾಮುದ್ರೆಯನು ಭರದೆ
ಹರಿಸ ಮಿಗೆ ಬೋಧಿಸುತಲತ್ಯಾ
ದರದಿ ಬಸವೇಶ್ವರನ ಯೋಗದ
ಪರಿಯದೀ ತೆರಮೆನುತೆ ಲಿಂಗದೆ ಬೆರೆದ ಗುರುನಾಥ ೫೮

ಸಾರತರ ಸುತ್ತೂರುಪೀಠದ
ವೀರನೆಸಗಿದ ಮಹಿಮೆಯನು ಪರಿ
ವಾರ ನಿರುಕಿಸುತಂದೆ ರೋಮಾಂಚನದಿ ಬೆರಗಾಗಿ
ಚಾರುತರ ಮಂಟಪವ ರಚಿಸುತ
ಪಾರ ವೈಭವದಿಂದ ಮೆರೆಯಿಸಿ
ಧೀರಗುರು ಜಯವೆನುತ ಪೂಗಿಸಿದರಂದೆ ಗದ್ದುಗೆಯ ೫೯

ಶುಂಭಕರ್ಬುರ ದನುಜಹಾರಿಣಿ
ದಂಭಹರೆ ಕಾತ್ಯಾಯನಿಯೆ ಶಿವೆ
ಜಂಭವೈರಿಕುಟುಂಬಪಾಲಿನಿ ನತಸುರಕದಂಬೆ
ಕುಂಭಿನೀಧರನಂದಿನಿಯೆ ಮುನಿ
ಕುಂಭಸಂಭವ ನಮಿತೆ ಶಕ್ತಿ ವಿ
ಜೃಂಭಿತೆಯೆ ಕುಡು ಸುಖವ ಚಾಮುಂಡಾಂಬಿಕಾದೇವಿ ೬೦

# ಕಪಿನೀನಂಜುಂಡದೇಶಿಕೇಂದ್ರ ಕಥನಂ

ನೆರೆಮೆರೆದ ಬೊಕ್ಕಳ್ಳಿಯಾ ಜನ
ಕೊರೆಯುಂಟುಕ್ಕಿ ನಳವಚವಿಶಲಾ
ಪರದಿ ಕಪಿನೀನಂಜನಿತ್ತನು ಸಿದ್ಧವಿಗ್ರಹಕೆ

ಶ್ರೀಸುರಾಧಿಪನಮಿತಚರಣ ವಿ
ಕಾಸ ಭುಜಗಾಭರಣ ಶರಣನಿ
ವಾಸ ನಮಿತೋದ್ಧರಣ ಪಂಚೀಕರಣ ತತ್ತ್ವಮಯ
ಆ ಸನಕಯುಮಿಹೃದಯ ವಿಹರಣ
ಭಾಸಮಾನ ಚಿದಂಗ ಸುಜನೋ
ಲ್ಲಾಸ ಕುಡು ನೀ ಸೋಮನಾಥನೆ ಭುವನಕತಿಶುಭವ ೧

ಎಲೆಲೆ ಗುರುಭಕ್ತಾಗ್ರಣಿಯೆ ಭೂ
ವಲಯದಲಿ ರಾರಾಜಿಸುತೆ ಸ
ನ್ನಿಲಯುವರಾದಾವರಣಪುರಸಿಂಹಾಸನಾಧಿಪನ
ಲಲಿತ ಕಪಿನೀನಂಜಗುರುವಿನ
ಫಲಭರಿತ ಸತ್ಕಥೆಯನುಸುರುವೆ
ನಲವಿನಲಿ ಕೇಳೆನುತೆ ಶಿವರಾತ್ರೀಶನಿರವೊರೆದ ೨

ಮೆರೆದುವಂದಾವರಣಪುರ ಗುರು
ವರನ ಗದ್ದುಗೆಯಿಂದಲಂಕೃತಿ
ವೆರಸೆ ಗುರುಭಕ್ತಾಲಯುದಿ ವೈದಿಕನಿಕಾಯದಲಿ
ಶರಣಸದ್ಗೋಷ್ಠಿಯಲಿ ನೆರೆದಂ
ದುರುತರದ ಕಾಂತಿಯಲಿ ವರ ಸುಂ
ದರನಿಲಯು ಲವಿಶಶಿಯ ವೀಧಿಯಾನನುಸರಿಸಿ ಜಸದಿ ೩

ಇಂತೆಸೆವ ಪುರದಂತರಾಳದಿ
ಸಂತಸದಿ ಸುತ್ತೂರುಪೀಠವ
ನಂತಸುಖಿಗಳನಿತ್ತು ಭಕ್ತವ್ರಾತಕನುಖಿನದಿ
ಕಂತುಹರಸಮರೂಪನಂ ನಿ
ಶ್ಚಿಂತನಂ ಗುಣವಂತನಂ ಸಲೆ
ಚಿಂತಿತಾರ್ಥಪ್ರದನ ಕಪಿನೀನಂಜಗುರುವರನ ೪

ಎಸೆಯಿಸಿತು ಮೂಜಗದೊಳಾತನ
ಜಸವನೇಕೋಭಾವದಿಂದುರೆ
ಪಸರಿಸಿತು ಕಾಮಾದಿ ಸಮುದಾಯುಗಳನತಿಭರದಿ
ಕುಸುರಿಸಿತು ಗುರುಭಕ್ತಜನದಲಿ
ಮಸಗಿಸಿತು ಶಿವಶರಣಗೋಷ್ಠಿಯು
ವಸುಧೆಯಲಿ ಮಿಗಿಲೆನಿಸಿತಾ ಕಲ್ಯಾಣಪುರದಿರುವಿಂ ೫

ಗುರುವು ಕಪಿನೀನಂಜಮೂರ್ತಿಯು
ಪರಮಗುರು ಶಿವರಾತ್ರಿದೇವನ
ಸುರುಚಿರದ ಗದ್ದುಗೆಯ ಪೂಜಾಕ್ರಿಯೆಗೆ ಮುಂಕೊಂಡು
ತರಿಸುತಂದಾ ಸಲಕರಣೆಯಾ
ದರದಿ ಪೂಜಿಸಿ ನಮಿಸಿ ನುತಿಸುತ
ಮೆರೆದನಾ ಲಿಂಗಾಂಗಸಮರಸದಿಂದಲಾಚಾರ್ಯ ೬

ಅಂದು ಶಿವರಾತ್ರೀಶಗುರುವ್ಕೆ
ತಂದೊರೆದ ಶಿವಯೋಗದಲಿ ನೆರೆ
ನಿಂದು ಮಾದೇಶ್ವರನ ನೆನಪಿಂದಂದು ಮಠದೊಳಗೆ
ಅಂದದಿಂದುರೆ ಗದ್ದುಗೆಯನದ
ನೊಂದ ವಿರಚಿಸು ಸಿದ್ಧಗಿರಿಯೆಡೆ
ಯೊಂದ ಕಲ್ಪಿಸು ದೇಗುಲವನೆನುತೊರೆದು ಮೈಗರೆಡ ೭

ಅದನರಿದು ಶುಭದಿನದಿ ಗುರುವರ
ವಿದಿತಕರ್ಮಾಚರಣೆಯೊದವಿಸಿ
ಮುದದಲಾವಾಹಿಸುತೆ ಮಾದೇಶ್ವರನ ಲಿಂಗದಲಿ
ಸದಯನಾರಾಧನೆಯ ನಡೆಯಿಸಿ
ಪದಪಿನಿಂ ಭೂಷಣವನೆಸಗಿಸು
ತ್ತದ್ಭುತದ ಮಹಿಮೆಗಳನೊರೆದ ಮಹಾಜನಂಗಳಿಗೆ ೮

ಅನಿತರೊಳಗಾ ಸಿದ್ಧಗಿರಿಯೆಡೆ
ಗನುನಯದ ಗುರುಯಾತ್ರೆಯೊದಗಲು
ಸನುಮತದ ಶಿವಶರಣರೊಡಗೂಡುತೆ ವಿಶೇಷದಲಿ
ವಿನುತಕೀರ್ತಿಯಿನೆಸೆದು ಕಹಳಾ
ನಿನದದಲಿ ಬಿರುದಿನ ಸಮೇತದಿ
ಚಿನುಮಯಾತ್ಮಕ ಬಂದ ಕಪಿನೀನಂಜಗುರು ಗಿರಿಗೆ ೯

ಬರುತಲಂದಾ ಸಿದ್ಧಗಿರಿಯೆಡೆ
ವಿರಚಿಸಿಹ ದೇವಾಲಯದಿ ಹಿಮ
ಕರನ ಶುಭಷಡ್ವರ್ಗದೊಳು ಮಾದೇಶನಾಮದಲಿ
ಮೆರೆವ ಲಿಂಗವ ರಚಿಸಿ ಗುರುವರ
ನಿರುವ ತಾ ಮುಂಬರಿಸಿ ನೆರೆ ಪಿಂ
ದಿರುಗಿದನು ಸುತತ್ತೂರ ಪೀಠಾಚಾರ್ಯ ನುತಧೈರ್ಯ ೧೦

ಒಂದುದಿನ ಬೊಕ್ಕಳ್ಳಿಯಾ ಜನ
ವೃಂದ ರುಜೆಯಿಂ ನೊಂದು ವೇದನೆ
ಯಿಂದ ತಾನೈತಂದು ಕಪಿನೀನಂಜನಡಿಗೆರಗಿ
ಬಂದಡರಿದಾಪತ್ತಿನಂದವ
ನೊಂದಬಿಡದೆಯೆಮಂದದೇವನ
ಲೆಂದುದತಿಶಯದಿಂದ ನಯವಿನಯಾದಿ ಗುಣದಿಂದ ೧೧

ಗುರುವೆ ಪಾಂತಿಭ್ರಾಂತಿರುಜೆಯಾ
ವರಿಸಿ ಜನಸಮುದಾಯವನು ಸಂ
ಹರಿಸುತಿದೆ ನೆರೆ ಭೀಕರಾಕೃತಿಯೊಂದುತತಿಶಯದಿ
ಭರದಿ ಸಿದ್ಧೇಶ್ವರನ ಕೊಂಡವ
ವಿರಚಿಸುತೆ ಭಕ್ತಾವಳಿಯನಾ
ಧರದೆ ಪೊರೆಯಲು ಪುರಕೆ ದಯಮಾಡೆಂದುದಾ ನಿಕರ ೧೨

ಆದನರಿದು ಗುರುನಾಥನುಸುರಿದ
ನೊದಗುವಾಪತ್ತಿನ ವಿಚಾರವ
ನದುಬುತದಿ ವಿಧಿಯೊದಗಿಸುವದದ ಕರ್ಮವಶದಿಂದ
ಸದಮಲರ ನೃಪವರರ ನೆರೆ ಸಂ
ಪದವನಳಿಸಿಹ ಬಿದಿಯ ರೀತಿಯ
ನದನೊರೆವೆ ಪರಮಾದರದಿ ಲಾಲಿಪುದು ನೀವೆಂದ ೧೩

ಸಲೆ ಹರಿಶ್ಚಂದ್ರನನು ಹೊಲೆಯನ
ನಿಲಯದಲಿ ಸೇವಕನೆನಿಸಿತದು
ಛಲದಲಾ ನಳಸಾರ್ವಭೌಮನ ಸತಿಯನಗಲಿಸಿತು
ಕಲೆಯನಳಿಸಿತು ಕುವಲಯಾಪ್ತನ
ಕುಲಜರಾ ಪಾಂಡವರ ತಿರುಪೆಗೆ
ನಿಲಿಸಿತಾ ವಿಧಿಯೆನುತ ಬೋಧಿಸುತಂದು ನಲವಿಂದ ೧೪

ಬಿರುದುಗಳ ಸರಣಿಯನು ಬೆರಸುತ
ಮೊರೆವ ವಾದ್ಯನಿನಾದ ವಿಸರದಿ
ಸರಿದೆಸೆವ ಶಿವಶರಣಸಂಕುಲದೊಡನೆ ರಥವೇರಿ
ಗುರುವನಾ ಶಿವರಾತ್ರಿದೇವನ
ಹರಿಸ ಮಿಗೆ ಕೊಂಡಾಡಿ ಸಿದ್ಧೇ
ಶ್ವರನ ಮಹಿಮೆಯ ಪಾಡಿ ಗುರುವರನಂದು ಪೊರಮಟ್ಟ ೧೫

ಅನಿತರಲಿ ಪುರಜನರು ಕೇಳಂ
ದನಘಮೂರ್ತಿಯ ಮನ್ನಣೆಯ ತಾ
ವನುಸರಿಸಿ ಕರೆದೊಯ್ದು ದೇವಾಲಯದ ಮಂಟಪಕೆ
ಅನಿಬರೈತಂದೆರಗಿ ನುತಿಸುತ
ಕನಿಕರದಿ ಗುರುದೇವ ಪೊರೆಯುವು
ದೆನುತಲುರೆ ಜಯಜಯನಿನಾದದಿ ಪೊಗಳಿದರು ಗುರುವ ೧೬

ಮರುತನುರೆ ಬಳೆ ವಾರಿವಾಹವ
ಡಿರದೆ ಸರಿಯುವವೋಲ್ದಿವಾಕರ
ಕಿರಣವೈತರಲಂಧಕಾರವು ಜಾರುತಿರ್ಪವೊಲು
ಪರತರಾನಲ ಕಪ್ಪುರವನುರೆ
ಬೆರೆದು ಸುಟ್ಟಂತಾ ಗುರುವ ಸಂ
ದರುಶನದಲಾ ಮಾರಿರುಜೆಯೋಡಿದುದು ಕಾನನಕೆ ೧೭

ಅಂದು ಕೊಂಡವ ತೆಗಿಸಿ ಪರಮಾ
ನಂದದಿಂ ಕೆಂಡವನೆ ವರ್ಧಿಸು
ತಂದುಮಾರ್ಕಿನಕವಚವೊಂದದನಿರಿಸಿ ಕಾಯಿಸುತೆ
ಚಂದದಿಂದರ್ಭಕನ ಕರೆಯಿಸು
ತಂದು ಕವಚವ ತೊಡುವುದೆಂದೆನೆ
ಸಂದೆಗವನುಳಿದಾ ಪರಮಗುರುವೆಡೆಯಲ್ಕೈತರುತೆ ೧೮

ವಿನಮಿಸುತೆ ಗುರುವರಗೆ ತಾನಂ
ದನುವನುರೆ ಪಡೆಯಲ್ಕೆ ನಿಂದಿರೆ
ಮುನಿಕುಲಾಂಬುಧಿಚಂದ್ರನಾತನ ಹರಸೆ ಕರುಣದಲಿ
ಘನತರದ ಮಳೆಸುರಿಯಲವನಿಗೆ
ಚಿನುಮಯನಿಗಾ ಸಿದ್ಧಮೂರ್ತಿಗೆ
ಜನಜನಿತ ಜಯರವದಿ ತೊಡಿಸುತಲಂದು ಕವಚವನು ೧೯

ಪ್ರತಿವರುಷವೀ ಜಾತ್ರೆಯಲಿ ಶಿವ
ಮತವನುದ್ಧರಿಸಿದನ ತನುವಿಗೆ
ಹಿತದಿ ತೊಡಿಸುವುದೆಮ್ಮನೆರೆ ಸಂರಕ್ಷಿಸುವುದೆನುತ
ಅತಿಶಯದಲಾಶೀರ್ವದಿಸಿ ಪಶು
ಪತಿಯ ಮಂತ್ರವ ಪಠಿಸಿ ಪಿಂದಿರು
ಗುತೆ ವಿಲಾಸದಿ ಪುರಕೆ ಮುದದಿಂ ಹೊರಟ ಗುರುನಾಥ. ೨೦

ಮುಂದಿನಾಗಮಗತಿಯನರಿದು ಮು
ಕುಂದಸಖ ಶಂಕರನ ನೆನೆದಾ
ನಂದದಿಂ ಗದ್ದುಗೆಯ ರಚನಾಕ್ರಮವನನುಸರಿಸಿ
ಚಂದದಿಂ ವಿರಚಿಸುವುದದನೆಂ
ದಂದು ಚೆನವೀರಾರ್ಯನಿರದೈ
ದಂದು ಬೆಕ್ಕಸವಾಂತ ಮನದಿಂ ನಿಂದು ಬೆಸಗೊಂಡ ೨೧

ಏನಿದೇನಿದು ಗುರುವೆ ಬಲು ದು
ಮ್ಮಾನವೆಸಗಿದೆ ಮನಕೆ ಬೆರೆದನು
ಮಾನಹದನವೆ ತೋರುತಿದೆ ನೆರೆ ಪೇಳ್ವುದೆಂದೆನಲು
ಸಾನುರಾಗದಲಂದು ಶಿಷ್ಯಗ
ನೂನಭಾವದಿ ಬೋಧಿಸಲ್ಕೆ ನ
ವೀನತರ ನೀತಿಯನು ಪೇಳಿದನಂದು ಗುರುರಾಜ ೨೨

ಆವ ಮಾನವನಾದೊಡೆಯು ತಾ
ನಾವ ಬರಿಸದಿ ಜನ್ಮವಂ ನೆರೆ
ದಾವರಿಸಲಾ ಭೌಮತನಿವಾಸರಗಳೆಂಟೇಳು
ತೀವಿದತಿಸಂಮೋದದಲಿ ನೆರೆ
ಭಾವಜಾಂತಕ ಕೃಪೆಯನಾಂತುರು
ಭಾವದಲಿ ಮರಣವನು ಸೇರುವನವನು ಕೇಳೆಂದ ೨೩

ಪ್ರೀತಿಯಿಂದಂದನಿತನೆಲ್ಲವ
ಸಾತಿಶಯದಿಂದರುಪಿ ಶಿಷ್ಯಗೆ
ಭೂತನಾಥನ ದಯದಲಾ ಮಂತ್ರೋಪದೇಶವನು
ಆತುರದಲುರೆಗೈದು ಶರಣ
ವ್ರಾತ ಮಧ್ಯದಿ ಮಂಡಿಸುತಲಾ
ನೀತಿಯನೆ ಬೋಧಿಸಿದ ಸದ್ಗುರುನಾಥನೊಲವಿನಲಿ ೨೪

ಕಮಲಕುಳಿ ಮಕರಂದರಸ ಬಲ
ವಿಮಲಮಾನಸಕಾ ಸ್ವರಸ ಬಲ
ಶ್ರಮನಿವಾರಣೆಗಾ ಸುಗುಣಶೈತ್ಯೋಪಚಾರ ಬಲ
ಕ್ರಮದನುಸರಣೆಗಾ ಸುಮತಿ ಬಲ
ಯಮಭಯಕೆ ಪಂಚಾಕ್ಷರಿಯೆ ಬಲ
ವಿಮಲತೆಯೆ ಗುರುರಾಜನೊಲುಮೆಗೆ ಬಲವು ಕೇಳೆಂದ ೨೫

ಗುರುನುತಿಯು ರಸನೆಗೆ ವಿಭೂಷಣ
ಗುರುವಿಗೀವುದೆ ಕರಕೆ ಭೂಷಣ
ಗುರುಸದನಗಮನಾಗಮನ ಚರಣಾಭರಣಮಲ್ತೆ
ಗುರು ವಿನತಿಯು ಶಿರೋವಿಭೂಷಣ
ಗುರುವಿಧಿಯೆ ಜೀವಾಭರಣ ನೆರೆ
ಗುರುಕಥಾಶ್ರವಣವದು ಕರ್ಣಾಭರಣ ಕೇಳೆಂದ ೨೬

ವಿಶದಮತಿಬಲ ಸಜ್ಜನಕೆ ವರ
ಪರುವಿನುರುಬಲವಶನಸೌಖ್ಯಕೆ
ಶಿಶುವಿನಾಬಲ ಜನನಿಗರಸಿಂಗತಿ ನಯೋಕ್ತಿ ಬಲ
ಶಶಿಯುಬಲ ಸಸ್ಯಾಳಿಗಾ ಪರ
ಪಶುಪತಿಯುಬಲ ಸಾಧುಜನರಿಗೆ
ವಶವಕಡೆ ಗತಿ ಗುರುಬಲವೆ ನಿನಗೆಂದನಾಚಾರ್ಯ ೨೭

ಗಗನಬಲವಾ ಖಗಕುಲಕೆ ಮಿಗೆ
ಸೊಗಸಿನಾಬಲ ಜವ್ವನಕೆ ನಗೆ
ಮೊಗಕೆ ಬಲವಾ ಮಧುರವಾಣಿ ವಿನೋದಬಲ ರಸಕೆ
ಮೃಗಕೆ ಬಲ ಸಂಸರ್ಗಪರತರ
ದಗಜೆಯರಸನ ಬಲ ವಿರಕ್ತಗೆ
ಸುಗತಿಯಾ ಬಲವಿಹುದು ಗುರುಭಜನೆಯಲಿ ಕೇಳೆಂದ ೨೮

ರಾಜಕಾರ್ಯಕೆ ರವಿಯುಬಲ ವರ
ರಾಜಬಲ ಸುಖಭೋಜನಕೆ ರಾ
ರಾಜಿಸುವ ತಪನೀಯಮುಕುರೆ ವರ ಭೂಕುಮಾರಬಲ
ಈ ಜಗದಿ ಭೋಗಕ್ಕೆ ಭೃಗುಬಲ
ತೇಜದಾಯುರ್ಭಾವ ಶನಿಬಲ
ರಾಜಧರನೊಲುಮೆಗುರೆ ಗುರುಬಲವೆಂದನಾಚಾರ್ಯ ೨೯

ಇಂತೆನುತೆ ಬೋಧಿಸುತೆ ನಯವನ
ನಂತಧರ ಸನ್ಮಂತ್ರಪಠನಾ
ಚಿಂತೆಯಿಂದುರೆ ಮರೆದು ಚೆನವೀರಾರ್ಯನನೆ ಕರೆದು
ಸಂತಸದಲುರೆ ಪಟ್ಟಗಟ್ಟುತ
ನಂತಸೌಖ್ಯವನಿತ್ತು ನೆನೆದಾ
ಕಂತುಹರನಲಿ ಬೆರೆದ ಕಪಿನೀನಂಜಗುರುನಾಥ ೩೦

ಗುರುವರನ ಸಿಂಗರಿಸಿ ಮಂಟಪ
ವಿರಲದರೊಳಗೆ ಕುಳ್ಳಿರಿಸುತಾ
ದರದಿ ಪುರಪಥಿಯಲುರೆ ಪರಿಪರಿಯಿಂದ ಮೆರೆಯಿಸುತೆ
ಬರುತಲಾ ಗದ್ದುಗೆಯ ಬಳಿ ನೆರೆ
ದಿರುವ ಜನ ಜಯಜಯ ನಿನಾದದಿ
ನಿರಲು ಗುರುಮೂರ್ತಿಯನು ಪುಗಿಸಿದರಂದು ಗದ್ದುಗೆಯ ೩೧

ಗೌರಿ ಕರುಣಾರಸಲಹರಿ ಮಾ
ಶಾರದಾ ಜಂಭಾರಿಸತಿ ಸುಖ
ಕಾರಿಣಿಯೆ ದಾಕ್ಷಾಯಣಿಯೆ ಫಣಿವೇಣಿ ಶರ್ವಾಣಿ
ವೀರೆ ಮಾಹೇಶ್ವರಿ ಮನೋನ್ಮನಿ
ಸಾರತರ ಸಚ್ಚರಿತೆ ಕುಡು ಮಹಿ
ಶೂರನಿಲಯವಿಲಾಸೆ ಚಾಮುಂಡಾಂಬೆ ಶುಭತತಿಯ ೩೨

# ಚೆನವೀರದೇಶಿಕೇಂದ್ರ ಕಥನಂ

ಪರಮ ಕಪಿನೀನಂಜಗುರುಪದ
ಸರಸಿಜಾಮಳಭೃಂಗನಿರದಾ
ವರಣಪುರ ಪೀಠದಲಿ ಚೆನವೀರಾರ್ಯನೆಸೆದಿರ್ದ

ಶ್ರೀ ರಜತಗಿರಿವಾಸ ಮುನಿಪರಿ
ವಾರವಂದಿತಚರಣ ಕರುಣಾ
ಪೂರ ಮಾಹೇಶ್ವರನಿಕಾಯಾಂಬುಧಿ ಕಲಾನಿಧಿಯ
ಶ್ರೀರಮಾರಮಣೇಷ್ಟವರದನೆ
ಮಾರಮರ್ದನದೇವ ವರಗಂ
ಭೀರಗುಣ ಕುಡು ಸೋಮನಾಥನೆ ರಸೆಗೆ ಮಂಗಳವ ೧

ಆಲಿಸೆಲೆ ಸಿದ್ಧಾರ್ಯ ನತಪರಿ
ಪಾಲಕನ ಚೆನವೀರಗುರುವಿನ
ಶೀಲಯುತ ಪರತರ ಸುಕಥನೋತ್ಸವ ವಿಶಾಲತೆಯ
ಪಾಲಿತಾಖಿಲ ದೀನಲೋಕದ
ಜಾಲಯುತ ದುರ್ಬೋಧ ತತಿ ನಿ
ರ್ಮೂಲನೆನುತಂದೊರೆದನಾ ಶಿವರಾತ್ರಿಗುರುನಾಥ ೨

ಪರಮಪುಣ್ಯಜನೋತ್ಕರವು ನೆರೆ
ದಿರಲದಲಕಾಪುರವ ಭೋಗಿಗ
ಳಿರೆ ಮೆರೆಯಲಾ ನಾಗರಾಜನ ಪೊಳಲ ಮರೆಯಿಸುತೆ
ಪರಮವಿಬುಧನಿಕಾಯವಿರಲಾ
ಸುರಪುರವ ಮೀರುತಲೆಸೆದುದಾ
ವರಣಪುರವಾ ವೀರಸಿಂಹಾಸನ ವಿರಾಜಿಸಿರೆ ೩

ಇಂತೆಸೆವ ಪುರದಪರಭಾಗದಿ
ಸಂತಸದಲಾ ಕಪಿಲೆಯಾ ನದಿ
ಚಿಂತಿತಾರ್ಥವನೀಯುತೊಲ್ದಿರೆ ಮಗ್ನಜನಚಯಕೆ
ಕಂತುಹರ ಕಪಿಲೇಶ್ವರನ ಚಿರ
ದಂತರಂಗದಿ ನೆನೆದು ನುತಿಪುದ
ರಿಂತೆನಲು ಪೊರೆಯುವ ನಿನಾದದಲೆಸೆದುದಂದಿನಲಿ ೪

ಗುರುವರನ ಮಹಿಮಾತಿಶಯುವದ
ನರಿಯುತವಲೋಕಿಸಲು ವಿಶ್ವಂ
ಭರೆಯಲಂಕೃತಳಾಗೆ ಪಚ್ಚೆಯಸೀರೆಯುಟ್ಟಳೆನೆ
ಪರತರದ ಕಾಂತಿಯ ನಿರೀಕ್ಷಿಪ
ನರರಿಗತಿ ಸಂತಸವನೀಯುತ
ಪುರದ ಕಳಮಕ್ಷೇತ್ರ ರಾರಾಜಿಸಿತು ವೈಭವದಿ, ೫

ಮುದದಿನೊಲಿದಿರುತಾ ಪುರದಿ ಗುರು
ಸದಯಮಾನಸದಿಂದ ಕೂಡುತೆ
ಪದಪಿನಿಂದಾ ಶಿಷ್ಯಮಂಡಲಿಗಂದೆ ಬೋಧಿಸುತೆ
ವಿದಿತಗತಿಮಾರ್ಗವನೆ ತೋರುತ
ಲದುಬುತದ ಕಾರಿಯವನೆಸಗುತ
ಮದನಹರಮೂರ್ತಿಯ ಪದಾಬ್ಜವ ನೆನೆದು ಚಿತ್ತದಲಿ ೬

ಮಲಗಲಂದಾ ನಿಶೆಯೊಳಗೆ ಸ
ತ್ಫಲವನೀಯುವ ನೆಪದಿ ಗುರುವರ
ನೊಲುಮೆಯಲಿ ತಾನೈದುತುಸಿರಿದನೊಂದನಾತನಲಿ
ನಿಲದೆಯಾ ಮಾಯಾವಿದೂರನ
ಕಲೆಯುದೊಂದುದಿಸಿಹುದು ನೀನಾ
ನೆಲೆಯುರಿಯೆ ಬಾ ಕೊಂಗಹಳ್ಳಿಯ ಮಲೆಗೆ ಬೇಗೆನುತ ೭

ಅಂದೆ ಮರೆಯಾಗಲ್ಕೆ ಪರಮಾ
ನಂದಿ ಚೆನವೀರಾರ್ಯಪರಿಕರ
ದಿಂದ ವಾದ್ಯನಿನಾದ ಮೊರೆಯಲ್ಕಂದೆ ಪೊರಮಡುತ
ಚಂದದಿಂದಾ ಗಿರಿಯನೇರುತ
ಮಂದ ದೇಶಿಕತಟದಲಿಳಿಯುತ
ನಿಂದು ಬಣ್ಣಿಸುತಿರ್ದನಾ ಮಲೆಮೂರರತಿಶಯುವ ೮

ಗಿರಿಯನೇರುತಲಲ್ಲಿ ಪೊದರಿನ
ಕುರುಪಿರಲು ಚದರಿಸುತಲೊಳಗಿರೆ
ಮೆರೆವ ಲಿಂಗವ ನಿರುಕಿಸುತೆ ಪರಮಾನುರಾಗದಲಿ
ಪರತರದ ವೇದೋಕ್ತಮಂತ್ರವ
ನೊರೆಯುತಭಿಷೇಕವನೆ ವಿರಚಿಸಿ
ನೆರೆ ಭಸಿತಗಂಧಾಕ್ಷತಾ ಸುಮಚಯದಿ ಪೂಜಿಸುತ ೯

ಮಲಯಶೈಲದ ಧೂಪವರ್ಪಿಸಿ
ಬಲದಿನಾ ದೀಪವನೆ ಬೆಳಗುತೆ
ಸುಲಲಿತದಿ ವಿನಮಿಸುತೆ ನುತಿಸುತಲಿರಲು ಜನನಿಚಯ
ಹುಲಿಯ ಮೂರರ ಬಳಿಯ ಪೊದರಿನ
ನಿಲಯದಲಿ ನೆಲಸಿರ್ಪ ದೇವನ
ಸಲೆ ದರುಶನದಿ ಧನ್ಯರಾದಿರೆನುತ್ತ ಗುರುವೊರೆದ ೧೧

ಒಂದುದಿನ ಕನಸಿನಲಿ ಗುರುವೈ
ತಂದುಸಿರಿದುದ ಪೇಳ್ವೆ ಲಾಲಿಪು
ದೆಂದೆನುತ ಮಾನವಸಮೂಹದೊಳೊರೆಯೆ ಗುರುನಾಥ
ಚಂದದಿಂದಾ ಮುಗಿದ ಕರಯುಗ
ದಿಂದ ನಿಂದಿರಲೊರೆದ ತಾನಂ
ದೊಂದ ಚಿನವೀರಾರ್ಯ ಪರಮಾಚಾರ್ಯ ಗುರುವರ್ಯ ೧೧

ಬರುತಲುತ್ತರದೇಶದಿಂದಾ
ಪರಶಿವನ ಪರಮಾಂಶವಿರದಾ
ವಿರತಿಮಯಗುಣಭಾವದಿಂದಾ ವ್ಯಾಘ್ರವಾಹನವ
ಭರದಲೇರುತಲಾವರಣಪುರ
ದಿರವರಿದು ಪೊರಮಡುತಲಂದೀ
ಗಿರಿಯ ಸೇರ್ದನು ಮಲ್ಲಿಕಾರ್ಜುನದೇಶಿಕೋತ್ತಮನು ೧೨

ವಿರತಿಯವನಿವನಾದ ಕತದಿಂ
ತರುಣಿಯರನೀಯಡೆಗೆ ಬರಗೊಡ
ದಿರುವುದೇ ಮತವಿದನರಿದು ಮುಂಬರಿಸದಿರಿ ಮನವ
ಗುರುವಿನಾಜ್ಞೆಯನೊರೆದೆ ಮೂರ್ತಿಯು
ಮೆರೆಯಿಸಿದೆನಿಂದುತ್ಸವದಿ ಓಂ
ದಿರುಗುವೆನು ನಾನೆನುತ ಪರಿಕರವೆರಸುತನುವಾದ ೧೩

ಪರಮಕಾಸಾರದಿ ವಿರಾಜಿಪ
ಶರಸಿಜವು ಪಗೆಯೆನಿಪ ಚಂದ್ರನ
ಭರದಿ ಪಿಡಿವೆನೆನುತ್ತೆ ಗುರುವಿನ ಹಸ್ತರೂಪದಲಿ
ಬರುತವನ ಪಿಡಿದಿಹುದೆನಲು ಗುರು
ಕರವೊಳೆಸೆದ ಕಮಂಡಲವು ಸಲೆ
ಮೆರೆದುದಂದಾ ಚಂದ್ರಕಾಂತಶಿಲಾ ವಿರಚಿತವದು ೧೪

ಕೊಂಗದಂತಿಹ ಗಿರಿಯ ಬಳಿಯೊಳಿ
ಗಿಂಗಿತಜ್ಞನದೊಂದು ತಾಣದೆ
ಕೊಂಗಹಳ್ಳಿಯದೆನುತೆ ಪೆಸರಿಡುತಂದೆ ಶಿಷ್ಯರಹ
ಜಂಗಮರನಲ್ಲಿರಿಸಿ ಪೂಜೆಗೆ
ಭಂಗಬಾರದ ತೆರನುಸಿರಿ ಚರ
ಸಂಗ ಪಯಣದ ಮೇಲೆ ಪಯಣದಿ ಪುರಕೆ ನಡೆತಂದ ೧೫

ಬರುತ ಗುರುವಿನ ಗದ್ದುಗೆಯ ತಾ
ನಿರದಲಂಕರಿಸುತ್ತ ಪೂಜಾ
ಕರಣದಿಂದೆಸೆದಂದೆ ವೈಭವದಿಂದಿರಲು ಮುಂದೆ
ಮೆರೆಯುವಾ ವರ ಸಿದ್ಧಮಲ್ಲಾ
ರ್ಯರು ಮುಗಿದ ಕರದಿಂದ ಪಂಚೀ
ಕರಣವದನರುಪೆನುತೆ ಬೇಡಲ್ಕಂದು ನಲವಿಂದ ೧೬

ಪಠಮುಗುತುವರ ಚೆನ್ನಬಸವೇ
ಶ್ವರನೊರೆದ ಪಂಚೀಕರಣವದ
ನರುಪುವೆನು ನಾ ನಿನಗೆನುತ ಚೆನವೀರಗುರುವರ್ಯ
ಹರಶರಣಸಮುದಾಯ ಮಧ್ಯದ
ಲಿರುವ ಭದ್ರಾಸನದಿ ಮಂಡಿಸು
ತೊರೆದನಂದಾ ಪಂಚವಿಂಶತಿ ತತ್ತ್ವನಾಮಗಳ ೧೭

ಧರೆ ಜಲಾಗ್ನಿಸದಾಗತಿಯು ಪು
ಷ್ಕರವಿತಾನವೆ ಭೂತಪಂಚಕ
ವಿರೆ ನಿನದವಾಕ್ಸ್ಪರ್ಶರೂಪವು ರಸವುಗಂಧ ನೆರೆ
ಮೆರೆವ ಗುಣಪಂಚಕವಹವು ಸುರು
ಚಿರದ ನಾಸಿಕ ಜಿಹ್ವೆಯಂಬಕ
ಪರತರದಲಂದಾ ತ್ವಗಿಂದ್ರಿಯ ಕರ್ಣವೈದಾಯ್ತು ೧೮

ಮೆರೆವುದಂದಾ ವಾಕ್ಕು ಪಾಣಿಯು
ಚರಣಗುಹ್ಯ ಗುದಾದಿ ಪಂಚಕ
ವಿಶದದೆಯೆ ಕರ್ಮೇಂದ್ರಿಯಂಗಳವೆಸರಿನಿಂದೆಸೆದು
ನೆರೆಯಲಂದಾ ಚಿತ್ತಮೂರೆ ಮತಿ
ಗರುವಿಕೆಯು ಮನವರಿವು ಪಂಚೀ
ಕರಣಚಯವಿದು ಪಂಚವಿಂಶತಿತತ್ತ್ವ ಕೇಳೆಂದ ೧೯

ಪರಮ ಶಿವಶಕ್ತಿಯು ಸದಶಿವ
ಮೆರೆಯುವೀಶ್ವರವಿದ್ಯೆ ಕಾಲಾ
ಚರಣೆಯುರುತರ ನಿಯತಿಕಲೆಯರಾಗವಾ ಪುರುಷ
ಇರುವುದಂತಾ ಪ್ರಕೃತಿಯಿವು ನೆರೆ
ದಿರುವವೀ ಪನ್ನೊಂದು ಗಣಿತದ
ಲುರುತರದಲಾ ಲಿಂಗತತ್ವವು ಕೇಳುಕೇಳೆಂದ ೨೦

ಧೀರ ಕೇಳಿಂತಿರುವ ಮೂವ
ತ್ತಾರುತತ್ತ್ವವ ಬೆರೆದ ಮಾನವ
ವೀರಶೈವಾಚಾರ ಗುಣಸಂಪನ್ನತೆಯನಾಂತು
ಧಾರಿಣಿಯೊಳುರೆ ಮೆರೆವನಾ ಮಾ
ರಾರಿರೂಪನ ಕರುಣದಿಂದ ವಿ
ಚಾರಪಥದೊಳಗಿರ್ದು ಮೋಕ್ಷವ ಪಡೆವನವನೆಂದ ೨೧

ಪರಮ ನಿರ್ಗುಣನಾದಿರಹಿತನು
ವಿರತಿನುತಮಾಯಾವಿದೂರನು
ಶರಣಸಂಕುಲರಕ್ಷ ಪಾಪಕ್ಷಯವಿರೂಪಾಕ್ಷ
ಗುರು ನಿರಂಜನದೇವ ಸುರುಚಿರ
ನಿರವಯುವ ನಿರ್ಲೇಪ ನಿರುಪಮ
ಮೆರೆದನಂದಾ ಶಿವನು ನಿರಶನ ನಿರಘ ಸರ್ವೇಶ ೨೨

ಗಿರಿಶನಿಂದಾ ಗಗನಮದರಿಂ
ಮರುತನದರಿಂದನಲಮದರಿಂ
ಸುರುಚಿ ಜಲಮದರಿಂದಲಾ ಭೂತತ್ತ್ವಮುದಯಿಸಿತು
ಮೆರೆವ ರವಮಭ್ರದಿಮನಿಲನಿಂ
ದಿರದೊಗೆದುವಾ ದನಿ ಪರುಸವವು
ನೆರೆದುದಾ ಶಬ್ದಾದಿಗುಣ ಮೂರಂದೆ ವಹ್ನಿಯಲಿ ೨೩

ಸಲಿಲದಿಂದಾ ನಿನದಮುಖ ನಾ
ಲ್ಕೊಲಿದೊಗೆಯುವುವು ನಲವಿನಲಿ ನೆರೆ
ನೆಲದಲಂದಾ ಶಬ್ದಮೊದಲಿಹ ಗುಣಗಳೈದಾಯ್ತು
ಸುಲಲಿತದಿ ಭೂವಲಯದಲಿ ನಿಜ
ಬಲಮನಾಂತೊಲಿದೆಸೆಯೆ ಸಲೆ
ನಿಲುವುದಂದಾ ಸತ್ವಸಹಕಾರಗಳ ಸಮುದಯಕೆ ೨೪

ಧರಣಿಯಲಿ ನಭ ನೆರೆಯೆ ಚಿತ್ತವು
ಬೆರೆಯೆ ವಾರಿಯು ಗಗನಮತಿಯದು
ಮೆರೆಯುವಗ್ನಿಯನಂಬರವು ಕೂಡಲ್ಕಹಂಕೃತಿಯು
ಮರುತನೊಳಗಾಕಾಶವೊಂದಲು
ಬರುವುದಂದಾ ಮನವು ವರ ಪು
ಷ್ಕರದಲಾದಿಪುದು ಜಾನವೊಂದೇ ಕರಣಮೈದಾಯ್ತು ೨೫

ಧರೆಯನಿಲದಿಂ ಪ್ರಾಣ ಜಲದಲಿ
ಬೆರೆಯೆ ಮರುತನಪಾನಮನಲನ
ನಿರದೆ ಸಂಧಿಸೆ ಮರುತನಂದೆಯುದಾನಮುದಯಿಪುದು
ಭರದಿ ದಿನಕರ ಪಥದಿ ಮಾರುತ
ನಿರೆ ಸಮಾನ ಶರೀರದೊಳು ಮೆರೆ
ದಿರಲ್ ವ್ಯಾನವು ವಾಯುಪಂಚಕವೆಂದ ಗುರುನಾಥ ೨೬

ಧರೆಯು ಬೆರೆಯಲು ಶಿಖಿಯು ಮೂಗದು
ವರಜಲದಲಗ್ನಿಯಿರೆ ರಸನೆಯು
ದಿರುವಿನಿಂದಾದುದು ನಯನ ಮರುದನಲರಿಂ ಚರ್ಮ
ಪರಮಗಗನವ ಸೇರಲಗ್ನಿಯು
ಬರುವುದಂದಾ ಶ್ರವಣ ಭರದಲಿ
ಗುರುವರಾಶ್ರಯ ಕೇಳುಕೇಳೀ ಜ್ಞಾನದಿಂದ್ರಿಯವ ೨೭

ಗುದವು ಧರೆಯಿಂ ಧರೆ ಜಲದೆ ಬರು
ವದದು ಗುಹ್ಯವು ಪಾದಮುದಿಪುದು
ಪದಪಿನಿಂ ಶಿಖಿ ಧರಣಿಯಿಂ ಭೂ ಪವನದಿಂ ಹಸ್ತ
ಒದಗುವುದು ವಾಗ್ದರಾನಭದಿಂ
ದಿದನೊರೆದೆ ಮುದದಿಂದ ಚಿಂತಿಸಿ
ಹೃದಯದಲಿ ನೆಲೆಗೊಳಿಸಿ ನೀಂ ಕೃತಕೃತ್ಯನಾಗೆಂದ ೨೮

ಧರೆಯಲಂದಾ ಸಲಿಲ ಬೆರೆಯಲು
ಭರದಲುದಿಪುದು ಗಂಧವದು ತಾ
ನುರುತರದ ಜಲದಿಂದ ರಸಗುಣವೆಸೆಯುವುದು ತರದಿಂ
ಸುರುಚಿ ಶಿಖಿಯಲಿ ನೆರೆಯಲಾ ಜಲ
ಬರುವುದಂದಾ ರೂಪು ವಾರಿಯು
ದಿತದದನಲನನೊಂದಲಂದೇ ಪರುಸವಾಗುವುದು ೨೯

ಸಲಲಿವಾ ಶ್ವಸನದಲಿ ಮುದದಿಂ
ಕಲೆಯಲಂದುದಿಸುವುದು ದನಿಯಿದ
ನೊಲಿದುಸಿರಿರುವೆನಿಂದು ಗುಣಪಂಚಕವನೆಲೆ ಬೋಧ್ಯ
ಸುಲಲಿತದಲಾ ಪಂಚವಿಂಶತಿ
ಕಲೆಯ ತತ್ವವಿಚಾರವಿದೂ ನೀ
ನಿಲಿಸು ಮಾನಸದಲಿ ನಿಜವಣಿದನೆಂದನಾಚಾರ್ಯ ೩೦

ವೇದನಿಚಯವಿಶೇಷದಿಂದುರೆ
ವಾದಿಸಲು ಬಾರದಿಹ ಗುರುವಿನ
ಪಾದಪದ್ಮಯುಗಕ್ಕೆರಗುತಾ ಸಿದ್ಧಮಲ್ಲಾರ್ಯ
ಸಾದರದಿ ನೆಲಸಿಹುದು ಶುಭಪರ
ಮಾದರವದೆನ್ನಂತರದಿ ಪು
ಣ್ಯೋದಯವನೇಂ ಬಣ್ಣಿಸಲಿ ಗುರುವರನೆ ಸಲಹೆಂದ ೩೧

ಎಂದೆನಲು ಶಿವಯೋಗಿ ಮಹದಾ
ನಂದದಿಂ ಶಿಷ್ಯಂಗೆ ಬೋಧಿಸು
ತಂದೆ ನಿಜತತ್ವವನು ಸಮರಸಭಾವದಿರುವೆಂದ
ಮುಂದುವರಿಸಲ್ಕಾತನನು ಪುರ
ವೆಂದು ಸಿಂಗರಿಸಿರಲಿ ಬೇಗದ
ಲೆಂದರುಪಿ ಗಣವೃಂದವನು ಕರೆಯಿಸುತಲಾದರದಿ ೩೨

ಇಂತೆಸೆದು ಗುರುನಾಥ ಶಿಷ್ಯಗ
ನಂತ ವಿಷಯವನರುಪಿ ತಾ ನಿ
ಶ್ಚಿಂತೆಯಿಂದಾತಂಗೆ ಪಟ್ಟವ ಕಟ್ಟುತತಿಶಯದಿ
ಸಂತಸದಿ ಪೊರಮಡುತೆ ಕೊಡಗರ
ಚಿಂತಿತಾರ್ಥವನಿತ್ತು ಮೋಕ್ಷದ
ಹಂತಗಳ ತೋರಿಸುತ ಬೋದಿಸುತಂದೆ ತಾಂ ಸರಿದ ೩೩

ಸರಿಸದಲಿ ತಾನೊಂದು ಗಿರಿಯಹಾ
ವರಿಸಿ ಮೆರೆದಿರಲಂದು ನಿರುಕಿಸಿ
ಪರಮಹಿತದಿಂದಲ್ಲಿ ಶೋಭಿಪ ಪರಿಯ ಪರಿಕಿಸುತ
ಹರಿಲಸಿತ ಗುರುಶಾಂತಮಲ್ಲನ
ಗಿರಿಯದೆಂದಂದರಿದು ಪರಶಿವ
ಶರಣವೃಂದವ ಕೂಡಿ ಕುಹರದಲೆಸೆದು ಗುರುನಾಥ ೩೪

ಶಾಂತಮಲ್ಲೇಶ್ವರನ ತಾ ಮುದ
ವಾಂತು ಸಂದರ್ಶಿಸುತ ಗಿರಿಜಾ
ಕಾಂತನವತಾರದವನೆನುತೊರೆದಂದು ನರಚಯಕೆ
ಶಾಂತಸದನದಲಿರುತೆ ಗುರುವಿನ
ಶ್ರಾಂತಿಯಲಿ ನೆರೆದಂದು ಮೋಕ್ಷದ
ಕಾಂತನೆನಿಸುತಲೆಸೆದ ಚೆನವೀರಾರ್ಯ ಪರಮಾರ್ಯ ೩೫

ಸಾರಸಾರಸನೇತ್ರ ವರಜಂ
ಭಾರವಿನುತಚರಿತ್ರ ಪರಮೌ
ದಾರಗುಣಗಣಚಿತ್ರ ಯಮಿನುತಿಪಾತ್ರ ಶುಭಗಾತ್ರ
ಧೀರಮತಿರತಿಪಾಲೆ ನೆರೆ ಮಹಿ
ಶೂರ ಕೃಷ್ಣನೃಪಾಲ ಪಾಲನೆ
ಸಾರತರೆ ಕುಡು ಶುಭವ ಚಾಮುಂಡಾಂಬಿಕಾದೇವಿ ೩೬

# ಸಿದ್ಧಮಲ್ಲಶಿವಾಚಾರ್ಯ ಕಥನಂ

ಸಿದ್ಧಮಲ್ಲಯತೀಂದ್ರ ತೋಂಟದ
ಸಿದ್ಧಲಿಂಗನ ದಯದಿ ಯೋಗದ
ಸಿದ್ಧಿಯನು ಪಡೆದೊಲ್ದೆ ಸೆದ ಸುತ್ತೂರಪೀಠದಲಿ

ಶ್ರೀ ನಿರಂಜನ ಪರಮ ಪೂಜ್ಯನ
ಏಿನಕಥನಾವೋದ ಪುರಹರ
ಮಾನಸೋದ್ಭವ ಮದಹರಣ ಭಸಿತಾಂಗ ಧೃತಹರಿಣ
ಆನತಾಳಿ ಹೃದಬ್ಜಭಾಸ್ಕರ
ಭಾನು ಶಶಿ ಶಿಖಿನೇತ್ರ ಸುಖಕರ
ಸಾನುರಾಗದಿ ಶುಭವಕುಡು ನೀ ಸೋಮನಾಥೇಶ ೧

ಆಲಿಸುವುದೆಲೆ ಸಿದ್ಧಲಿಂಗವಿ
ಶಾಲಮತಿಸದ್ಧರ್ಮರಚನಾ
ಲೋಲ ಸಮಯಾಚಾರವಿದ ವೇದಾಂತಸಾರಜ್ಞ
ಪಾಲಿತಾನತಜಾಲವಿತರಣ
ಶೀಲನಹ ಗುರುಸಿದ್ಧಮಲ್ಲನ
ಲೀಲೆಯುರುಕಥೆಯೊರೆವೆ ನಾಂ ನಿನಗೆಂದ ಗುರುನಾಥ ೨

ಪಲಬಗೆಯ ವಿದ್ಯಾವಿಚಾರದಿ
ಫಲಭರಿತ ಧರ್ಮೋಪದೇಶದಿ
ಬಲಪರಾಕ್ರಮವೀರ ಲೋಕಯಶೋವಿಶೇಷದಲಿ
ಭಲರೆನುತೆ ಜನರುಲಿವ ನಾದದಿ
ಮಲಹರನ ಸಚ್ಚರಿತ ಕಥನದಿ
ಲಲಿತದಿಂದಾವರಣಪುರಮೆಸೆದುದುಃಪವರ್ಗದಲಿ ೩

ಪುರದ ಮಹಿಮೆಯನರಿದು ಸುಗುಣದಿ
ಬೆರೆದು ಸುತ್ತೂರಿನಧಿಪನ ನೆರೆ
ದರಿದು ಬಕುತಿಯ ದಾರಿಯನು ಮನ್ನಣೆಯ ತಿಳಿದಂದು
ಸುರಸಕಮಲಿನಿ ಕುಡುವ ಸುರುಚಿರ
ಪರಮ ನೀಲದಮಣಿಯ ಸರಪೆನೆ
ಮೆರೆದುದಂದುರೆಯೆಸೆವ ಭೃಂಗಾವಳಿಯು ಕೊಳದೊಳಗೆ ೪

ನೆರೆದುದುತ್ತರ ಪಶ್ಚಿಮದಿ ಬಲು
ಮೆರೆವ ತರುಸಂಚಯಾ ವಿಶೇಷದಿ
ಪರಿಮಳಾನ್ವಿತ ಸುಮವನದಿ ರಾರಾಜಿಸುತಲಿರುವ
ಧರೆಯ ಸಿಂಗರದುರುಜಟೆಯ ತೆರ
ನಿರುವುದೆನಲುರೆ ತೋರ್ದುದಂದಾ
ದರದಿ ಪರಿವಾ ಕಪಿಲ ನದಿಯದು ನೀಲವರ್ಣದಲಿ ೫

ಒಂದುದಿನ ಗುರುಸಿದ್ಧಮಲ್ಲನು
ಚಂದದಿಂದುರೆ ಗದ್ದುಗೆಯ ನಲ
ವಿಂದ ಪೂಜಿಸಿ ಪರಮಲಿಂಗಾರಾಧನೆಯ ಮನದಿ
ಅಂದದಿಂದನುಭವದ ಮಂಟಪ
ಮೊಂದಿ ರಾಜಿಸಿ ಶಿವಶರಣ ಚಯ
ದಿಂದ ಮಠಕ್ಕೈತಂದು ಯೋಗಾನಂದಿ ಶಯನಿಸಿದ ೬

ಪರಮ ಪೂರ್ವದಿಶಾಂಗನಾಮಣಿ
ಪರತರದ ಪೀತಾಂಬರವ ಗುರು
ವರನೆ ತಾನರ್ಪಿಪೆನೆನುತ ವಿರಚಿಸುತಲತಿಭರದಿ
ಕರದಿ ತಾಂ ಪಿಡಿದಿರುವಳೆನಲಂ
ದರುಣಮುದಿಸುತ ತೋರ್ದುದಂತಾ ೭
ವರಿಸಿ ಗಗನವ ನೋಳ್ಪ ಮಾನವ ನಿಚಯ ಕನುವಿನಲಿ

ಗುರುವರನ ಸುರುಚಿರ ಯಶೋನ್ನತಿ
ಇದೆಸೆಯಲಂದೊಲಿದು ಧರೆಯಲಿ
ನಿರುಕಿಸುವ ನೆಪದಿಂದ ಮೂಡಣಗಿರಿಯ ಕೋಡಿನಲಿ
ಬರುತ ನಿಂದಿಹುದೆನಲು ತೋರ್ದುದು
ತರಣಿಬಿಂಬ ವಿಕಾಸದಿಂದುರು
ಭರದಿ ಪೂರ್ವದಿಗಂತರದಿ ರಾರಾಜಿಸುತ ಮುದದಿ ೮

ವರ ಪರಾಶರ ಸುತನಸಭೆಯೊಲು
ಮೆರೆವ ಮುನಿ ದೂರ್ವಾಸಚರರೊಲು
ಪರತರನ ಪ್ರಭುವರನ ಬಳಸಿಹ ಚರನಿಕಾಯದೊಲು
ಹರಶರಣ ಗೌತಮಮುನೀಂದ್ರನ
ಪರಿಕರವು ಪಸರಿಸಿದ ತೆರದಿಂ
ಮೆರೆವವೊಲು ಗುರುರಾಜಸಭೆ ಗುರುಭಕ್ತರಿಂದೆಸೆಯೆ ೯

ಸುರೇಸಭಕ್ತನಿಕಾಯ ಹೃದಯಾಂ
ತರನಿಲಯ ಪಾಪಾಂಧಕಾರವ
ನುರೆ ತೊಲಗಿಸಲ್ಕಾಡರದಿ ಗುರುವರ ವಿಭಾಕರನು
ಪರಮ ಬೋಧಾನಂದ ಕಿರಣಗ
ಳಿರಲವನೆ ಪಸರಿಸಲು ಪೂರ್ವದ
ಸುರುಚಿ ಪೀಠಾಚಲವನೇರ್ದನು ಲೋಕಪಾಲನೆಗೆ ೧೦

ಅನಿತರಲಿ ಗುರುವೆಡೆಗೆ ಪುರಜನ
ರನಿಬರಾದರದಿಂದ ಬರುತಂ
ದನಘಮೂರ್ತಿಯ ಪದಕೆರಗುತಾ ಕಪ್ಪಕಾಣ್ಕೆಯನು
ವಿನಯಭಾವದೊಳೀಯುತುರೆ ನಿಜ
ಮನದಳಲನೊರೆಯಲ್ಕೆರಗಿ ತಾ
ವನುನಯದಿ ಬಿನ್ನವಿಸಿದರು ಮುಗಿದಿರ್ದ ಕರಯುಗದೆ ೧೧

ಗುರುವೆ ಮೋಕ್ಷವ ಪಡೆದ ನರ ಹಿಂ
ದಿರುಗಿ ಧರೆಗೈತರುವನೇ ನಾ
ವರಿಯಬೇಕಾ ಪರಿಯನೊರೆವುದು ದಯದಭಾವದಲಿ
ಹರಿಸಬಗೆಯದನಾಂತು ತಾನಂ
ದುರತರದ ಮೋಕ್ಷದ ವಿಚಾರವ
ನರುಹುತಿರ್ದನು ಸಿದ್ಧಮಲ್ಲಯತೀಂದ್ರ ಗುಣಸಾಂದ್ರ ೧೨

ಇರದೆ ಪಾಲದು ದಧಿಯ ಬೆರೆಯಲು
ಭರದಿ ತಾಂ ದಧಿಯಪ್ಪ ತೆರದಿಂ
ಬೆರೆಯಲಾ ಪುಳಿಮಾವು ಸೀಮಾವಿನ ಗಿಡವನದನು
ಹರಿಸದಿಂ ಸಿಹಿಯಪ್ಪ ಬಗೆಯಿಂ
ಗುರುವನುರೆ ಬೆರೆದಾತನನುವಿಂ
ಗುರುವೆ ತಾನಾಗುತೆ ಮೆರೆವನೆಂದೆಂದನಾಚಾರ್ಯ ೧೩

ಮೊಸರು ಪಾಲಿನ ರೂಪನಾನುತ
ಲೆಸೆಯದದು ಪುಳಿಮಾವು ತಾನುರೆ
ರಸೆಯಲಿರದದು ಮುನ್ನಿನಾಕೃತಿಯಾಂತು ಪರಿಕಿಪೊಡೆ
ಅಸಮಮೋಕ್ಷವ ಪಡೆದ ಮಾನವ
ನುಸುಳುವನೆ ಬಂಧದಲಿ ಪುನರಪಿ
ಬಿಸಗೊರಲನವನಹನು ಶಿಷ್ಯನೆ ಕೇಳು ಕೇಳೆಂದ ೧೪

ವ್ವರೆಯಲಾ ಸಾಧನ ಚತುಷ್ಟಯ
ಮಿರದದನೆ ಸಾಧಿಸುವ ಮಾನವ
ನರಿವ ಗುರುಲಕ್ಷಣ ವಿಚಾರವ ವಿನಯಭಾವದಲಿ
ಗುರುಚರಣಸೇವಾಸುಲಕ್ಷಣ
ತೆರನದುವೆ ನಾಲ್ಕಾಗಿರಲ್ಕದ
ನರಿಯಲವ ಗುರುವೆನಿಸಿ ಮೆರೆಯುವನೆಂದನಾಚಾರ್ಯ ೧೫

ಗುರುವ ಸೇವೆಯದುವೆ ಚತುರ್ವಿಧ
ಮಿರುವದುರೆಯಾಪ್ತಾಂಗ ವಿತರಣ
ಪರತರದ ಸುಸ್ಥಾನ ಸದ್ಭಾವದಲಿ ಸೇವಿಸುತ
ಲಿರುತಲವ ಪಾವನನೆನಿಸಿ ಸ
ದ್ಗುರು ಸುಭಜನಾಸಕ್ತನಾಗುತ
ಚಿರದಿ ಮೆರೆವಾ ಶಿಷ್ಯ ಗುರುವಾಗುವನು ಕೇಳೆಂದ ೧೬

ಗುರುವಿಗನುಕೂಲವನೆ ಕಲ್ಪಿಸು
ತಿರಲದಾಪ್ತಸುಲಕ್ಷಣವು ನಿಜ
ಗುರು ಚರಣ ಸೇವೆಯದು ತಾನಂದಂಗಲಕ್ಷಣವು
ಗುರುಭವನ ಸುಕ್ಷೇತ್ರರಕ್ಷಣ
ವಿರಲದುವೆ ಸುಸ್ಥಾನಲಕ್ಷಣ
ಗುರುವೆ ಸಾಕ್ಷಾದೀಶನೆಂಬುದೆ ಭಾವಲಕ್ಷಣವು ೧೭

ಇಂತೆಸೆವ ಲಕ್ಷಣಗಳಿರಲವ
ಮಂತು ಹರಗುರುಸೇವೆಯಲಿ ನಿ
ಶ್ಚಿಂತೆಯಲಿ ತಾನರಿಯಲಾ ಸಂಸ್ಕಾರಬಲದಿಂದ
ಚಿಂತಿತಾರ್ಥವನೀವ ಸದ್ಗುಣ
ವಂತ ಗುರುವಾಗುವನು ಮೋಕ್ಷದ
ಹಂತವನೆ ವಿರಚಿಸುವ ಮೋಕ್ಷಾಪೇಕ್ಷಿಗವನೆಂದ ೧೮

ಇನಿತುಸಿರುತಾ ಭಕ್ತನಿಚಯಕೆ
ಕನಿಕರದಲಾಶೀರ್ವದಿಸುತಂ
ದನಘನಂದಾ ಲಿಂಗಪೂಜಾಗೃಹವ ನೆರೆ ಸೇರಿ
ಮನವನದ ಕದಲಿಸದೆ ತಾನಂ
ದನುಭವದಮಂಟಪದಿ ರಾಜಿಸಿ
ವಿನಯಭಾವವನಾಂತು ಪದ್ಮಾಸನದಿ ಮಂಡಿಸುತೆ ೧೯

ಲಿಂಗವನು ತತ್ಕಾಲದುಪಚಾ
ರಂಗಳಿಂ ಪೂಜಿಸುತಾ ಜಂಗಮ
ಸಂಗನಾನಂದದಲಿ ನಿರುಕಿಸಿ ಚಿತ್ತದೊಲವಿನಲಿ
ಮಂಗಳಾಂಗ ಚಿದಂಗರೂಪನ
ಲಿಂಗವಾರರ ನೆಲೆಯ ಮೂಲನ
ತುಂಗಗುರುವರನಿತ್ಯಮೂರ್ತಿಯ ನುತಿಸಲನುವಾದ ೨೦

ಘನನಿವಾಸದ ಕನಕಶೈಲವ
ವನಜನೇತ್ರ ವಿದಾತೃವಿನತಿಯ
ತನಯರೆಲ್ಲರ ಯೋಗಿ ಲೋಕಾಧಾರ ನೀನಗಲಿ
ಕನಿಕರದಿ ನೀನೆನ್ನ ಕರವನೆ
ಮನೆಯು ತಾನೆಂದೆನುತೆ ನೆಲಸಿಹೆ
ಮನಸಿಜಾರಿಯೆ ಕೃಪೆಯೆ ನಿಸಗಿದು ಪೇಳು ಶಿವಲಿಂಗ ೨೧

ಬಲ್ಲತನದಿಂ ದನವ ಕಾಯುವ
ಗೊಲ್ಲರಿಹ ಹಳ್ಳಿಯೆಡೆ ಧಾತ್ರೀ
ವಲ್ಲಭನು ತಾನ್ಮೈದಿ ನೆಲಸುವ ತೆರದಿ ಶಿವದೇವ
ವಲ್ಲಭೆಯು ನೀನುಳಿದು ನಿಜಕರ
ಪಲ್ಲವದಿ ಸಂತಸದಿ ನೆಲಸಿದೆ
ಯಲ್ಲ ನನ್ನಯ ಪೂರ್ವಪುಣ್ಯವದೆಂತೊ ಶಿವಲಿಂಗ ೨೨

ಹರಿಗೆ ಕಾಣಿಸದಡಿಯ ವಾಣೀ
ಶ್ವರಗೆ ನಿಲುಕದ ಮುಡಿಯ ಮೌನೀಂ
ದ್ರರಿಗನಿಶ ತೋರದಿಹ ತೇಜೋದೀಪದಾ ಕುಡಿಯ
ಗಿರಿಶ ಭಕ್ತನ ಭಯದ ನುಡಿಗಾ
ದರದಿನೆನಗುರೆ ತೋರಲೆನ್ನಯ
ಕರಕೆ ದಯಮಾಡಿರುವೆ ನೀ ಭವಭಂಗ ಶಿವಲಿಂಗ ೨೩

ಪೊಂಗಳೊಳಗುರೆ ಪೆಂಪು ವರ ಕುಸು
ಮಂಗಳಲಿ ಬಲು ಕಂಪು ಚೂತ ಫ
ಲಂಗಳಲಿ ತಾನಿಂಪು ತಿಳಿಗೊಳ ನೀರಿನಲಿ ತಂಪು
ತುಂಗ ತಳಿರಲಿ ಕೆಂಪು ಸುಗುಣೋ
ತ್ತುಂಗ ಗುಣದಲಿ ಸೊಂಪು ಬರುವವೊ
ಲಿಂಗಿತಜ್ಞನೆ ಕರಕೆ ಬಿಜಮಾಡಿರುವೆ ಶಿವಲಿಂಗ ೨೪

ತರಣಿಯುದಯಿಪ ಗಿರಿಯಲೊಂದನು
ಬರೆಯುತಸ್ತಾಚಲದ ಪರಿಯಿಂ
ತರವಿಡಲು ಸೊನ್ನೆಗಳನನಿತಾರೆ ಜನ್ಮಗಳಲುದಿಸಿ
ಪರಮಪಾತಕಿಯೆನಿಸಿದನ ಕರ
ಸರಸಿಜದಿ ನೀ ನೆಲಸಬಹುದೇ
ಗುರುವೆ ನತಸುರತರುವೆ ನೀ ಕರುಣಾಳು ಶಿವಲಿಂಗ ೨೫

ದಯವನಾ ಸುಜ್ಞಾನಿ ಬಯಸುವ
ಭಯವನಾ ಗುರುಭಕ್ತ ಬಯಸುವ
ನಯವನಾ ಸತ್ಪುರುಷ ಬಯಸುವವೊಲು ವಿಚಾರದಲಿ
ಪಯವನಾ ದಾರಿಗನು ಬಯಸುವ
ಜಯವನಾ ರಣವೀರ ಬಯಸುವ
ಬಯಕೆಯಿರಲಿಂದೆನ್ನ ಕರಕೈತಂದೆ ಶಿವಲಿಂಗ ೨೬

ಪದುಮಿನಿಗೆ ಮಾರ್ತಾಂಡ ಸುರುಚಿರ
ದುದಧಿಗಾ ಜೈವಾತೃಕನು ನೆರೆ
ಪದಪಿನಿಂ ಪರಪುಟ್ಟಗಾ ಮಧುಮಾಸವೈತರಲು
ಮುದವೊದಗುವಾ ತೆರದಿ ಕರದರು
ಸದನಕೈತರೆ ನೀನು ಪೂರ್ವದ
ಪದವಿಯೆಂದಿಂದರಿದೆ ಮನದಲಿ ಕೇಳು ಶಿವಲಿಂಗ ೨೭

ಗೌರಿಯಾ ಗಂಗೆಯು ವಿವಾದದಿ
ಸೇರಲರಿಯದೆ ಬೆದರಿ ಗಣಪರಿ
ವಾರವಿರಲದನುಳಿದು ಮರೆಯಾಗಿರುವವೊಲು ಭರದಿ
ಆರುಮರಿಯದ ತೆರದಿ ವಾರುತೆ
ಸಾರಿದವೆ ನೀನೆನ್ನ ಕರವ ವಿ
ಚಾರವರ ಗಂಭೀರ ಕರುಣಾಪೂರ ಶಿವಲಿಂಗ ೨೮

ವಸನವಿಲ್ಲದೆ ಪೊದಿದೆ ಚರ್ಮವ
ಮಿಸುಪ ಗಂಧವದಿರದೆ ಮಸಣದ
ಭಸಿತವನೆ ಪೂಸಿರುವೆ ನೆರೆದ ಕುಟುಂಬಜನವಿರದೆ
ಮಸಣಿಗರ ಜೊತೆಗಾರನಾಗಿಹೆ
ಹಸನಿದಲ್ಲವೆ ಕಾರ್ಯ ನಿನಗಾಂ
ಪೊಸನೆಲೆಯ ರಚಿಸಿರುವೆ ಮಂಡಿಸೆ ಕೇಳು ಶಿವಲಿಂಗ ೨೯

ನುತಿಯನಿಂತೆಸಗುತ್ತ ವಿನಮಿಸು
ತತಿಶಯದಿ ಪೂರೈಸಿ ಪೂಜೆಯ
ಹಿತದಲಂದತಿಥಿಗಳವೃಂದವನುಪಚರಿಸಿ ಭರದಿ
ಮತವಿಚಾರವನೊರೆದು ತನ್ನಭಿ
ಮತವ ಮುಂಬರಿಸುತ್ತ ಗುರು ಪಶು
ಪತಿಯ ಮಂತ್ರದ ಪಠನೆಯಿಂದೆಸೆದಿರ್ದನಂದಿನಲಿ ೩೦

ಗುರುಯಶೋನ್ನತ ಕಾಂತಿ ಪಸರಿಸಿ
ವರ ನಿಜೋರುದ್ಯುತಿಯ ಮರೆಯಿಸ
ಲರಿದು ಭಾಸ್ಕರ ನಾಣ್ಚಿ ಮನದಲಿ ಮರೆಯಲಿಹೆನೆನುತೆ
ತ್ವರಿತದಿಂದಂದಪರಭಾಗದ
ಶರಧಿಗಿಳಿದಿಹನೆಂಬವೊಲು ತಾ
ನಿರದೆ ದಿನಕರ ಮುಳುಗಿದನು ವಾಸರವು ತೀರುತಿರೆ ೩೦

ನೆರೆಯುತಂದನಿತರಲಿ ರವಿಯ ಸು
ಕಿರಣ ತಾವಿರದೈದಿ ಮೆರೆವಾ
ವರಣಪುರಿಯಲಿ ಮನೆಮನೆಯಲಿರುವುದನೆ ತೋರುತಿಹ
ಸುರುಚಿಯಿಂದುರೆ ಬೆರೆದ ಸೊಡರಿನ
ಪರಿಯ ಬಣ್ಣಿಸಲಸದಳವು ಗುರು
ವರ ಯಶೋದಯಮೆಸೆಯೆ ನೋಡಲು ಕೇಳ್ದಿಗಂತದಲಿ ೩೮

ಗುರುವಿನಾಣತಿಯಿಂದ ಬಕುತರು
ನೆರೆಯುತಂದಾ ಮಠದಲಾತನ
ಚರಣಸರಸೀರುಹಕೆ ವಿನಮಿಸಿ ಬೊಮ್ಮದುರುನಿಜವ
ಅರುಹಬೇಕೆನಲಂದು ಹಿಗ್ಗುತ
ಲುರುತರದ ದಯದಿಂದ ಚರವರ
ನೊರೆಯುತಿರ್ದನಪಾರಗುಣಿ ಪರಮಾನುರಾಗದಲಿ ೩೩

ಶಿಲೆಯೊಳಗೆ ಶಿಖಿ ಸುಮದೊಳಗೆ ಕಂ
ಪೊಲಿದಿರುವ ಪಾಲಿನಲಿ ತಾಂ ಘೃತ
ಸಲಿಲದೊಳಗಾ ರುಚಿ ಮೆರೆವವೊಲು ಧರಣಿಯಲಿ ಗಂಧ
ತಿಲದಿ ತೈಲವು ಬೆರದಿರುವವೊಲು
ಮಲಹರನು ಸರ್ವರಲಿ ತಾನೇ
ನೆಲಸಿಹನು ಕೇಳಿದುವೆ ಪರಶಿವ ನಿಜದ ಬಗೆಯೆಂದ ೩೪

ಕಂಗಳೊಳಗಣ ಕಾಂತಿಯಂದದಿ
ರಂಗಿರುವವೊಲು ರತುನದಲಿ ನೆರೆ
ತುಂಗತರವಾಗಿರುವ ಗಂಟೆಯೊಳಗಣ ನಾದದೊಲು
ಅಂಗದೊಳಗಡಗುತಲಿ ಜಗವನು
ನುಂಗಿ ಗೋಚರಿಸದಲೆ ತಾನಿಹ
ನಿಂಗಿತಜ್ಞರೆ ಕೇಳಿ ನೀವು ಮಹಾಮಹಿಮನಿರುವ ೩೫

ಅಂತೆಸೆಯುವುದು ಲಿಂಗದಾ ನೆಲೆ
ಯಂತರಂಗವಲದನೆ ಭಾವಿಸೆ
ಪಿಂತೆಸಗಿದಾ ಕರ್ಮಸಂಚಯ ತೊಲಗುವ್ರದು ಜವದಿಂ
ಇಂತೊರೆದು ಗುರುವರ್ಯ ತಾಂ ತದ
ನಂತರದಿ ಯೋಗಾಲಯದಿ ನಿ
ಶ್ಚಿಂತೆಯಿಂದಿರುತಂದು ಲಿಂಗಾರಾಧನೆಯಲಿರ್ದ ೩೬

ಎಸೆಯುತಿಂತಿರಲತ್ತ ಯಮಿವರ
ನಸಮ ತೋಂಟದಸಿದ್ಧಲಿಂಗನು
ಪಸರಿಸುತೆ ಪ್ರಭುವರನ ಕಥನಾಮಹಿಮೆಗಳನೊಲಿದಿ
ವಸುಧೆಯಲಿ ಸಂಚರಿಸೆ ಜಂಗಮ
ವಿಸರವದನೊಡಗೂಡಿ ಮುದದಿಂ
ದಸಮಯೋಗಾನಂದಿಯೆಡೆಗೈತಂದ ಚರವರ್ಯ ೩೭

ಇದನರಿದು ಯೋಗಾಂಗಸದನದಿ
ವಿದಿತಮಾನಸದಿಂದ ಕಂಗಳ
ಸದಯ ತಾನುರೆ ತೆರೆದು ಜವದಿಂದೆದ್ದು ನಯಗುಣದಿ
ಒದಗಿದತಿಶಯ ಭಕ್ತಿಯಿಂದುರೆ
ಬೆದರಿ ಚದರದ ಕರಣನಿಚಯದಿ
ಹುದುಗಿ ತಾನಿದಿರಾಗಿ ನಮಿಸುತ ಸಿದ್ಧಯತಿಪದಕೆ ೩೮

ಉರಿಯದುವೆ ಕಪ್ಪುರವ ಸುಟ್ಟಂ
ತುರುತರದ ಮುಪ್ಪೊಳಲನುರಿಸಿದ
ಗೌರವನಿರುವದನರಿದು ಮೌನವನಾಸದಲೆ ಭರದೆ
ಇರದೆ ನೀನೆನ್ನಂಗತ್ರಿಪುರವ
ನುರಿಸಿ ಬಿರುದಾಂಕಿತನೆನಿಸುತಾ
ಹರನರೂಪವ ತೋರೆ ದಯಮಾಡೆನ್ನ ಮತಕೆನಲು ೩೯

ಬರುತಲಂದಾ ಸಿದ್ಧಲಿಂಗನು
ಚರವಿತಾನವನೊಂದಿ ಮೆರೆದಾ
ವರಣಪುರ ಪೀಠಾಧಿಪನ ಬಯಕೆಯ ನಿವಾರಿಸಲು
ಹರಿಸದಿಂದಾ ಮಠವನೊಳಪುಗೆ
ಎರಚಿತಾಲಂಕಾರದಿಂದಂ
ದಿರುತಸೆಯುತಾ ಸಿಂಹಪೀಠವದಿರಲು ಮಂಡಿಸುತೆ ೪೦

ಎರಗಿದರಿಗುರೆ ಹರಸೆ ಗುರುವರ
ಚರವರೇಣ್ಯನೆ ಷಟ್ಸ್ಥಲದ ಕುರು
ಪರಿಯದವ ನಾನಾದೆ ಬೋಧಿಸೆನುತ್ತ ಮುಗುಳ್ದರಗೆ
ಭೀತ ಸುವಿಚಾರದಲಿ ಸಮರಸ
ದಿರುವ ನಾನರುಪುವೆನು ಕೇಳೆಂ
ದೊರೆಯಲಂದನುವಾದ ದಯದಿಂ ಸಿದ್ಧಲಿಂಗೇಶ ೪೧

ತರುಣಿಯಿಲ್ಲದ ಚಿಂತೆ ಧರೆಯೊಳು
ತರಳೆನುದಿಸದ ಚಿಂತೆ ಮನುಜಗೆ
ಸಿರಿಯು ದೊರೆಯದ ಚಿಂತೆ ದೊರೆತರುಮನುಭವಿಸದಿರುವ
ತೆರನದಪ್ಪುವ ಚಿಂತೆ ಪುರದೊಳ
ಗಿರೆ ಸದಾ ಬಹುಚಿಂತೆ ಚಿಂತೆಯು
ಪರಿಹರಕೆ ಸರ್ವರಲಿ ವಿಘ್ನವದೊದಗುತಿಹ ಚಿಂತೆ ೪೨

ದುರಿತವಡರುತಲಂಗ ಲಿಂಗವು
ದೆರಡಿರುವ ಮಧ್ಯದಲಿ ತಾಂ ನೆಲ
ಸಿರಲು ಮುಂದಣಗತಿಗೆಡರುಬಂದಿರುವುದೆಲೆ ಗುರುವೆ
ಒರೆಯುತಾ ಷಟ್ಸ್ಥಲದ ಮಾರ್ಗವ
ಹರಿಸುವುದು ಮನದಳಲ ನೀನೆನೆ
ಹರಿಸದಿಂದದ ಪೇಳಲಂದನುವಾದ ಚರವರ್ಯ ೪೩

ಧರೆಯರಸನಿರೆ ದೇಶದಲಿ ತಾ
ನಿರಲು ದೂರದಲರಸಗಂ ಪ್ರಜೆ
ಯರಿದು ಬಕುತಿಯನಾಂತಿರುವವೊಲು ಪರಶಿವಾಶ್ರಿತನು
ಇರಲು ತಾನಾವೆಡೆಯಲಾದರು
ಮರೆಯುವವನು ಸದ್ಭಕ್ತಿಮಾರ್ಗದಿ
ಪರಿಕಿಪೊಡೆ ತಾನಿದುವೆ ಭಕ್ತಸ್ಥಲವು ಕೇಳೆಂದ ೪೪

ಧನಿಕನಲಿ ಸೇವಕನು ಸೇರುತ
ಲನುದಿನದಲಾಜ್ಞೆಯನು ನಡೆಸುವ
ಸನಿಹದಲಿಯದರೊಲು ವಿರಾಜಿಸುತಿರ್ಪ ಪರಶಿವನ
ಅನುವ ನಡೆಯಿಸುತವನ ಕರುಣವ
ವಿನಯಭಾವದಲೊಂದುವಾತನೆ
ಘನನು ಧರಣಿಯಲಿದು ಮಹೇಶಸ್ಥಲವು ಕೇಳೆಂದ ೪೫

ಸುತನು ತನ್ನಯ ಪಿತನನುಜ್ಞೆಯ
ನತಿಶಯದಿ ನಡೆಯಿಸುತೆ ಮುಂದಿನ
ಗತಿಯನುರೆ ಪೊಂದಲ್ಕೆ ಹಿತದಿಂ ನುತಿಪವೊಲು ಶಿವನ
ಮತವನನುಸರಿಸುತಲಿ ನೆರೆದು ಸು
ಮತಿಯೊಳಗೆ ಬಲು ಬೆರೆದು ಬಳಿಸಂ
ದುತಲಿರುವಪರಿ ಸುಪ್ರಸಾದಸ್ಥಲವಹುದದೆಂದ ೪೬

ಪರಮಮಿತ್ರನ ಕಜ್ಜ ಕೆಡಿರುರೆ
ಬರದತೆರದಂತೆಸಗಿ ಸರಿಸವಿ
ತೊರೆಯದಲೆ ತಾಂ ಮೆರೆಯುವವನೊಲು ಶಿವನನೆಡೆಬಿಡದೆ
ಇರುತವನ ಹರಣಗಳೆ ತನ್ನಯ
ಹರಣಗಳು ತಾವೆಂದರಿವುದುರೆ
ನಿರತವಿದುವಾ ಪ್ರಾಣಲಿಂಗಿಸ್ಥಲವು ಕೇಳೆಂದ ೪೭

ಸತಿಯು ತನ್ನಯ ಪತಿಯನೊಲಿಸ
ಲ್ಕತಿಶಯದಿ ರತಿಸುಖವ ತೋರುತ
ಹಿತಗೊಳಿಸಿ ಸಮರಸದ ಭಾವನೆಯಿಂದ ಮೆರೆವವೊಲು
ಸತತ ತನುವರ್ಪಿಸುತ ಸೇವೆಗೆ
ಮತವ ಮುಂಬರಿಸುತ್ತ ಸಮರಸ
ಗತಿಯ ಕಾಂಬುವಡದುವೆ ಶರಣಸ್ಥಲವು ಕೇಳೆಂದ ೪೮

ಉರಿದು ಕರ್ಪುರ ಬೆರೆವವೊಲು ಘನ
ತರದ ಲವಣವು ಜಲದಿ ಬೆರೆವೊಲು
ಪರಮ ನಾದ ವಿಶೇಷದಿಂ ಗಗನದಲಿ ಬೆರೆವವೊಲು
ಶರಣನಾದವ ಬೆರೆದು ಪರಮನ
ಪರಮನೇ ತಾನಹನು ನಿಜವಿದು
ಮೆರೆವುದಿಂತಾದರದಿನೈಕ್ಯಸ್ಥಲವು ನೋಡೆಂದ ೪೯

ನುಡಿಯುದೆನಿಪಾ ಜನಕ ಪೆರ್ಜಿನ
ನಡೆಯುದೆನಿಪಾ ಜನನಿ ತಾವತಿ
ಸಡಗರದಲೊಡಗೂಡಲಿಹದಲಿ ಭೋಗಸೌಖ್ಯವನು
ಪಡೆವರಾದರದಿಂದ ಪರದಲಿ
ಬಿಡದೆಯೊಂದುವರಾ ಸುಗತಿಯನು
ನಡೆನುಡಿಯುದಿಹಪರದ ಸೌಖ್ಯಕೆ ಕಾರಣವದೆಂದ ೫೦

ಇದುವಲಾ ಷಟ್ಸ್ಥಲದ ಮಾರ್ಗವ
ದಿದುವಲಾ ಮುಕ್ತ್ಯಂಗನಾಗೃಹ
ಮಿದುವಲಾ ವೈರಾಗ್ಯಮಂದಿರವಿದುವೆ ಸಂತೃಪ್ತಿ
ಇದರಲೊಂದೊಂದುಳಿದು ಮುಂದಿನ
ಸವನದೊಳಗೈಕ್ಯವನೆ ಪೊಂದುವ
ಸವಮಲಾತ್ಮ ಗಿರೀಶನಹನುರೆ ಕೇಳುಕೇಳೆಂದ ೫೧

ಇಂತೊರೆದು ಗುರುಸಿದ್ಧಲಿಂಗನ
ನಂತ ಜಂಗಮರೊಡನೆ ಪಯಣವ
ಸಂತಸದಿ ಬೆಳೆಯಿಸಲು ತಾನನುವಾಗಲತಿಶಯದ
ಚಿಂತೆಯಲಿ ಗುರುಸಿದ್ಧಮಲ್ಲನ
ನಂತಧರ ರೂಪಂಗೆರಗಿ ನಿಜ
ದಂತರಂಗದಿ ಭಜಿಸಿ ಮಂತ್ರವನೊಂದ ನೆನೆದಾತ ೫೨

ಗುರುವೆ ಮಾಯಾವರಣದೊಳಗೆ
ನ್ನಿರಿಸದೆಯೆ ಕರೆದೊಯ್ಯುಡುಚಿತವ
ದಿರುವನರುಪಲು ಗದಗದಿಪ್ಪುದೆದೆ ಮುಗಿದ ಕರಯುಗಪೆ
ಪೊರೆಯುವುದು ನೀನೆನುತೊರೆಯಲಾ
ಚರವರನು ಮುಂದಣ ವಿಚಾರವ
ನರುಪಲವ ಗಿರಿಯೊಡೆಯುಗಂಡಾ ಪಟ್ಟಗಟ್ಟುತಲಿ ೫೩

ಪೊರಮಡುತಲಾ ಸಿದ್ಧಲಿಂಗೇ
ಶ್ವರನ ಕರುಣದಿ ಬರುಬರುತ ವನ
ಗಿರಿ ತಟಾಕವ ದಾಂಟಿ ಕಾಪನಹಳ್ಳಿಗವಿಯೆಡೆಯು
ತೊರೆಯು ಬಳಿಯಿಹ ಪರ್ಣಸವನದೊ
ಳಿರಲು ಗುರುಶುಶ್ರೂಷೆಯುದನಾ
ಚರಿಸಿ ಮೆರೆದ ವಿಶಾಲಮತಿ ಗುರುಸಿದ್ಧಮಲ್ಲಾರ್ಯ ೫೪

ಅಂದು ಸಮಯುಮದೊದಗೆ ಭಕ್ತಾ
ನಂದಿ ಶಿಷ್ಯಗೆ ಸಿದ್ಧಮಲ್ಲಗ
ಮಂದಮತಿ ತಾನೊರೆದನಿಷ್ಟಪ್ರಾಣಭಾವದಲಿ
ಚಂದದಿಂದುರೆ ಬೆರೆದ ಲಿಂಗಗ
ಳಂದವನು ತಾನುಸಿರಿ ಲಿಂಗಾ
ನಂದಿ ತೆರಳಿದ ಮುಂದೆ ಚರವರ ಸಿದ್ಧಲಿಂಗೇಶ ೫೫

ದಾರಿಯಲಿ ಬರುಬರುತ ಗಿರಿಗಳ
ನೇರಿ ವಿಪಿನದ ಘೋರಪಥವನು
ಮೀರಿ ಚರಸಹಚಾರಿ ಬೋಧಾಧಾರಿ ಮುದವೇರಿ
ಸಾರುತಿರಲಾ ವೀರಶೈವರ
ಪಾರ ಸಮುದಾಯುಡಲಿ ಬಂದರು
ಧೀರಗುಣರಹಿತದಲಿ ನಾಗಸಮುದ್ರವಾಸಿಗಳು ೫೬

ನೆನೆದು ತಮ್ಮಯ ನೆರೆ ಕನಸಿನಾ
ಘನವಿಚಾರಕೆ ಮರುಗಿ ಭಾವದಿ
ಮನಸಿಜಾರಿಯರೂಪನವನೈತಂದನೆಮ್ಮೆಡೆಗೆ
ಎನುತೆ ಭಯಭಕ್ತಿಯಲಿ ಚರವರ
ನನುವನವಲೋಕಿಸುತ ಕಂಡರು
ಚಿನುಮಯಾತ್ಮನ ಸಿದ್ಧಲಿಂಗೇಶ್ವರನನತಿಶಯದಿ ೫೭

ಪರಮ ಜಂಗಮನಿವಹ ನಾಯಕ
ಗುರುವರನೆ ಜಿತಕುಸುಮಸಾಯಕ
ಪರತರಾನಂದಪ್ರದಾಯಕ ಮಣಿದಮೂಲೋಕ
ಗುರುನಿರಂಜನಮೂರ್ತಿ ರೂಪಕ
ಸುರುಚಿ ನಾಗಸಮುದ್ರ ಪಾಲಕ
ಭರದಿ ಬಾಬಾರೆನ್ನ ಪುರಕೆಂದುಮು ಜನಸ್ತೋಮ ೫೮

ವಿನಮಿಸಿದರನು ಪರಸಿ ನಾನಿಂ
ದನಘ ಗಂಗಾಧರನ ದರ್ಶಿಸು
ತನುವರಿದು ಚರಗಣಸಮೇತದಿ ಬಹೆನು ನಿಜಪುರಕೆ
ಎನುತಲಂದುಸುರುತ್ತೆ ಮಾರ್ಗವ
ನನುಸರಿಸಿ ಮುಂಬರಿಸಿ ಪಯಣವ
ಮುನಿನಿಕಾಯಾಶ್ರಮವಿರುವ ಶಿವಗಂಗೆಗೈತರುತ ೫೯

ಇರಲು ಕಪಿಲಾಶ್ರಮವದೊಂದೆ
ಲ್ಲಿರಲು ಪರತರ ಪುಣ್ಯತೀರ್ಥವು
ನಿರುಕಿಸುತ ಗಂಗಾಧರನ ದಿವ್ಯಾಲಯವ ಪುಗುತೆ
ಪರತರ ಸ್ವರ್ಣಾಂಬಿಕೆಯ ಸಂ
ದರುಶನವ ಮಾಡುತ್ತ ಮುಂದಕೆ
ಸರಿದನಂದಾ ಪರ್ವತೇಶನ ಕೂಡಿ ಗಹನದಲಿ ೬೦

ಬರುತೆ ನಾಗಸಮುದ್ರ ಮನುಜರ
ಪರಿಯರಿದು ಪೊರೆಯುತೆ ದಯಾಕರ
ನುರುತರದ ಗಿರಿಯೊಂದರಲಿ ತಾ ನೆಲಸಿ ಯೋಗದಲಿ
ಮೆರೆವ ಗಂಗೆಯನೊಂದ ಸೃಜಿಸುತೆ
ಕರೆಯುತಂದುರು ಸಿದ್ಧಗಂಗೆಯ
ಪರಮನಾಮದಿನೆಸೆದನಾ ಯತಿ ಸಿದ್ಧಲಿಂಗೇಶ ೬೧

ಸಿದ್ಧಮಲ್ಲ ಯತೀಂದ್ರಪೂಜ್ಯನು
ಸಿದ್ಧಗಂಗಾಗಿರಿಯುದೆನಿಸುತೆ
ಸಿದ್ಧಗುಣದಿಂ ಮೆರೆವ ಗಂಗಾಕ್ಷೇತ್ರದೆಡೆಯಿರುತೆ
ಸಿದ್ಧಲಿಂಗನ ದಯವ ಕೂಡುತ
ಸಿದ್ಧಿಯಿಂ ಮೆರೆಯುತಲಿ ತತ್ವದ
ಸಿದ್ಧಿಯನು ತಾ ಪಡೆದು ಸಮರಸಭಾವದಿಂದಿರ್ದ ೬೨

ಅನಿತರಲಿ ತುಮಕೂರ ವಾಸದ
ಜನನವಹ ತಾನ್ಮೆದಿ ಯತಿದ
ರ್ಶನದಿ ಸುಮನೋಭಾವಗುಣಮದನೊಂದಿ ನಿಂದಿರಲು
ವನಿತೆಯರು ಬಂದೆರಗಿ ಗುರುವಿಗೆ
ಘನಮಹಿಮೆಯಹ ಗಂಗೆಯನು ತಾ
ವನುವಿನಿಂ ಪೂಜಿಸಲು ಬಳಸುತೆ ನಿಂದರಾದಿನಲಿ ೬೩

ಮನದೊಳತಿಮುದದಿಂದ ಶರಣರ
ವನಿತೆಯರು ನಲಿದಾಡಿ ಪಾಡುತ
ಅನಿಬರತಿ ವೈಭವದಿ ಗಂಗಾಪೂಜೆಯನು ಮಾಡಿ
ಘನವರವನದ ಬೇಡಿ ಗುರುವಿಂ
ದನುನಯದಿ ವಿನಮಿಸುತೆ ತೆರಳಿದ
ಇನಿತರಲೆ ಚರನಿವಹದೊಡನಾ ಸಿದ್ಧಲಿಂಗೇಶ ೬೪

ಪೊರಮಡುತಲಾ ಪಿಂದೆ ನೋಡಿದ
ಪುರವನಾ ತುಮಕೂರ ಪುಗುತಾ
ದರದಲಂದಾಶೀರ್ವದಿಪಿ ಸರ್ವರನು ಮೋದದಲಿ
ಬರುತಲಿರಲಾ ವೀಧಿಯಲ್ಲಿ ಯತಿ
ದರುಶನಕೆ ತರುಣಿಯರ ಸಂದಣಿ
ಹರಿಸದಿಂದೈದುತೆ ವಿಲಾಸದಿ ಪೊಡಮಡುತೆ ಪೊಗಳಿ ೬೫

ಇವ ಕಣಾ ಗಂಗಾಭವಾನಿಯ
ನವತರಿಪತೆರಗೈದ ಯತಿವರ
ನಿವಕಣಾ ಸುತತ್ತೂರ ಸಿಂಹಾಸನಪತಿಯು ನೋಡೆ
ಇವನೆ ಗುರುವರ ಸಿದ್ಧಮಲ್ಲನು
ವಿವರಿಸಲು ಗುಮ್ಮಳದಪುರ ಗುರು
ಏವನೆ ನೋಡೆಂದೆನುತೆ ಕವಿದುದು ಪೌರಸಂದೋಹ ೬೬

ಬರುತಲಂದಾ ಕಗ್ಗೆರೆಯೆ ಬಳಿ
ಇರುವ ನುತ ಯತ್ಯಾಶ್ರಮವ ನೆರೆ
ದಿರುತಲಲ್ಲಿಯ ಪರಿಯರಿದು ವಿಶ್ರಾಂತಿಯಿಂದಿರಲು
ಹರಿಸದಿಂ ಯೋಚಿಸುತೆ ನೆಲಸ
ಲ್ಕಿರುತರದ ಗುಣದಿಂದ ಬಳಿಸಂ
ದಿರುತ ತಾನೊಂದೊರೆದ ಗುರುವರ ಸಿದ್ಧಮಲ್ಲಾರ್ಯ ೬೭

ಗುರುವೆ ನಿನ್ನಯ ಕರುಣದಿಂದೀ
ಧರಣಿಯಲಿ ನಾಂ ಧನ್ಯನಾಗಿಹ
ಪರಿಯ ಪೊಗಳಲ್ಕರಿಯೆನದನುರುಯೋಗಿ ಯಾತ್ರೆಯಲಿ
ಚರಿಸುವೆನ್ನಭಿಮತವ ನೀ ಮುಂ
ಬರಿಸೆನುತಲಾಶಿಷವನೊಂದುತ
ಹರಹರಾ ಶಿವನೆನುತ ಗುರುವರನಂದೆ ಪೊರಮಟ್ಟ ೬೮

ಶ್ರೀಗಜಮುಖಾಂಬಿಕೆ ವಿಶಾರದೆ
ರಾಗರಹಿತೆಯೆ ನೀತಿವಿಧೆ ಶಿವ
ಯೋಗಿಕೃತನುತಿಪಾತ್ರೆ ಮೋಕ್ಷಾಧಾರೆ ಶುಭಗಾತ್ರೆ
ನಾಗಭೂಷಣವನಿತೆಯೇ ನೀ
ನಾಗಳುಂ ನತಜನರ ಸಲಹುತೆ
ಬೇಗದಿಂ ಕುಡುಶುಭವ ಚಾಮುಂಡಾಂಬೆ ಜಗದಂಬೆ ೬೯

# ಪರ್ವತೇಂದ್ರ ಶಿವಾಚಾರ್ಯ ಕಥನಂ

ಧರೆಯು ಸರಂಗಿ ನಡೆನುಡಿಗಳೊಂ
ದಿರಲಡುವ ಮತವೆಂಬುದರುಪುತ
ಗಿರಿಯೊಡೆಯ ಸುತ್ತೂರ ಸಿಂಹಾಸನದಿ ರಾಜಿಸಿದ

ಶ್ರೀಮದಭವ ಭವಾಬ್ಧಿಬಾಡಬ
ಸೋಮಕಾಸುರಹರ ಏಶಿಖ ಭೃಗು
ರಾಮ ವರದಮಹೇಶ ಮಂಗಳನಾಮ ನುತಿಧಾಮ
ಹೈಮವತ್ಯಾಲಿಂಗಿತಾಂಗಾ
ರಾಮದಹನ ವಿನೋದಸಮರ ಸು
ನಾಮ ಕುಡು ನೀ ಸೋಮನಾಥೇಶ್ವರನೆ ಶುಭತತಿಯು ೧

ಇರದೆ ಕೇಳಿಲೆ ಸಿದ್ಧಲಿಂಗನೆ
ವಿರತಿತೋಂಟದ ಸಿದ್ಧಲಿಂಗನ
ವರಜನಿತ ಜಂಗಮ ಪದಾರ್ಚಕ ಭರಿತ ಸಚ್ಚರಿತ
ಪರಮಗುರು ಶಿವರಾತ್ರಿದೇವನ
ವರದಿ ಪರುಸವೈದ ಪಡೆದಾ
ಗಿರಿಯೊಡೆಯನುರುಕಥೆಯೊರೆವೆ ನಾನೆಂಡ ಗುರುನಾಥ ೨

ಪರಮದೇಶಿಕ ಸಿದ್ಧಮಲ್ಲನು
ಗಿರಿಯೊಡೆಯನಿಗೆ ಪಟ್ಟಕಟ್ಟುತ
ತೆರಳಲಾ ಯತಿ ಸಿದ್ಧಲಿಂಗೇಶ್ವರನನೊಡಗೂಡಿ
ಹರಿಸದಿಂದಾ ಪರ್ವತೇಶನು
ಗುರುವಿನುರುತರದಾ ಸಮಾಧಿಯು
ನಿರದೆ ಸಂಧ್ಯಾಪೂಜೆಯಲಿ ತಾಂ ಪಡೆದ ಪರುಸಗಳ ೩

ಅನಿತರಲಿ ಖಗನಿವಹ ತಮ್ಮಯ
ಮನೆಯನೊಂದಿದಂದೆ ಪೊರಗಣ
ದನಗಳೈತರುತಾಗ ಮತ್ತಾ ಗೊತ್ತಿನೆಡೆ ನಿಲಲು
ಮನುಜವಿತತಿಯುದೆಲ್ಲ ಕಾರ್ಯಗ
ಳನಿತ ಪೂರಯಿಸುತಲಿ ಬರುತಿರ
ಲಿನನು ತಾನಂದಿಳಿದನಸ್ತಾಚಲವನತಿಭರದಿ ೪

ಭರದೊಳಾ ದುಷ್ಕರ್ಮದಿಂದಲಿ
ಬರುವ ಪಾಪವದರಿವತಾನಾ
ಪರಿಸಿ ಕಳೆಗುಂದಿಸುವವೊಲು ನೆರದಂಧಕಾರಚಯು
ಮರೆಯಿಸಿರಲಾ ಬೆಳಕ ದಿನಮಣಿ
ಕಿರಣರೂಪದಿ ಗುರುಸುಮಹಿಮೆಯು
ನಿರುಕಿಸುವನೆನಲಂದೆಯಾ ಮನೆಮನೆಯು ಸೊಡರೆಸೆಯೆ ೫

ಗುರುವಿನ ಯಶಶ್ಚಂದ್ರ ಕಿರಣವ
ದಿರದೆ ಪಸರಿಸಿರಲ್ಕೆ ತಾನಾ
ದರದಿ ಪೂರ್ಣಶಶಾಂಕನೀಕ್ಷಿಸಲ್ಕೈದಿರುವನೆನಲು
ಭರಿತಕಲೆಯುದ ಪೊಂದಿ ಪೂರ್ವದ
ಗಿರಿಯಕೋಡಿನ ತುದಿಯಲೆಸೆದುದು
ಪರತರದ ಶಶಿಬಿಂಬ ನಯನಾಲಂಬ ಸೊಗಸಿಂದ ೬

ಧರಸುವೈದರೆ ಮಹಿಮೆಯಿಂದಾ
ವರಣಪುರ ಗುರುನಾಥನೊರ್ವನು
ಚರಣಕೆರಗಿದ ನರನ ಕುಷ್ಠವ ಹರಿಸಿತೀರ್ಥದಲಿ
ಒರೆದು ಗುರುಭಜನೆಯನು ಮಂತ್ರವ
ನಿರದೆ ಜಪಿಸುವುದೆನುತ ಬೋಧಿಸಿ
ಪರಮಗುರುವರ ಮೆರೆದನಂದಾ ಯೋಗಭವನದಲಿ ೭

ಗಾಳುವಿನುರುಮಹಿಮೆಯನು ತಿಳುಪಲು
ತರಣಿಕಿರಣಗಳಾಗ ಪಿಂದಕೆ
ತೆರಳಿರುವುವೆನೆ ಭವನ ಭವನದ ಸೊಡರು ನಂದಿರಲು
ನೆರೆದ ಜಾಗರವಳಿದು ನಿದ್ದೆಯು
ಬೆರೆದು ಮಾನವನಿವಹಮಿರಲಂ
ದಿರದೆ ಕುಕ್ಕುಟಕೂಗಿತಂದಾ ಜಾವವೆಂಟರಲಿ ೮

ಅಂದು ಧನುವಿನಲಿರಲು ಭಾಸ್ಕರ
ಚಂದದಿಂ ಪರಶಿವನಪೂಜಾ
ನಂದಿ ತಾಂ ಗಿರಿಯೊಡೆಯನಿರಲಾ ಕುಮುದಬಾಂಧವನು
ಇಂದವನ ಮಹಿಮೆಯನು ಮುದದಿಂ
ನಂದಿವಾಹಂಗರುಹುವೆನು ನಾ
ನೆಂದು ಪೋದನೆನಲ್ಕೆ ತಾನಸ್ತಾಚಲವ ಸೇರ್ದ ೯

ಉಪಮುಲಗ್ನವೆ ಧನುವದಾಗಿರ
ಲೊದಗಿರಲು ಶಶಧರನ ಹೋರೆಯು
ಪದುಳದಿಂ ದ್ರೇಕ್ಕಾಣ ಗುರುವಿನದಾಗಿ ರಾಜಿಸಿರೆ
ಒದಗೆ ಗುರುವ ನವಾಂಶಮುಂಡೇ
ಸದಮಲದಲಾ ದ್ವಾದಶಾಂಶವೆ
ಯುದುಮವನದಾಗಿರಲು ಭೃಗು ತ್ರಿಂಶಾಂಶದಿಂದೆಸೆಯೆ ೧೮

ನೆರೆದ ಶುಭಷಡ್ವರ್ಗದೊಳಗಾ
ಗುರುವರನದರ್ಶನಕೆ ರವಿ ತಾ
ನಿರದೆ ಮಾಸಾಂತದಲಿ ಬರುತಿಹನೆನೆ ವಿಕಾಸದಲಿ
ಪರಿಲಸಿತ ಪೂರ್ವದಿ ವಿಭಾಕರ
ಕಿರಣಗಳ ಪಸರಿಸುತಲುದಯಿಸಿ
ಮೆರೆದನಾ ಗಗನದಲಿ ತೇಜೋರಾಶಿಯಂಬರದಿ ೧೧

ಸೇರಿದವು ಕಲಹಂಸಗಳು ಕಾ
ಸಾರತೀರವನಬ್ಜ ವಿಕಸಿಸೆ
ಪಾರಿದವು ಭೃಂಗಾಳಿಗಳು ನಲವೇರಿ ಬನಬನದಿ
ಚೀರುತಲಿ ಖಗನಿವಹ ಮುದದೊಳು
ಹಾರಿದವು ದೆಸೆದೆಸೆಗೆ ತಾವಾ
ಹಾರವರಸಲು ಕಿಲಕಿಲಾರವದಿಂದ ಮುಂಕೊಂಡು ೧೨

ಅನಿತರಲಿ ಗುರುಮಹಿಮೆಯನು ತಾ
ವನುನಯದಲುರೆ ಕೇಳ್ದು ಮಾನವ
ರನುಮತದೆ ಕೇಳಂದೆ ಸೇರ್ದರು ಮಠದ ಬಾಹ್ಯದಲಿ
ಚಿನುಮಯಾತ್ಮಕ ರೂಪ ಬರುತಂ
ದನಿಬರಿಂಗಾಶೀರ್ವದಿಸಲವ
ರನುವಿನಿಂ ಕುಳ್ಳಿರ್ದ ರಾದರದಿಂ ಸಭಾಂತರದಿ ೧೩

ಬರುವ ರೋಗ ಪರಂಪರೆಯ ಬೇ
ಸರವನನುಭವಿಸುತಿಹ ಭಕ್ತರ
ಕರೆದವರ ಮೈದಡವಿ ಕರುಣದಿ ಕಾಯಲವರುಗಳ
ಹರಿಸದಿಂದವರೆದ್ದು ಗುರುವಿನ
ಸರಿಸದೊಳಗುರೆ ನಿಂದು ತಮ್ಮಯ
ಕರಯುಗವ ಮುಗಿದಂದು ಬಿನ್ನವಿಸಿದರು ಭಯದಿಂದ ೧೪

ಖಲರು ನಾವಾಗಿಹೆವು ಮತಿಚಂ
ಚಲರು ನಾವಾಗಿಹೆವು ಗತಿಸ
ತ್ಫಲರಹಿತರಾಗಿಹೆವು ಗುರುಸೇವೆಯಲಿ ಮನವಿಡದೆ
ಫಲಿತದುಷ್ಕರ್ಮಗಳು ನಾವೆಂ
ದೊಲುಮೆಯಲಿ ರಾಜಿಪ ವಿಚಾರದ
ನೆಲೆಯನದ ನೀನಿಂದು ಬೋಧಿಸೆನಲ್ಕೆ ಗುರು ನುಡಿದ ೧೫

ಅರಿವು ಕಣ್ಣುಗಳೆರಡು ಬೆರೆಯಲು
ನಿರತ ಸದ್ಗತಿಮಂದಿರಕೆ ತಾ
ನರಸೆನಿಸಿ ಮೆರೆಯುವನು ಹರಕರುಣೋದಯವ ಬೆರಸಿ
ಒರೆಯುವೆನು ನಾನದರ ಮರ್ಮವ
ಹರಿಸದಾ ಮನದಿಂದ ಲಾಲಿಸ
ಲರಿವಿನಿಂ ಪರಮನನು ಕಾಣುವಿರೆನುತಲಂದೊರೆದ ೧೬

ಪಲಬಗೆಯ ಘಟನಿಕರ ಮಣ್ಣಿನ
ಬಲದಲಾದರು ಅಯದ ಸಮಯದಿ
ನಿಲದೆ ಮುನ್ನಿನ ರೂಪವಾನುವ ತೆರದೆ ನಡೆನುಡಿಯು
ಕಲೆಯೆ ಜೀವನು ಶಿವನ ಬೆರೆಯುತ
ಲೊಲವಿನಲಿ ಶಿವನಾಗುವನು ಸಲೆ
ನೆಲೆಯನಿದ ನೀವರಿದೊಡಾ ಶಿವನಹಿರಿ ಕೇಳೆಂದ ೧೭

ಕನಕದಿಂ ಬಹು ವಿಧದ ತೊಡವುಗ
ಳೆನಿತಹವೊ ತಾವನಿತು ಲಯದಲಿ
ಕನಕವೇ ತಾವಪ್ಪ ತೆರದಿಂ ನಡೆನುಡಿಗಳೆರಡ
ಅನುವರಿಯುತೊಡಗೂಡಿಸಲು ಜೀ
ವನು ಬೆರೆಯುವನು ಶಿವನಲಂದಾ
ಘನಮತವಿದದರಿಂದ ಕಲಿಯಿರಿ ನಡೆಯ ಮರ್ಮವನು ೧೮

ಧಾರಿಣಿಯಲಾ ಪ್ರಕೃತಿಮಾನವ
ಹಾರುವನು ನಡೆನುಡಿಯೆ ವಿವರಿಸೆ
ಸಾರಲರಿಯದೆ ನಡೆನುಡಿಯು ಮಲದಿಂದ ಸತ್ತಿರುತ
ಹಾರುವನೆ ತಾನಾಗಿ ನಿಜದಿಂ
ಸೇರುವನು ದುರ್ಗತಿಯನದರಿಂ
ಮಾರದೆಯೆ ಜೀವವನು ಮುಕ್ತಿಯ ಪಡೆವುದೊಲಿದೆಂದ ೧೯

ಸುರತರುವು ಮರವೆನಿಸುವುದೆ ನಿ
ರ್ಜರರ ಧೇನುವು ತುರುವೆನಿಸುವುದೆ
ಪರುಷವದು ಪಾಷಾಣವೆನಿಪುದೆ ನೋಡಲದರಂತೆ
ತರದಿ ನಡೆನುಡಿಯೆರಕವುಳ್ಳವ
ಧರೆಯ ಮಾನವನಲ್ಲ ಪರಿಕಿಸೆ
ಪರಮ ಶಿವನವನೆನುತಲೊರೆದನು ಭಕ್ತಿಮಾರ್ಗವನು ೨೦

ಏರಕವಾಗಲು ನಡೆನುಡಿಯು ತಾ
ನುರತರದ ಕಬ್ಬಿಣವ ಮಣ್ಣುರೆ
ಬೆರೆದು ತಿಂದತಿಭರದಿ ತಾನುಳಿವಂತೆ ದಧಿ ಪಾಲ
ವೆರಸುತದ ತಿಂದುಳಿವ ತೆರದಿಂ
ದಿರದೆಯಂಗವ ಲಿಂಗ ನುಂಗುತೆ
ಮೆರೆವ ಲಿಂಗವದುಳಿವುದಂತಾ ಜೀವದಳಿವೆಂದ ೨೧

ನುಂಗಿರಲು ಕಪ್ಪೆಯದು ಭುಜಗನ
ಸಂಗಡಲೆ ತಾನೇರೆ ಬಿಸಮುದು
ತುಂಗಲೋಕತ್ರಯವೆ ಮುದುರಿತು ಮೊಬ್ಬಿನಾಟದಲಿ
ಭಂಗಿತರು ತಾವಾಗಿ ನರಕದ
ಹಂಗಿನಲಿ ಸಾಯುವರು ನಡೆನುಡಿ
ಇಂಗಿತವನರಿಯದೆಯೆ ಬಡನುಡಿಯಿಂದಲಳಲುವರು ೨೨

ಲಿಂಗದಲಿ ಮನವನಿರಿಸದೆ ತ
ಲ್ಲಿಂಗದಲಿ ಬೆರೆಯದೆಯೆ ಭವಭವಿ
ಸಂಗರಹಿತತೆಯಿಂದಿರದೆ ದುರಿತಕ್ಕೆ ಹೇಸಿರದೆ
ಮಂಗನಂದದಿ ಕುಣಿಯುವಾ ನರ
ಸಂಗದಲಿ ನಡೆನುಡಿಯು ವಿರಾರುತ
ಭಂಗಪಡುವರು ಮರುಳರಿದ ಕೇಳೆಂದ ಗುರುನಾಥ ೨೩

ಪೆಣ್ಣಸಂಗದಿನೆಂಜಲಾದನು
ಮಣ್ಣಸಂಗದಿನೆಂಜಲಪ್ಪನು
ಕಣ್ಣಗಾಣದೆ ಹೊನ್ನಸಂಗದಿನೆಂಜಲಾದ ಕಣ
ಬಣ್ಣಗೆಟ್ಟಿಹ ಹೊಲಸಿನವ ಮು
ಕ್ಕಣ್ಣನದನಕೆ ಸಲ್ಲನವನಿ
ಕ್ಕಣ್ಣನವನಹ ಸಾವನಹನಿಳೆಯೊಳಗೆ ಕೇಳೆಂದ ೨೪

ಪಿರಿಯರಿವು ತಾನಿರದೆಯೋ ನೆರೆ
ಕಿರಿಯರಿವನದನುಂಗಿ ತಾನೇ
ಭರದಲೇಕಾಕಾರವಾಗುವ ತೆರದಲೀ ಜಗದಿ
ಕಿರುಗೊಳದ ಜಲವಂಬುಧಿಯು ತಾ
ನಿರದೆ ಸೇರುತಖಂಡರೂಪದಿ
ಮೆರೆವವೊಲು ಲಿಂಗಾಂಗ ಸಮರಸಭಾವ ಕೇಳೆಂದ ೨೫

ಪರಮ ಘೃತ ಘೃತದಲಿ ಬೆರೆವ ತೆರ
ನಿರದೆ ಪಾಲಲಿ ಪಾಲ್ಬೆರೆದ ತೆರ
ಭರವಲಾ ಜಲಜಲದಿ ತೈಲದಿ ತೈಲಬೆರೆವವೊಲು
ಇರದೆ ನಡೆನುಡಿಯೊಂದುಗೂಡಿದ
ಶರಣನೈಕ್ಯಸ್ಥಲವ ಸೇರುವ
ನೊತೆದನಿದು ಲಿಂಗಾಂಗಸಮರಸ ಭಾವಕೇಳೆಂದ ೨೬

ತರುಣಿಯರ ಕೂಟದಲಿ ಸುಖದಿಂ
ದಿರುವ ಬಯಕೆಯು ಬಯಸಿ ಮುಂದಿನ
ಪರಿಯರಿಯದೆಯೆ ಕೆಡುವನದರಿಂ ವರ್ಗನಿಚಯವದ
ಭರದಿ ಮುಂದರಿಸದೆಯೆ ನಡೆನುಡಿ
ಯೆರಡನೊಂದಾಗಿಸುವವಗೆ ಫಲ
ದೊರೆವುದದು ಜಯಿಸುವನು ಮರಣವನಾತ ಕೇಳೆಂದ ೨೭

ಪರಮವೇದವನೋದಿದವರಾ
ದರದಿ ತೀರ್ಥದಿ ಮುಳುಗಿವವರಾ
ಸೆರೆಯ ನಡೆನುಡಿಯಿಲ್ಲದೆಯೆ ಕೆಟ್ಟವರು ಪರಮನಲಿ
ಬೆರೆಯದೆಯೆ ಪಿಂದಿರುಗಿದರು ನುಡಿ
ಯೆರಕವಾಗದಿರಲ್ಕೆ ನಡೆಯಲಿ
ಶರಣಗಾ ನಡೆನುಡಿಯ ಬೆರಕೆಯೆ ಮುಕ್ತಿಪಥವೆಂದ ೨೮

ವರಪತಿವ್ರತೆ ಪತಿಯ ಮರೆಯಲಿ
ದೊರೆತು ಮರೆಯೊಳಗಾತನಾ ಪ್ರಜೆ
ಇರುವ ತೆರದಿಂ ಶಿಷ್ಯನಾ ನಡೆನುಡಿಯನೊಡಗೂಡಿ
ಗುರುವಿನೊಡನಿರೆ ಗತಿಯ ತಾನನು
ಸರಿಸುವನು ಮುಂದವನೆ ಪರಮನ
ಬೆರೆದು ತಾನೆ ನಿತ್ಯಮುಕ್ತನು ಶಿಷ್ಯ ಕೇಳೆಂದ ೨೯

ಸುರುಚಿರದ ಮೌಕ್ತಿಕವೆ ಸಲಿಲವ
ಬೆರೆದು ನೀರಾದಪುದೆ ಘೃತತಾ
ಮರಳಿ ನೆರೆ ನವನೀತಮಪ್ಪುದೆ ತೈಲ ತಿಲವಹುದೆ
ನರನು ನಡೆನುಡಿ ಕೂಡಿರಲು ಪುರ
ಹರನೆ ತಾನಾಗುವನದಲ್ಲದೆ
ನರನಹನೆ ಪುಸಿಯಲ್ಲವಿದು ಕೇಳೆಂದ ಗುರುನಾಥ ೩೦

ಪರಮನೊಹಿಲನೆಂಬ ಭಕ್ತನು
ಶರಣರೊಡನಾಡುತಲಿ ಭವಭವ
ದರಿವರಿದು ಲಿಂಗಾಂಗ ಸಮರಸಭಾವ ಮರ್ಮವಹ
ಕಿರಿಯವದು ತಾನರಿವನೊಂದುವ
ತೆರದಿ ಬಾಳುತೆ ದಾಳಿಯಿಟ್ಟನು
ಹರಪುರಕೆ ಕೇಳೆಂದೊರೆದನಾಚಾರ್ಯನೊಲವಿನಲಿ ೩೧

ಪರಮಮುನಿ ದೂರ್ವಾಸ ತಾನೈ
ತರುತ ಶಿವನಿಂ ಪಡೆದ ಮಾಲೆಯು
ನಿರದೆ ಸುರಪತಿಗೀಯಲವ ನಡೆನುಡಿಯ ಚಿಂತಿಸದೆ
ಕರಿಯ ಶಿರದೊಳಗಿಡಲು ಕರಿ ನಿಜ
ಚರಣದಿಂದೊಸಗಲ್ಕೆಯಾ ಯತಿ
ವರನ ಶಾಪದಿ ನೊಂದ ಮನದಳಲಿಂದ ಕೇಳೆಂದ ೩೨

ಪರಮಮುನಿ ಸಾನಂದ ನಡೆನುಡಿ
ಯೆರಡೆರಕವಾಗಿರುತ ತಾನಂ
ದಿರದೆ ತಾವರೆಗೆಳೆಯನಣುಗನ ಪೊಳಲನದಸೇರ್ದು
ನರಕಿಗಳಿಗದ ಬೋಧಿಸುತ ಸಲೆ
ಭರದಿ ಮಂತ್ರದ ಮಹಿಮೆಯಲಿ ಪುರ
ಹರನ ನಗರಿಯ ಸೇರಿಸಿದನವ ಕೇಳಿ ನೀವೆಂದ ೩೩

ವರಮೃಕಂಡು ಕುಮಾರ ಬಾಲ್ಯದ
ವರುಷ ಹದಿನಾರರಲಿ ನಡೆನುಡಿ
ಯರಕವುಳ್ಳವನಾಗಿರುತ ತಾನದರ ಬಲದಿಂದ
ಮರಣವನು ಸಲೆ ಜಯಿಸುತುಳಿದಿಹ
ನೊರೆವೆನಿದ ನೀವಾಪರಿಯನಾ
ಚರಿಸಿದರೆ ಮೃತಿಭೀತಿ ನಿಮಗಿಲ್ಲೆಂದನಾಚಾರ್ಯ ೩೪

ಇಂತುಸಿರೆ ಯುಮಿವರ್ಯ ಪುರಜನ
ರಂತರಂಗದಿ ನುತಿಸಿ ಗುರುವನ
ನಂತಧಳನಂ ಕಂಡೆವಿದಿರಲೆನುತ್ತ ವಂದಿಸುತ
ಚಿಂತಿತಾರ್ಥವನೀಯುಬೇಕೆನ
ಲಂತು ತಾ ನಲವಿಂದ ಸಲಹುತ
ಸಂತವಿಸಿದನು ಭಕ್ತವಿಸರವ ಪರ್ವತಾಚಾರ್ಯ ೩೫

ತಿರುಕನೊರುವನು ಬೀದಿಯಲಿ ಸಂ
ದಿರುತೆ ತಾನಲೆದಾಡುತಂದುರು
ಶರಣನಿಂ ಗುರುಮಹಿಮೆಯನು ಲಾಲಿಸುತೆ ನಲವಿಂದ
ಬರುತಲೀತನ ಚರಣಕಭಿನಮಿ
ಸಿರಲು ಯತಿಯಾಶೀರ್ವದಿಸಲವ
ಧರಿಸುತಂದದ ಭಾಗ್ಯದಿಂದೆಸೆದಿರ್ದನವನಿಯಲಿ ೩೬

ಧರೆಗನಾವೃಷ್ಟಿಯದುಪೊದಗೆ
ಲ್ಕುರುತರದ ಬರವಂದೆ ಪಸರಿಸು
ತಿರದೆ ಗೋಳಾಡಿಸುತಲಿಂದಿಹುದೆನಲು ಮರ್ತ್ಯಜೆಯು
ಮರುಗಿ ಮಾನಸದಲಿ ವಿಚಾರ ವಿ
ತರಣ ವಾಕ್ಸ್ಪರ್ಶದಲಿ ಕಾಯು
ತ್ತಿರಿವನರುಪುತ ಸುರಿಯಿಸಿದನಾ ಗುರುವು ಬಲುಮಳೆಯು ೩೭

ನಿಲದೆ ರೋಗವದಾವರಿಸಿ ಬಲು
ಸಲುಗೆಯಿಂದೆಲ್ಲರನು ಕೊಲುತಿರ
ಲಲಸಿಕೆಯನುಳಿದವರು ಗುರುವೆಡೆಗೈದಿ ನಿಂದಿರಲು
ವಿಲಸಿತದ ಪಾದೋದಕವ ತಾ
ನೊಲುಮೆಯಿಂದೆ ರಚಿಸಲು ಜನಸಂ
ಕುಲವು ಗುಣಪಡುತಂದು ಬಂದಿರುಗಿದುದು ನುತಿಯಿಂದೆ ೩೮

ಪರತರಾಶ್ರಯುಮಿದಿರ್ದೊಡಂದಾ
ದರದಿ ಪೊರೆಯುವರಿರ್ದೊಡಂ ಬಂ
ಧುರದ ಪೊಳಲಿನಲಿರ್ದೊಡಂ ಪೂರ್ವಾರ್ಜಿತದ ಫಲದಿ
ಕೊರಗಿ ಕರಗುತಲಿರುವನೊರ್ವನ
ಶಿರದೊಳಗೆ ಕರವಿಡುತ ಕರುಣದೆ
ಹರಿಸದಿಂ ಯುತನೆನಿಸಿ ಮೆರೆದನು ಪರ್ವತಾಚಾರ್ಯ ೩೯

ಇಂತಿರುವ ಸಮಯದೊಳು ನೆಲಸಿರು
ವಂತರಂಗದ ಮದಗಳೆಂಟರ
ಲಂತವನ ಕಳೆದೊಲುವನಾಂತುತ್ತರದ ಕಡೆಯಿಂದೆ
ಕಂತುಹರ ಸನ್ಮಂತ್ರದಿಂ ನಿ
ಶ್ಚಿಂತೆಯಿಂದಾ ಭ್ರಮೆಯನೊರಸುತ
ನಂತ ಪುರಗಳ ಪುಗುತಲಾ ಬಂಡಾರಿ ಬಸವಾಖ್ಯ ೪೦

ನಡೆನುಡಿಯನೊಡಗೂಡಿದರ ನೀ
ಪೊಡವಿಯೊಳಗರಸುತೆ ವಿನೋದದ
ಲೊಡೆಯನವ ದೊರಕಿದರೆ ಸೇವೆಯ ಮಾಳ್ಪ ನಾನೆನುತೆ
ಬಿಡದೆ ತಾನೈತರುತೆ ಸುತ್ತೂ
ರೊಡೆಯನಿರಲವನೆಡೆಬಿಡದೆ ಗುರು
ವಡಿಯ ಪೂಜಿಸಿ ನಮಿಸಿ ತಾನಿಂತೆಂದನಾತನಲಿ ೪೧

ಗುರುವೆ ನಡೆನುಡಿಯೆರಕವುಳ್ಳರ
ನರಸುತಲಿ ನಾ ಬಂದೆ ಮರ್ತ್ಯರ
ಲರಿಯ ದೊರೆಯರು ನಿನ್ನ ಮಹಿಮೆಯ ಕೇಳುತೈತಂದೆ
ಪರಿಣತಾಂತಃಕರಣಯೋ ಯಮಿ
ವರನೆ ಸದ್ಬೋಧೆಯನರುಪಿ ಪೊರೆ
ಪರಮ ನೀನೆಂದೆನಲು ಕರುಣಾರಸದಿ ನಿರುಕಿಸುತೆ ೪೨

ನಡೆನುಡಿಗಳೊಂದಪ್ಪ ಕುರುಪಿಂ
ದಡಗಿರುವುದೆಲೆ ಭಕ್ತ ನಿನ್ನಾ
ನೆಡೆಬಿಡದೆ ಕರವಿಡಿದು ಪಾಲಿಸುತಿಹೆ ವಿಚಾರದಲಿ
ಮೃಡನ ಕರುಣವದಿಹುದು ನಿನಗೀ
ಪೊಡವಿಯಲಿ ಬಾರೆನುತಲುರೆ ಮೃ
ದಡವಿ ಸರಿಸಕೆ ಕರೆದ ಬೋಧಿಸಲೆಂದು ಸಾದರದಿ ೪೩

ದಿನಮದೊಂದೊದಗಿರಲು ತಾನಂ
ದನುಸರಿಸಿ ಶುಭವರ್ಗವನು ನೆರೆ
ದನಘನಾ ಬಂಡಾರಿ ಬಸವಾರ್ಯನನು ಹರಸುತಲಿ
ಘನತರದ ಪಟ್ಟಾಭಿಷೇಕವ
ನನುಗೊಳಿಸುತಾತಂಗೆ ಗಿರಿಯೊಡ
ಯನು ವಿಲಾಸದಿ ಕೊಡಗಿನಾ ಮಲೆಯೆಡೆಗೆ ನಡೆತಂದ ೪೪

ಗಿರಿಯಮಧ್ಯದಲಿರುವ ಗವಿಯೊಳ
ಗಿರುತ ಶಿವಯೋಗದಲಿ ತಾನಂ
ದುರ ಮರೆದು ಲಿಂಗಾಂಗಸಮರಸಭಾವದಲಿ ಬೆರೆದು
ಪರಮನೇ ತಾನಾಗಿ ಭರದೊಳ
ಗೆರಡಳಿದು ತೇಜೋವಿಲಾಸವ
ಲಿರಲು ಲೋಕವೆ ಪೊಗಳಿತು ಯತಿವರನ ಭಕ್ತಿಯಲಿ ೪೫

ಶ್ರೀರಮಾಸುಖದಾತೆ ಪರಮೌಂ
ಕಾರರೂಪೆ ಗಜಾನನೋತ್ಸುಕೆ
ಚಾರುತರೆ ಸದ್ಭಕ್ತ ಕಲ್ಪದ್ರುಮೆ ವಿಶಾಲಾಕ್ಷಿ
ಸಾರತರ ದಾಡಿಮರದನೆ ವರ
ವಾರಿರುಹ ಸಮವದನೆ ವಿಮಲಾ
ಕಾರ ನೀ ಕುಡುಶುಭವ ಚಾಮುಂಡಾಂಬಿಕಾದೇವಿ ೪೬

# ಬಂಡಾರಿ ಬಸವಪ್ಪವೊಡೆಯ ಕಥನಂ

ಮಾರಹರದಯದಿಂದಲಾ ಸು
ತ್ತೂರ ಸಿಂಹಾಸನದಲುರೆ ಬಂ
ಡಾರಿ ಬಸವಪ್ಪೊಡೆಯನೆಸೆದನಪಾರ ಮಹಿಮೆಯಲಿ

ಶ್ರೀ ಕನಕಗಿರಿವಾಸ ಯಮಿವರ
ಲೋಕಸನ್ನುತ ವರದ ಪರಮ ಪಿ
ನಾಕಧರ ವೇದಾಗಮೋಪನಿಷತ್ಪುರಾಣನುತ
ಏಕದಂತಕುಮಾರತಾತನೆ
ನಾಕಪತಿ ಮುಖವಿನತಪದ ಜಗ
ದೇಕವಲ್ಲಭ ಶುಭವ ಕುಡು ನೀ ಸೋಮನಾಥೇಶ ೧

ಕೇಳು ನೀನೆಲೆ ಸಿದ್ಧಲಿಂಗನೆ
ಮೇಳವಿಸುತಲಿ ಮೆರೆವ ಸುತ್ತೂ
ರಾಳಿಕೆಯ ಬಂಡಾರಿ ಬಸವಪ್ಪೊಡೆಯನುರುತರದ
ಏಳಿಗೆಯ ಸತ್ಕಥೆಯನಿಂದಾ
ಭಾಳಲೋಚನ ಕೃಪೆಯನಾನುತ
ಪೇಳುವೆನು ನಾನೆಂದನಾ ಶಿವರಾತ್ರಿ ಗುರುನಾಥ ೨

ಗಿರಿಯೊಡೆಯನಿರದತ್ತ ಸರಿಯಲು
ಹರಿಸದಲಿ ಬಂಡಾರಿ ಬಸವಾ
ರ್ಯರು ನಿಜಾದಿಯುಗುರುವಿನಾ ಗದ್ದುಗೆಯ ಪೂಜಿಸುತೆ
ಮೆರೆವ ಯಮಿವರ ರೇಣುಕೇಶನ
ಕರುಣದಿಂದೈತಂದಿರುವನಾ
ಸರೆಯನೊಂದುತೆ ವರನ ಪಡೆಯಲು ನೆನೆದ ಮಾನಸದಿ ೩

ಗುರುವರನ ಕತವೇಳ್ವ ಮೆರೆವಾ
ವರಣಪುರ ಸಚ್ಚರಿತೆಯುದನಾ
ದರದಿ ಲಾಲಿಪ ಪರಮಗುರುಶಿವರಾತ್ರಿಮೂರ್ತಿಯನು
ಇರದೆ ಕೊಂಡಾಡುವ ವಿಲಾಸದಿ
ಹರನ ಮಂತ್ರವ ಜಾನಿಸುತ ಸ
ದ್ಗುರುವಿನುರು ಪೂಜಾತುರದಿ ಮನವೆಳದ ನೆಪದಿಂದ ೪

ಘುಳುಘುಳಿಸಿ ಬರುತಿರ್ಪ ಫೇನಾ
ವಳಿಯ ಕಳೆಯಿಂದೆಳೆಯ ಮಿಣ್ಗಳಿ
ಬಳಗ ಬಳೆಸುತಲಿಹುದರಿಂದಾ ಸುಳಿಯಜಲದಿಂದ
ಇಳೆಯಪಾಲಿಸೆ ಬೆಳೆಯನೀಯುತೆ
ಹೊಳೆವ ಪೊಳೆಯಾ ತಡಿಯಲಿಹ ಸುಮ
ಗಳನೆ ಕೊಯ್ಯಲ್ಕೈದಿತಾ ಸುತ್ತೂರ ವಟುನಿಚಯ ೫

ಪರಮ ಸುಮಗಳ ತಿರಿದು ನೀರ್ದುಂ
ಬಿರುವ ಪಾತ್ರೆಯ ಪೊತ್ತು ಗುರುಪದ
ಸರಸಿಜವನುರೆ ನೆನೆದು ನೆರೆಗದ್ದುಗೆಗೆ ಪೊರಮಡಲು
ಅರಿಯುತದ ಗುರು ಪರಿಕರವ ತಾ
ವರಸಿ ಬಿರುದಾವಳಿ ಸಮೇತದಿ
ಶರಣರೊಡನಾಟದಲಿ ವೃಷಭಾಚಾರ್ಯ ಹೊರಹೊರಟ ೬

ಅಂದುಮಾ ಗದ್ದುಗೆಯ ಪೂಜೆಯು
ಬಂದುದೆನ್ನಯ ವಾಸರದೊಳಗ
ದೆಂದು ಬಹುಜವದಿಂದ ಗುರುವಿನ ಬರವ ತಾನರಿದು
ಚೆಂದದಿಂದಲಿ ಬರುವನೆನಲಾ
ನಂದಮಯ ಕಿರಣೋಜ್ಜ್ವಲಿತನರ
ವಿಂದಸಖನುರು ಭರದಲ್ಯೆತರುತಿರ್ದನಂಬರದಿ ೭

ಇಂದು ಗುರುದರ್ಶನಕೆ ರವಿ ತಾ
ಬಂದನೆಂಬುದನರಿದು ಬಕುತಿಯ
ನೊಂದಿ ನಯಗುಣಭಾವದಿಂದಾತುರದಿ ಗಂಧವಹ
ಮುಂದುವರಿಯುತೆ ಸೇವೆಮಾಡುವ
ನೆಂದೆನಲು ತಾನೈದಿ ಬೀಸಿತು
ಮಂದಭಾವದಲಂದು ಯತಿಯೈತರುವ ಮಾರ್ಗದಲಿ ೮

ಗುರುವರನು ಗದ್ದುಗೆಯ ಬಳಿ ಬರೆ
ನೆರೆದ ಮನುಜಾವಳಿಯುಘೇಯನು
ತೊರೆದು ಕರತಾಡನದಲಿರೆ ಕಹಳೆಗಳು ಬೊಬ್ಬಿರಿಯೆ
ಗುರುಪದಕೆ ತರುನಿವಹ ತಾ ನಮಿ
ಸಿರುವುದೆನೆ ಫಲಭಾರದಿಂ ಬಾ
ಗಿರುತೆ ಶೋಭಿಸಿತಂದೆ ಕಣ್ಣಿಗೆ ಬರುವ ಮಾರ್ಗದಲಿ ೯

ಚರವರನು ಗದ್ದುಗೆಯು ಸೇವಾ
ತುರದೆ ಪಾದ್ಯಾರ್ಘ್ಯಾಚಮನವದ
ನಿರದೆಯರ್ಪಿಸುತಾದರದಿ ಪೂಜಿಸುತಲಲ್ಲಿರಲು
ಗುರುವು ಕುಸುಮವನೊಂದನಿತ್ತತಿ
ಭರದಿ ತೇಜವನಿರದೆ ಪಸರಿಸ
ಲರಿದರಿದು ಮಹಿಮೆಯನು ಕೊಂಡಾಡಿದುದು ನರನಿಚಯ ೧೦

ಅನಿತರಲಿ ಗಗನೇಚರರು ತಾ
ನನುನಯದಿ ಸುಮವೃಷ್ಟಿಯನು ಸಲೆ
ಮನವೊಲಿದು ಸುರಿವರೆ ವಿಲಾಸದಲಭ್ರದಿಂ ಮಳೆಯು
ಹನಿಯು ತುಂತುರವಾಗಿ ಬೀಳುತ
ಲನಿಬರನು ಸಂತೈಸಲಾ ಜನ
ವನಿತು ಜಯಜಯರವದಿ ಪೊಗಳಿದುದಂಪು ಗುರುವರನ ೧೧

ಘನಗುರುವು ಪಿಂದಿರುಗಿ ಬಸವಾ
ರ್ಯನು ಮಠಕೆ ಬರುತಂದು ಮಾದೇ
ಶನನು ಪೂಜಿಸಿ ನಮಿಸುತಾತಗೆ ಯೋಗಭವನದಲಿ
ಘನಗುರುವ ನೆನೆದಂದು ಶಯನಿಸ
ಲನುವಿನಿಂದೈತಂದು ಕನಸಿನ
ಲನುವ ತಾನೊಂದೊರೆದನಾ ಶಿವರಾತ್ರಿಗುರುಮೂರ್ತಿ ೧೨

ಅಂದು ರೇವಣಸಿದ್ಧಗಿರಿಯಿಂ
ಬಂದು ನೆಲಸಿದೆ ಗರಪುರಿಯ ಬಳಿ
ಸಂದು ಕಪಿಲಾ ಕೌಂಡಿನೀನದಿಯೆರಡು ಕೂಡುವೆಡೆ
ಇಂದು ನೀನಾ ತಾಣಕೈದುತೆ
ಸುಂದರದ ದೇವಾಲಯವನದ
ನೊಂದ ವಿರಚಿಸು ಸಂಗಮೇಶಂಗೆಂದ ಗುರುನಾಥ ೧೩

ಹಿರಿಯ ಮಠವೆಂಬೊಂದ ವಿರಚಿಸಿ
ಚರನನೋರ್ವನನಿರಿಸುತುರೆ ಸಲ
ಕರಣೆಯುದನೀಗೈದು ಪೂಜಾಕ್ರಮವನದ ನಡಿಸಿ
ಗುರುವ ಗುರುವಾಗಿರುವ ಪರಮನ
ದುರಿತಹರವರ ಸಂಗಮೇಶನ
ಚರಣಕರುಣವ ನೊಂದುತಲಿ ಪಿಂದಿರುಗಿ ಬಾರೆಂದ ೧೪

ಎಂದೆನಲು ಗುರು ಕನಸಿನೊಳಗೈ
ತಂದು ದಿಗಿಲಿಂದೆದ್ದು ಪೂಜೆಯ
ಲಂದು ಕಾರ‍್ಯವ ಪೂರಯಿಸಿ ಪರಿಕರವನುರೆ ಬೆರೆದು
ಚಂದದಿಂ ಬಿರುದಾವಳಿಯ ತಾ
ನೊಂದಿ ಪುರವನು ಪಿಂದುಳುಪುತಾ
ನಂದದಿಂ ಕಾರ್ತೀಕಮಾಸದಿ ಪಥವನನುಸರಿಸಿ ೧೫

ಪೊರಮಡುತಲೂರೂರಿನೊಳಗಿಹ
ಪರಮಭಕ್ತರ ಹರಸಿ ತಾನಂ
ದುರುತರದ ಪಯಣದಲಿ ಮನವಿಡುತೆಸೆದು ನಲವಿಂದ
ಶರಣರೊಡನಾಟದಲಿ ತಾನಂ
ದಿರುತ ಗಿರಿವನ ವರತಟಾಕವ
ನಿರದೆ ಪುಗುತಾ ಗರಪುರದಲಂದಿಳಿದ ಗುರುನಾಥ ೧೬

ಇಳಿಯೆ ಕಪಿಲಾನದಿಯ ತೀರದಿ
ಸುಳಿದುದಂದಾ ಭಕ್ತನಿಚಯವು
ದಿಳೆಯ ಪುರಪುರದಾ ನಿವಹ ತಾನೈದಿತಂದು ಶಿವ
ಕಳೆಯ ಗುರುವಿನ ಪಾದಪೂಜೆಯ
ಬಳಿಯಿರುವ ಸಂಭ್ರಮವ ನಿರುಕಿಸಿ
ಪೊಳೆತಡಿಯಲಿಳಿದಿರ್ದುದಂದಾದರದಿ ಭಕ್ತಚಯ ೧೭

ಕರೆಯಿಸುತಲಾ ಶಿಲ್ಪಿಯನು ತಾ
ಪರಿಕಿಸುತಲಾ ಭೂಮಿಯನು ಗುರು
ವರನು ನೆರೆದೇಕಾದಶದ ವರ್ಗಗಳನುಸುರೆನಲು
ಭರದಲಂದಾಯಗಳ ವಿವರವ
ನರುಪುತಂದವನೊಲವಿನಿಂ ತಾ
ನಿರಿಸಿದನು ನಾಗಾಯವನು ದೇಗುಲವ ವಿರಚಿಸಲು ೧೮

ವಿರಚಿಸುತೆ ದೇವಾಲಯವ ಗುರು
ಚರಣಕರ್ಪಿಸುತಾತ ತೆರಳೆ
ಲ್ಕುರುತರದ ಶುಭದಿನದಲಂದಾ ಸಂಗಮೇಶ್ವರನ
ಸುರುಚಿಲಿಂಗ ಸ್ಥಾಪನೆಯ ತಾ
ನಿರದೆ ವಿರಚಿಸಿ ಕರೆದು ಭಕ್ತರ
ತರದೊಳಿವನನು ಪೂಜಿಸಿರಿ ನೀವೆನುತ ಗುರುನಾಥ ೧೯

ಹರಿಸದಿಂಸಿಂಹಾಯದಲಿ ಮಠ
ವಿರುವವೊಲು ವಿರಚಿಸುತ ತಾಂ ಗರ
ಪುರದ ಭಕ್ತಮನೋಭಿಲಾಷೆಯ ತೀರಿಸಲು ಮುದದಿ
ಹಿರಿಯಮಠವೆಂದೆಂದೊರೆಯುತದ ತಾ
ಸಿರಿಗಿದೇವಂಗೊರೆದು ಬೋಧೆಯ
ನಿರಿಸಿದನು ಚಿಕನಂಜದೇವನ ಕರೆಯಿಸುತಲಂದೆ ೨೦

ನಿನಗೆ ಸೇರಿದ ಚಿಲ್ಲಹಳ್ಳಿಯ
ನನುವಿನಿಂದೀಯುವುದು ವಿಕ್ರಯ
ಕಿನಿತು ನಿನ್ನಿಂದಾದಪುದು ದೇವಾಧಿಪನ ಪೂಜೆ
ಎನುತವಗೆ ಬೋಧಿಸುತ ಬಸವೇ
ಶನು ತೆಗೆಯುತಾ ಗ್ರಾಮವನು ಕ್ರಮ
ವನುಸರಿಸುತಂದಿತ್ತ ಸಿರಿಗಿರಿದೇವಗಾದರದಿ ೨೧

ತರಣಿ ದಿಗ್ಗುಣ ವರ್ಗವನುಸರಿ
ಸಿರುವ ಶಕದಲಿ ಬರೆದ ಸಂವ
ತ್ಸರವು ಭಾವಮದಾಗೆ ಕಾರ್ತೀಕದಲಿ ಶುದ್ಧವಿರೆ
ನೆರೆಯೆ ಪಂಚಮಿ ಶಾಸನವನುರೆ
ಬರೆಯಿಸಿದ ಕಪಿಲಾನದಿಯ ಬಳಿ
ಇರುವ ಮೊಂಟಪದೆಡೆಯೆ ವೃಷಭಾಚಾರ್ಯನೊಲವಿಂದ ೨೨

ಹಿರಿಯುವನ ತಾ ಬೆರೆಯೆ ಕಿರಿಯುವ
ನಿರದೆ ಹಿರಿಯುವನಹನು ತಾನೆಂ
ಬುರುತರದ ವಾಕ್ಯದ ವಿಲಾಸವೆ ಸಹಜವೆಂದೆನುತೆ
ಇರದೆ ಕಪಿಲಾನದಿಯ ಪರಿತನ
ವರಿದು ಕೌಂಡಿನಿಯಾ ನದಿಯು ತಾಂ
ಬೆರೆದು ಕಪಿಲಾಭಿದವನೊಂದಿತೆನಲ್ಕೆ ರಾಜಿಸಿರೆ ೨೩

ಸಂಗಮದ ಬಳಿಸಂದು ಭಕ್ತರ
ನಂಗಹರವರ ಸಂಗಮೇಶನ
ತುಂಗ ಸಂದರ್ಶನದಿ ಮಾನ್ಯವನಾನುತತಿಶಯದಿ
ಇಂಗಿತಜ್ಞತೆಯಿಂದ ಗುರುಪಾ
ದಂಗಳಲಿ ತಲೆಬಾಗಿ ಜಂಗಮ
ಸಂಗದಿಂದಿರುವವನ ಪಾಡಿದದಂದು ಭಕ್ತಿಯಲಿ ೨೪

ಅಂದೆಯೇ ಶ್ರೀ ಸಾಲ್ವಪತಿಯಾ
ನಂದದಿಂದಾ ಲಿಂಗರಾಜನು
ಬಂದು ಗುರುವರನಡಿಗೆರಗಿ ಭಯಭರಿತ ಭಾವದಲಿ
ನಿಂದು ಕೈಗಳ ಮುಗಿದು ಯೋಗಾ
ನಂದಿಯೆನೆ ಬೆಸಗೊಂಡು ದಯಮಾ
ಡಿಂದು ಮುದದಿಂ ದೇವನೂರಿಂಗೆಂದ ಬಕುತಿಯಲಿ ೨೩

ಗುರುವರನ ಕರೆದೊಯ್ದು ಬಲು ಸಿಂ
ಗರದಿ ರಚಿಸಿಹ ದೇವನೂರಿನ
ಪರತರದ ರವಿಶಶಿಯ ವೀಧಿಯ ಸುತ್ತುವಳಯದಲಿ
ಮೆರವಣಿಗೆಯಿಂ ಬರಿಸಿ ಕಾಣ್ಕೆಯ
ನಿರದೊಲಿದು ತಾನೊಪ್ಪಿಸುತೆ ಸುರು
ಚಿರದ ಭವನದಲಿರಿಸಿ ವಿನಮಿಸಿ ಗತಿಪಥವನೊಂದೆ ೨೬

ಧರಣಿ ದಿಗ್ಗಣ ಶರಧಿ ಶಕೆಯಿಂ
ಮೆರೆದ ಹರವತ್ಸರದಿ ಮಾಧವ
ಚೆರೆಯೆ ಶುದ್ಧದಿ ಪಾಡ್ಯವಿರಲಾ ದೇವನೂರಿನಲಿ
ಬರೆಯಿಸಿದನಾ ಶಾಸನವನಾ
ದರದಿ ವರಗುಣ ಲಿಂಗರಾಜನು
ಪರತರದ ಸುತ್ತೂರ ಸಿಂಹಾಸನದ ಯತಿವರಗೆ ೨೭

ಮುಂದಿನಾ ಸಲಕರಣೆಯಲಿ ನೆರೆ
ಕುಂದುಬಾರದ ತೆರದಿ ಯೋಚಿಸಿ
ಸಂದೆಗವನಳಿದಾಗ ಸುಲಲಿತ ಮಂದಹಾಸದಲಿ
ಬಂದ ಬಕುತರ ಹರಸಿ ಕಳುಪುತ
ಲಂದು ವೃಷಭಾಚಾರ್ಯ ಪರಮಾ
ನಂದದಿಂ ಪರಿಕರವೆರಸಿ ಪೊರಮಟ್ಟನಕಳಂಕ ೨೮

ಹರಿಸದಿಂದೈತರುತಲಂದಾ
ವರಣಪುರವನು ಸೇರಿ ಕರುಣಾ
ಕರ ಸುಧಾಕರನುದಯದೊಳಗೊಳ ಪುಗುತ ನಿಜಮಠವ
ಸರಸದಿಂ ಶಿವಲಿಂಗಪೂಜಾ
ಚರಣೆಯಿಂ ನುತಿಗೈದು ಶಂಭುವ
ಚರಣಕಭಿನಮಿಸುತೆ ವಿಲಾಸದಿ ಶಿಷ್ಯನನು ಕರೆದ ೨೯

ಮಂದಮತಿಯನು ತೊರೆ ವಿವೇಕಾ
ನಂದದಲಿ ಬೆರೆ ಪರಮಶಿಷ್ಯರ
ವೃಂದವನು ನೆರೆ ಮೋಕ್ಷದಾ ಗುಣವಿಸರವಃದನು ಪೊರೆ
ಮುಂದೆ ಮರೆ ಗಣನಿವಹವದ ಬಾ
ರೆಂದು ಕರೆ ಕುಹಕಾದಿಗುಣಗಳ
ನಿಂದು ಮರೆ ನೀನೆಂದು ವೃಷಭಾಚಾರ್ಯ ಬೋಧಿಸಿದ ೩೦

ಪೂರಿತಾದರ ಸುಮತಿ ಪಿಸುಣರ
ಸೇರ ದುರ್ಗತಿದೂರ ಗುರುವರ
ವಿಾರಜಿತ ಷಡ್ವರ್ಗ ಪಂಚಕ್ಲೇಶನಾಶಕರ
ಸಾರಿ ಭಾನುಕುಮಾರ ಲೋಕವ
ನೇರ ದುರಿತಾಚಲವನೆನುತಲಿ
ಸಾರತರ ನೀತಿಯನು ಪೇಳಿದನಂದು ಗುರುನಾಥ ೩೧

ಕುಲವಿಹೀನನ ಕೂಟವನು ದು
ಷ್ಫಲವನೀಯುವ ನೋಟವನು ಸಲೆ
ಕೆಲೆದು ಕಲಹಕೆ ನಿಲುವ ಭಂಡರ ಬೆರೆವ ಕಾಟವನು
ಖಲಜನಗಳೊಡನಾಟವನು ತಾ
ಸುಲಿಗೆ ಸುಲಿಯುವ ಬೇಟವನು ಚಂ
ಚಲವಿರುವ ಬೂಟಾಟವನು ನೆರೆತೊರೆಯಬೇಕೆಂದ ೩೨

ಧರಣಿಯಲಿ ಚಿರಜೀವಿಯೂನೆಂ
ದರಿದು ಧರ್ಮವ ನಡಿಸು ತನುವ
ಸ್ಥಿರವದೆನುತಂದೆನಗು ಸತ್ಕರ್ಮಗಳನತಿಜವದಿ
ಬೆರೆದು ನೀನಡೆ ನುಡಿಯನುರೆ ನಿ
ಷ್ಠುರಕೆ ಸಿಲುಕದಿರೆಂದುವಾಪ್ತರ
ಸುರಸವಿರಸವದಪ್ಪುದೈ ಕೇಳೆಂದ ಗುರುನಾಥ ೩೩

ತೊರೆದುದನೆ ಬಯಸದಿರು ನೀನಾ
ಚರಿಸುವುದ ಮರೆಯದಿರು ಕಠೆಯದ
ನರರೆಡೆಗೆ ನೀಂ ಪೋಗದಿರು ಮೊನಿಸದ ಕುಹಕರಲಿ
ಒರೆಯದಿರು ಮನದಿರುವ ನೀನಾ
ವರವನರಿಯದರೊಳಗೆ ಗೋ
ಚರಿಸದಿರುವುದು ನೀತಿವಿದನೇ ಶಿಷ್ಯ ಕೇಳೆಂದ ೩೪

ಬೋಧಿಸದಿರಾ ಶೈವತತ್ತ್ವವ
ಸಾಧನಕ್ರಮವದನು ಸತ್ಯವಿ
ರೋಧಿಗಾದರದಿಂದ ನಡೆನುಡಿಯೆತಕವಿಲ್ಲದನ
ಸಾಧುವೆಂದೆನದಿರು ವಿಚಾರದ
ಬೋಧಕನ ಮರೆಯದಿರು ನಿಜದಿಂ
ಸಾಧಿಸುತ ಶಿವಪದವ ಧರ್ಮದೆ ಬಾಳು ನೀನೆನುತ ೩೫

ಒದಗೆ ಋತುವಾ ಶಿಶಿರ ಮಾಘದ
ಲೊದಗಲಾ ತಿಥಿ ಶುದ್ಧ ಸಪ್ತಮಿ
ಯೊದಗಲಂದಾದಪ್ರಭಂ ವರ್ಗೋತ್ತಮಾಂಶದಲಿ
ಒದಗಲಂದಾ ಮೀನಲಗ್ನವು
ಸದಮಲಾಂಗಗೆ ನಂಜದೇವಂ
ಗೊದಗಿಸುತೆ ಶುಭವರ್ಗದಲಿ ಮೂರ್ಧಾಭಿಷೇಚನವ ೩೬

ನೆರೆ ಮುಡುಕುದೊರೆ ಮಲೆಗೆ ಪೋಗುತೆ
ಹಿರಿಯರಾದರ ಪರಿಯ ಮೀರದೆ
ಜರುಗಿಸುತೆ ಕಾರಿಯವನೆಲ್ಲವ ಸಿದ್ಧಗಿರಿಗೈದಿ
ಗುರುವರನ ವಿಗ್ರಹವ ಪೂಜಿಸಿ
ಬೆರೆದು ಸುಖದೊಳು ಬಾಳೆನುತೆ ತಾಂ
ಹರಸಿ ಕೊಡಗಿನ ಬಳಿಯ ಗಿರಿಯಲಿ ನಿಂದ ಗುರುನಾಥ ೩೭

ಶ್ರೀಮಹೇಶ ಮನೋವಿಹಾರಿಣಿ
ಸೋಮಧರೆ ದುರಿತೌಘಹಾರಿಣಿ
ರಾಮಣೀಯಕವಾಣಿ ನತಜನವರದೆ ಫಣಿವೇಣಿ
ರಾಮಕಾರ್ಯ ಹಿತೋಪಕಾರಿಣಿ
ಸಾಮಗಾನವಿಶೇಷ ತೋಷಿಣಿ
ಭೂಮಿಗೀವುದು ಸುಖವ ಚಾಮುಂಡಾಂಬೆ ಶರ್ವಾಣಿ ೩೮

# ನಂಜುಂಡದೇಶಿಕೇಂದ್ರ ಕಥನಂ

ನಾಗಧರದೇವಾಲಯದಲಾ
ನಾಗವನು ಧರಿಸುತಲಿ ತಾನು ವಿ
ರಾಗಿಯೆಸೆದಾ ನಂಜವಿಭು ಸುತ್ತೂರ ಪೀಠದಲಿ

ಶ್ರೀ ವಿರೂಪಾಕ್ಷೇಶ ನತಜನ
ಪಾವನಾಂಕ ಪರೇಶ ಪರತರ
ದೇವದೇವ ಕಿರಾತರೂಪ ವಿನೋದ ಜಿತಶಮನ
ಪಾವಕಾಕ್ಷ ಗಿರೀಶ ಕೋವಿದ
ಭಾವಮಂದಿರ ಧರ್ಮವಾಹ ಸು
ಭಾವ ಯೋಗಾನಂದಿ ಹಿತ ಪೊರೆ ಸೋಮನಾಥೇಶ ೧

ಲಾಲಿಪುದು ನೀ ಸಿದ್ಧಲಿಂಗನೆ
ಬಾಲಪಾಲಕ ಸುಗುಣ ತುಂಗನೆ
ಶೀಲವ್ರತಪರಿಪಾಲ ನತಗುರು ಸಿದ್ಧಲಿಂಗಸುತ
ಶೂಲಧರನಪರಾವತಾರನ
ಪಾಲಿತಾನತ ನಂಜದೇವನ
ಲೀಲೆಯುರುಕಥನವನೊರೆವೆ ನಾನೆಂದ ಗುರುನಾಥ ೨

ಅನುಪಮಿತ ಚಾರಿತ್ರ ಬಸವಾ
ರ್ಯನು ಕಲೂರಿನ ಗದ್ದುಗೆಯು ತಾ
ನನುಸರಿಸಿ ರಾಜಿಸಿರೆ ಪುರದೊಳಗಿತ್ತ ನಂಜಾರ್ಯ
ಮಿನುಗುವಾ ಸುತ್ತೂರ ಸೂತ್ರದ
ಘನತೆಯನು ಪಸರಿಸುತ ಪರ ಗುರು
ವಿನ ಮಹತ್ವದ ಗದ್ದುಗೆಯ ಪೂಜಾತುರದಿನೆಸೆದ ೩

ಗಿಳಿಗಳುರೆ ನಲಿದಾಡೆ ಬನದಲಿ
ತಳಿರ ಬಿಡೆ ಮಾಮರವು ಪಿಕಸಂ
ಕುಳಮದುವೆ ದನಿಗೂಡೆ ನೆರೆ ತಂಗಾಳಿ ತಾಂ ತೀಡೆ
ಅಳಿವಿತಾನವು ಪಾಡೆ ಸಲೆ ಕಂ
ಗೊಳಿಸೆ ಕುಸುಮದ ಬೀಡು ರಾಜಿಸು
ತಿಳೆಯೊಳು ಮಧುಮಾಸ ಬಂದುದು ಲೋಕರಂಜನಕೆ ೪

ಪರಮಗುರು ಶಿವರಾತ್ರಿದೇವನ
ಸುರುಚಿರದ ಗದ್ದುಗೆಯ ಪೂಜಾ
ಚರಣ ಯಾತ್ರಾಕಾಲವೊದಗಲ್ಕಾದರದಿ ಜನರು
ತರತರದಿನೊಲವಿಂದ ಬರುತಲಿ
ಭರದಿ ಫಲಪುಷ್ಪಗಳ ಸಹಿತದಿ
ನೆರೆದರಂದಾ ಶಿವನ ಪಂಚಾಕ್ಷರಿಯ ಪಠನೆಯಲಿ ೫

ಆರವೆಯನೊಳಪೊಕ್ಕು ಪೂಗೊ
ಯ್ವಾರವವ ನೆರೆದಂದು ಬಂಧುರ
ಸಾರವವತರಿಸಿರಃವರಲ ನಿರುಕಿಸುತಲವ ತಿರಿದು
ನಾರಿಯರನು ಕುಮಾರಕರನು ವಿ
ಚಾರಪರರೊಡಗೂಡಿ ಸದ್ಗುಣ
ಹಾರರೈತರುತಿರ್ದರಂದಾ ಗದ್ದುಗೆಯ ಬಳಿಗೆ ೭

ಪರಿಮಳದ ಕುಸುಮಗಳ ತಿರಿದುರೆ
ಸರವಕಟ್ಟುತಲಟ್ಟಹಾಸದಿ
ಬಿರುಬಿರನೆ ಬರುತಿರ್ದರಾ ಗುರುವರನ ಭಜನೆಯಲಿ
ಧರಿಸಿ ಭಸಿತವ ಪಣೆಗೆ ತಾವಾ
ದರದಿ ಫಲಪುಷ್ಪಾದಿಗಳ ವರ
ಕರದಿ ಪಿಡಿದವರೊಂದೆಡೆಯಿನ್ನೈತಂದರತಿಶಯದಿ ೭

ದಿನಮಧ್ಯೈತರೆ ಶುಭದಿ ತಾನವ
ನನುಸರಿಸಿ ಗುರುವಾಕ್ಯಗಳನಿರ
ದನಘನಂದಾಚಾರ್ಯನೊಲವಿಂದೈದಿ ಭಕ್ತಿಯಲಿ
ವನಜನಿಚಯ ಸಹಸ್ರದಿಂದಲಿ
ಘನತರದ ವೇದೋಕ್ತಮಂತ್ರದಿ
ದಿನಪನಿರೆ ಪೂರ್ವಾಹ್ಣದಲಿ ಪೂಜಿಸಿದ ಗದ್ದುಗೆಯ ೮

ಬಂದ ಬಹುತರ ಸಂದಣಿಯು ನೆರೆ
ದಂದು ನೀರಾಜನದ ಸಮಯದಿ
ನಿಂದು ಶೋಭನದಿಂದ ಪಾಡುತ ಮುಂದುವರಿಯುತಲಿ
ಕಂದರಾಗುವ ವರವ ಬೇಡುತ
ಚಂದದಿಂದಿರಲಲ್ಲಿ ಶರಣನ
ಸುಂದರೀಮಣಿ ಬಂದು ಕಾಣ್ಕೆಯನಿತ್ತು ವಿನಮಿಸುತೆ ೯

ಬಂಜೆಯುವಲೋಕನದಿ ಲೋಕದ
ಲಂಜಿ ಮರೆಯಾದಪಳು ಸಿರಿಯು ಸು
ರಂಜನಾಲಯು ನಶಿಸಿ ಭೂತನಿವಾಸವಹುದಲ್ತೆ
ಪಿಂಜರಿವೆನುಸಿರಲಳಲನು ಗತಿ
ಪುಂಜದೊರೆವುದೆ ಲೋಕದೂಷಣೆ
ಗಂಜಿ ನಡುಗುವೆನಕಟ ಬಂಜೆಯುತನವ ನೀಗೆನುತೆ ೧೦

ಘಲಿರು ಘಲಿರೆಂದೆಂಬ ಗೆಜ್ಜೆಗೆ
ಳುಲಿಯೆ ನಡುವೆಡೆ ಬೀಸಿ ಕರಗಳ
ನಲಿನಲಿದು ತಾನೈದಿ ಪೆಜ್ಜೆಯ ಮೇಲೆ ಪೆಜ್ಜೆಯಲಿ
ಒಲಿದೊಲಿದು ತಾನೋಡಿ ಬರುತಃ
ದಲೆದಲೆಯುತಾ ಸೀರೆಸೆರಗನು
ಸಲೆ ಮುಗುಳುನಗೆಯಾಂತ ಮಗನೆಂದುದಿಪ ಗುರುನಾಥ ೧೧

ಸಾರಮದು ಧರಣಿಯೊಳಗುರೆ ಸಂ
ಸಾರಮದರಲಿ ರಂಜಿಸುತಲಿದೆ
ಸಾರತರ ನಾರೀಶಿರೋಮಣಿಯುಧಕೆ ಜೌವನವೆ
ಸಾರವಾಗಿಹುದದಕೆ ವರ ಸುಕು
ಮಾರನುದಯ ಸುಸಾರ ಸದ್ಗತಿ
ಸಾರವೀವ ಕುಮಾರಕನು ತಾನೆಂದೊಗೆವ ದೇವ ೧೨

ಆರ ಮಕ್ಕಳ ನೋಡಿ ಕರುಬಿದೆ
ನಾರ ಕಂದರ ನಿಂದಿಸಿದೆ ನಾ
ನಾರ ಸುಕುಮಾರಕರ ಕೊಲಿಸಿದೆ ಬಿಸವನುಣಬಡಿಸಿ
ಆರ ತರುಣರನಗಲಿಸಿದೆ ನಾ
ನಾರ ಗರ್ಭವನಿಳಿಸಿರುವೆ ನಾ
ನಾರ ಸಿರಿಯುಪಹರಿಸಿದೆನೊ ಪಿಂದಣದ ಜನ್ಮದಲಿ ೧೩

ಹಿಂದೆ ಗಳಿಸಿದ ಪಾಪ ಫಲವೈ
ತಂದು ಬಾಧಿಪುದಕಟಕಟ ಬಲು
ನೊಂದೆ ಗೆಳತಿಯರೈದೆಗೈದಪಮಾನಗುಣದಿಂದ
ಇಂದು ಪರಿಕಿಸದೆನ್ನ ಮನಕಾ
ನಂದವೆಸಗುತ ವರವನೀಯುತ
ತಂಬೆ ಸಲಹೆಂದೆರಗಿ ನುತಿಸುತ ಮುಗುಳ್ದು ಮನಮರುಗಿ ೧೪

ಕಂದರನು ತಬ್ಬದಿಹ ತೋಳುಗ
ಳಿಂದ ಫಲವೇನಿರದು ಬಹು ಮುದ
ದಿಂದ ಕದಪಿಗೆ ಮುತ್ತಿಡದ ಬಾಯಿಂದಲೇನು ಫಲ
ಮುಂದು ಮುಂದಕೆ ಸರಿಯುತಿರುವಾ
ನಂದನನ ಚಂದವನು ನೋಡದ
ಮಂದಮತಿಯುಳ ಕಣ್ಣದೇಕೆಂದಳಲಿದಳು ನಾರಿ ೧೫

ಅನಿತರಲಿ ನಂಜಾರ್ಯ ಗುರುವರ
ವನಿತೆಯನು ಸಂತೈಸಿ ನಡೆನುಡಿ
ಯನುಸರಿಸಿರುವೆ ನಿಸ್ನ ಪಾಲಿಪನಿಂದು ಪರಮೇಶ
ಘನ ವರವ ನಿನಗೀವೆ ಮುಂದಹ
ತನಯನನು ನೀನರ್ಪಿಪುದು ನೆಲೆ
ಚಿನುಮಯನ ಪಾದಾಬ್ಜದಲಿಯೆನುತಂದೆ ವರವಿತ್ತ ೧೬

ಸನುಮತನು ತಾನಿತ್ತ ವರವದ
ವನಿತೆಯುರೆ ಕೈಗೊಂಡು ನಯದಿಂ
ವಿನಮಿಸುತೆ ತಾನೊಂದ ಬಿನ್ನವಿಸಿದಳು ಗುರುವಿನಲಿ
ಜನಿಸೆ ಸುತನಂದೋರ್ವನಾತನ
ನಿನಗೆ ನಾನರ್ಪಿಸುವೆನೆನುತಂ
ದನುವಿನಿಂದೊರೆದಾಕೆ ನಿಶ್ಚಯಿಸುತಲಿ ತೆರಳಿದಳು ೧೭

ಇರುತಿರುತ ಕೆಲದಿವಸ ಕಳೆಯಲು
ಭರದಲಂದಾ ಸತಿಯ ಗರ್ಭದಿ
ಬರುತೆ ತಾನಂದೋರ್ವ ಸುಕುಮಾರಕ ಶಶಾಂಕನೊಲು
ಮೆರೆಯುಲಂದಾ ನಾರಿಯಿರದಾ
ದರದೆ ಶಿಶುವಂ ಕೊಂಡು ತಾನಾ
ವರಣಪುರದೆಡೆಗೈದಿ ಗುರುವರಗಿತ್ತಳೊಲವಿಂದ ೧೮

ಚರವರನು ನಂಜಾರ್ಯನಂದಾ
ತರಳನನು ಕೈಗೊಂಡು ಹರಿಸದೆ
ಹರಸುತಾ ಘನಲಿಂಗಿನಾಪದೆ ಕರೆಯುತವನಿಯಲಿ
ಮರಳಿ ಕುವರನನವನ ಜನನಿಗೆ
ಪೊರೆಯಲೊಲವಿಂದಿತ್ತು ಕಳುಪುತೆ
ಮೆರೆದನಾ ಯಮಿವರ್ಯ ಬಹು ಸಂತೋಷಮಯ ಮನದಿ ೧೯

ಪುರಜನರು ವರ ಸೋಮನಾಥೇ
ಶ್ವರನ ದೇವಾಲಯಕೆ ಬರುತಂ
ದಿರದ ಪೂಜಾತುರದಿನೊಳಪುಗಲಂದೆ ರೋಷದಲಿ
ಉರಗನುರೆ ಬುಸುಗುಟ್ಟುತಲಿ ಬಂ
ದರನು ಬೆದರಿಸಿ ಚರಿಸುತಲ್ಲಿರೆ
ಮೊರೆಯಿಡುತೆ ಗದಗದಿಸುತಂದಾ ಜನನಿಕರ ಭರದಿ ೨೦

ಬೆದರಿ ಯತಿನಂಜಾರ್ಯನುರುತರ
ಪದಕೆರಗಿ ಗುರುದೇವ ನಮಗಿಂ
ದೊದಗಿದಾಪತ್ತಿದನೆ ಪರಿಹರಿಸೆನುತೆ ಬಿನ್ನವಿಸೆ
ಸದಯ ತಾನೈತರುತಲೊಳಪುಗು
ತೆದೆಯು ತಲ್ಲಣಪರನು ಸಲಹಲು
ಮುದಿತಮನದಿಂ ಪೊಕ್ಕನಾ ದೇಗುಲವನಾಚಾರ್ಯ ೨೧

ಗುರುವರನು ತಾನೊಳಪೊಗಲು ಮೇ
ಲ್ವರಿಯುತಂದಾ ಭುಜಗ ಹೆಡೆಯೆ
ತ್ತಿರುತೆ ರೋಷದಿ ನಿಲುತೆ ಬುಸುಗುಟ್ಟುತೆ ವಿರೋಧದಲಿ
ಭರದಿ ಕಚ್ಚಲ್ಕೆರಗಲಂದವ
ಧರಿಸಿ ಕರದಲಿ ಸರಸದಿಂದಾ
ಕೊರಳೊಳಗೆ ಬಂಧಿಸುತ ಪೊರಗೈತರಲು ನಂಜಾರ್ಯ ೨೨

ಉರಗಭೂಷಣನೆನಿಪ ಸೋಮೇ
ಶ್ವರನು ತನ್ನಯ ಭಕ್ತನಿಚಯುವ
ಪೊರೆಯಲೋಸುಗ ಬಂದನನೆ ರಂಜಿಸುವ ಯತಿವರನ
ಚರಣ ಸಾರಸಕೆರಗುತಾತನ
ಕರುಣದಲಿ ಪೂಜಿಸಿದರೊಲ್ದಾ
ದರದಲಂದಖಿಲೋಪಚಾರದಿ ಜಯಜಯಾರವದೆ ೨೩

ಕೊರಳಿನಲಿ ಧರಿಸಿರ್ಪ ಸರ್ಪವ
ಕರೆಯಲದು ಸರಸರನಿಳಿದು ಬರು
ತಿರದೆ ಪೆಡೆಯದನೆತ್ತುತಾಡುತ ಗುರುವಿನುರುಪದಕೆ
ಎರಗಲಂದದ ಹರಸಿ ಗಿರಿಯೆಡೆ
ತೆರಳೆನಲು ದೇಗುಲದೆಡೆಯು ತಾ
ತೊರೆದು ಸರಿದುದು ವೀರಭದ್ರಾಚಲಕೆ ಪದಪಿಂದ ೨೪

ಹರಸಿ ಗುರುವರನನಿಬರೆಲ್ಲರ
ಕರೆಯಿಸುತ ಮಠದೆಡೆಗೆ ತಾನಂ
ದೊರೆಯಲಾ ನಡೆನುಡಿ ವಿಚಾರವನೊಡನೆ ಭಕ್ತಚಯ
ದುರಿತಮಯರಾಗಿಹೆವು ಮುಂದಿನ
ಪರಿಯನರುಹುತಲೆಮ್ಮ ನೀನು
ದ್ಧರಿಪುದೆನಲವನೊರೆದ ಕಾಲಜ್ಞಾನ ವಿವರವನು ೨೫

ಕಲಿಯುಗದ ಮಹಿಮೆಯುದ ನಾನಿಂ
ದೊಲುಮೆಯಿಂದುಸಿರುವೆನು ನಿಜಮನ
ದಲಸಿಕೆಯನುಳಿದಿಂದು ಲಾಲಿಪುದೆನುತೆ ಗುರುನಾಥ
ಲಲಿತವಚನದಲೊರೆದನಂದಾ
ಮಲಹರನ ದಯದಿಂದ ಮೋಕ್ಷದ
ಲಲನೆಯಧಿಪತಿ ವೀರಶೈವ ಸಭಾಂತರಾಳದಲಿ ೨೬

ಪೊಡವಿಯೊಳಗಾ ಮುಂದೆ ನರರಲಿ
ನಡೆನುಡಿಗಳೆರಕವದು ಕೆಡುತಲಿ
ಪಡೆಯುವರು ದುರ್ಗತಿಯ ಕಲಿಯುಗ ಕಾಲಮಹಿಮೆಯಲಿ
ಮೃಡನಭಕ್ತರಿಗೆಡೆಗೊಡದೆ ಕೆಡು
ನಡೆಯ ಮಾನವರೆಡಬಿಡದೆ ಬಲು
ಸಡಗರದಿ ಕೆಡಿಸುವರು ಲಿಂಗಾಂಗಿಗಳ ಕೇಳೆಂದ ೨೭

ಅಂಗಲಿಂಗದ ಸಮರಸದಲಿರು
ವಿಂಗಿತವನರಿಯದೆಯೆ ಬಹು ದು
ಸ್ಸಂಗಿಗಳು ದುರ್ಬೋಧೆಯಲಿ ಮಾನವರನುರೆ ಕೆಡಿಸಿ
ಭಂಗಗೊಳಿಸುವರಂದು ಭವಿಗಳ
ಸಂಗವದು ನೋಡಲ್ಕೆ ನಡೆನುಡಿ
ಸಂಗ ನಿಮಗಿರಲೆಂದು ಬೋಧಿಸುತೆಸೆದನಾಚಾರ್ಯ ೨೮

ನಡೆಗೆಡುತಲಳಿದಿಹರು ಕೆಲವರು
ನುಡಿಗೆಡುತಲಳಿದಿಹರು ಹಲವರು
ನಡೆನುಡಿಯನೊಡಗೂಡಿಸದೆ ತಾವಂದಧೋಗತಿಯ
ಒಡನೆಯೊಂದುತೆ ದುರಿತಪಥದೊಳು
ಸಡಗರಮದಡಗುತೆ ವಿಕಾರದಿ
ಕೆಡುವರದರಿಂದಿರಲಿ ನಡೆನುಡಿಯೆರಕ ನಿಮಗೆಂದ ೨೯

ಹರನಪೂಜೆಯ ಬಲದಲಂದಾ
ಶರಣಜನದೊಡನಾಟದಿರುತುರೆ
ಪರಮಭಕ್ತಿಯ ನಡೆಯನನುಸರಿಸುತ್ತ ನಲವಿಂದ
ದುರಿತಜಾಲಕೆ ದೂರನಾಗುತ
ಲರಿದು ನಡೆನುಡಿಯೆರಡ ಸಾಧಿಸೆ
ಗುರುವನುಜ್ಞೆಯನೊಂದುವವನವ ಶಿಷ್ಯ ಕೇಳೆಂದ ೩೦

ಅನಿತರೊಳಗಾ ಶರಣನಾ ಸತಿ
ತನಯನಹ ಘನಲಿಂಗಿಯನು ಬಹು
ವಿನಯಭಾವದಲಿತ್ತಳಾ ಗುರುವರಗೆ ತಾ ಬಂದು
ವನಿತೆಯಾ ನಿಜಮತಕೊಲಿದು ಚಿ
ದ್ಘನಗುರುವಿನಾ ವರಪದಕೆ ತಾ
ನನುಮತಿಯಲೊಪ್ಪಿಸಿದನಾತನ ನಂಜವಿಭುವೊಲಿದು ೩೧

ಗುರುವರಂಗರ್ಪಿಸುತಲಾತಂ
ಗೊರೆದು ಬೋಧೆಯ ನಡೆನುಡಿಯದರ
ಡೆರಕವಾಗುವ ಪರಿಯ ನಿಲಯದಲಿರಿಸಿ ತಾ ಹರಸಿ
ಪರಮವಿದ್ಯದಿ ಮೆರಸಿ ಕರುಣಾ
ಕರನು ಪೀಠದಲವನನುರೆ ಕು
ಳ್ಳಿರಿಸಿ ಪಟ್ಟವಕಟ್ಟಿ ಜಯುವೆಂದೆನುತ ಹೊರಹೊರಟ ೩೨

ಶ್ರೀಗಣಾರ್ಚಿತೆ ಶಂಭುತೋಷಿಣಿ
ನಾಗಲೋಕಾನೀಕಪೋಷಿಣಿ
ಯೋಗಿಜನಹೃದಯಾಬ್ಜವಾಸಿನಿ ಖಡ್ಗಯುತ ಪಾಣಿ
ಆ ಗಿರೀಂದ್ರ ವರಪ್ರದಾಯಿನಿ
ನಾಗಧರ ವಾಮಾಂಕಭೂಷಿಣಿ
ಬೇಗ ಚಾಮುಂಡಾಂಬೆ ಪೊರೆ ಕಲ್ಯಾಣ ಶರ್ವಾಣಿ ೩೩

# ಘನಲಿಂಗಿದೇವ ಕಥನಂ

ಪರಮ ಷಟ್ಸ್ಥಲಮಾರ್ಗದಲಿ ನೆರೆ
ಚಿರುತ ವರ ಘನಲಿಂಗಿದೇವನು
ಸುರುಚಿರದ ಸುಕ್ಷೇತ್ರ ಸಿಂಹಾಸನದಿ ರಾಜಿಸಿದ

ಶ್ರೀಶ ಚಕ್ರಪ್ರದ ಮಹೇಶ್ವರ
ಪಾಶುಪತ ಮತಬೋಧ ವರಲೋ
ಕೇಶ ವಂದಿತ ಪದಕಮಲ ಸದ್ವಿಮಲಚಾರಿತ್ರ
ಪಾಶಹರ ಗೀರ್ವಾಣನುತ ಗೌ
ರೀಶ ಭೃಂಗೀ ನಟನಹಿತ ಸೋ
ಮೇಶ ಕುಡು ಬಕು ಶುಭವ ಭವಭಯನಾಶ ಭೂತೇಶ ೧

ಕೇಳು ಕೇಳೆಲೆ ಸಿದ್ಧಲಿಂಗನೆ
ಫಾಳಲೋಚನ ಭಕ್ತವರ ಕಳು
ಣಾಳು ಸನ್ನುತ ಜನಮನಸ್ತೋಷಕ ವಿರಾಗಯುತ
ಪೇಳುತಿಹೆನುರು ಲಿಂಗಸಂಗದ
ಏಳಿಗೆಯ ಘನಲಿಂಗಿ ವರ ವಚ
ನಾಳಿಯನು ನಾನೆಂದ ಶಿವರಾತ್ರೀಶ ಗುಣಕೋಶ ೨

ಜಳಮಯದಲಂದಿಳೆಯು ನೆನೆದುದು
ನಳನಳಿಸುತಾ ಬೆಳೆಯು ಬೆಳೆದುದು
ಕಳಮದಾ ಸುಕ್ಷೇತ್ರ ರಾರಾಜಿಸಿತು ಕಣ್ಗಳಿಗೆ
ಜಳಧರಂಗಳ ನಿಚಯು ತಾ ದಿ
ಗ್ವಳಯದಲಿ ರಂಜಿಸಿತು ಕೇಕಿಯ
ಬಳಗ ನಲಿದಾಡಿದುದು ವರ್ಷಾಗಮದ ಸಮಯದಲಿ ೩

ಇಂತಿರಲು ಸಾವಣದ ಮಹಾಸದಿ
ಮಂತುಹರ ಘನಲಿಂಗಿದೇವನ
ಸಂತಸದಲಾ ಪಾದಪೂಜೆಯನೆಸಗಿ ಭಕ್ತಚಯ
ಚಿಂತಿತಾರ್ಥವ ಪಡೆದು ಲೋಕದ
ನಂತಚಿಂತೆಯ ತಳೆಯದೆಯೆ ನಿಜ
ದಂತರಂಗದಿ ಬೆರೆದು ಗುರುವಿನಲೆಂದರಾದರದಿ ೪

ಆದಿಗುರು ಶಿವರಾತ್ರಿದೇವನ
ಪಾದ ಪದ್ಮವ ಪೂಜಿಸುತ ನುತ
ಮೋದದಿಂದುಪದೇಶಿಸಾ ನಡೆನುಡಿಗಳುರುಪಥವ
ಸಾದರದಲುರೆ ದೊರೆವ ಗತಿಯಾ
ಹಾದಿಯದ ತೋರೆನಲು ಕೇಳಂ
ದಾ ದಯಾಂಬುಧಿ ಗುರುವೆಡೆಗೆ ತಾನೈದಲನುವಾದ ೫

ತರತರದ ತೋರಣದಿ ವರಗೋ
ಪುರವಲಂಕೃತಿಯಿಂದ ರಾಜಿಸೆ
ಪರಿಲಸಿತ ಕಸ್ತೂರಿಯಿಂದುರೆ ಬೆರೆದ ಸಾರಣೆಯು
ಮೆರೆಯಲಾ ಗುರುವೈದಿ ಪೂಜಿಸು
ತುರು ವರವನುರೆ ಪಡೆದು ಶಿಷ್ಯರಿ
ಗೊರೆದನಂದದ್ವೈತಮಾರ್ಗದ ಧರ್ಮಕರ್ಮಗಳ ೬

ಪರಮಗುಣಿ ನಂಜಾರ್ಯದೇವನ
ವರದಲಂದಾವಿರ್ಭವಿಸಲುರು
ತರದ ತೋಂಟದ ಗುರುಚರಣಕೆರಗಿಸಿದಳಾ ಜನನಿ
ಸರಸಯುತ ಕೃಪೆಯೆಂಬ ತೊಟ್ಟಿಲೊ
ಳಿರಿಸುತಾ ಘನವಚನವೆನಿಪಾ
ಸುರುಚಿಯುಹ ಪಾಲ್ದುಪ್ಪವದನೊಲಿದೆನಗೆ ತಾನೆರೆದ ೭

ಹಾನರವು ಮತಿಗೆಡುತಲಿ ಸುರಾ
ಪಾನವದನುರೆಗೈದು ತಾನಂ
ಭೋನಿಧಿಯ ದಾಂಟುವ ಮನದಲಾ ನೀರಿನಲಿ ಮುಳುಗಿ
ಹಾನಿಯೊಂದುವ ತೆರದಿ ಭವದಭಿ
ಮಾನಶರಧಿಯು ದಾಂಟಿ ನೆನೆಯುತ
ನೂನಗತಿಯಿಲ್ಲದೆಯೆ ಕೆಡುವರು ತೊರೆದು ನಡೆನುಡಿಯ ೮

ಗತಿಯ ಪಥವನು ಕೆಡಿಸಿ ಜನ್ಮದ
ಕತೆಗವನ ಗುರಿಪಡಿಸಿ ದುರಿತದ
ಮತಿಯನೊಡಗೂಡಿಸುತ ಕೆಡಿಸುವುದೊಡನೆ ಸಂಚಿತವು
ಹಿತವ ಮರೆಸುತ ಕಾಲಕಾಮರ
ಹತಿಯೊಳಿರಿಸುತೆ ಜನರನವರಿಂ
ದತಿಶಯದಿ ಕೊಲಿಸುವುದು ನಡೆನುಡಿಯಿಲ್ಲದಿರೆ ಜಗದಿ ೯

ಧನದವೋಲಭಿಮತವು ನೆಲಸಿರು
ವನಕ ಸಾವಿನ ಬೀಜವಳಿವುದೆ
ಕಿನಯುಮತಿಯಾ ಕಿರಿಯುದರಿವಿಂದಳಿಯೆ ಹಂಬಲವ
ಎನಿತು ಭಾಗ್ಯವ ಪಿಡಿದಿಹನೊ ತಾ
ವನಿತನವಲೋಕಿಸದೆ ಸಲೆ ಪಾ
ವನೆ ಕರದಿ ಪಿಡಿದಿರುವ ಮರ್ಕಟದೊಲಿಹನವನೆಂದ ೧೦

ಆವ ಜನನ ಸ್ಥಿತಿ ಲಯುಕೆ ತಾ
ನಾವ ರಕ್ಷಣ ಶಿಕ್ಷಣಕೆಯಿರ
ವಾವ ಭುವನತ್ರಯಕೆ ನೋಡಲ್ಕಾವ ಪಶುಚಯಕೆ
ಆವ ಸದ್ಗತಿಪಥಕೆ ಪರಿಕಿಸ
ಲಾವ ನಿಗಮಾಗಮಕೆ ವಿಭುವಹ
ನಾವನೋ ನೀವವನ ಕಾಂಬಿರಿ ಜಿತವಿಷಯುದಿಂದ ೧೧

ಕೋಪತಾಪಾದಿಗಳನಳಿಸದೆ
ಪಾಪಕೂಪದಿ ಬೀಳಬಹುದೇ
ರೂಪಿಗುರೆ ಮರುಳಾಗಿ ನಡೆನುಡಿ ಕೆಡುತಲವನಿಯುಲಿ
ಭೂಪನಾದರು ಬಿಡದವನ ನಿ
ರ್ಲೇಪನಾಗುವವರೆವಿಗಾ ಚಿ
ದ್ರೂಪನಾಗುವಿರಂಗಲಿಂಗದ ಸಮರಸದಲೆಂದ ೧೨

ಜನನವಾ ಬೊಮ್ಮದಲಿ ತನಗಂ
ದೆನುತರಿಯುತಾ ತನುಮನೋಧನ
ವನಿತನೆಲ್ಲವನವಗೆ ನಾ ತೆತ್ತಿರುವೆನೆಂದರಿದು
ಮನದಿ ನಿಜದಿಂದೆಸೆಯುಲಂದವ
ಗನುನಯುದೆ ಕನಸರಿಯುದರು ಬಹು
ವಿನಯುದಲಿ ಪಾಡುತಲಿ ಕೋರುವರವನಿಗತಿಶುಭವ ೧೩

ನಡೆನುಡಿಯುನದನೊಂದೆನಿಸುತೀ
ಪೊಡವಿಯೊಳಗಾ ಸ್ಥೂಲದ್ರವ್ಯದಿ
ಸಡಗರದಲಂದಿಷ್ಟಲಿಂಗಾರಾಧನೆಯುನೆಸಗಿ
ಒಡನೆ ಸೂಕ್ಷ್ಮದ್ರವ್ಯದಿಂದೆಡ
ಬಿಡದೆಯುಂದಾ ಪ್ರಾಣಲಿಂಗವ
ಮೃಡನ ನೆನಪಿಂ ಭಾವಲಿಂಗವ ಪೂಜಿಸುವುದೆಂದ ೧೪

ಹಿತದಿ ನಿಜದಾಹಾರರೂಪವ
ನತಿಮುದದಲಂದಿಷ್ಟಲಿಂಗವ
ನುತಿಸುತರ್ಪಿಸಿ ರುಚಿಯನಂದಾ ಪ್ರಾಣಲಿಂಗಕುರೆ
ಅತಿಶಯದಲರ್ಪಿಸುತೆ ತೃಪ್ತಿಯ
ಗತಿಗೆಳಸಿಯಾ ಭಾವಲಿಂಗಕೆ
ಮತವರಿಯುತರ್ಪಿಸಲು ವರ ಪರಿಣಾಮವಹುದೆಂದ ೧೪

ಶುದ್ಧವೆಂಬುವುದಿಷ್ಟಲಿಂಗದ
ಬದ್ಧವಾಗಿರುವಾ ಪ್ರಸಾದವು
ಸಿದ್ಧವದುವಾ ಪ್ರಾಣಲಿಂಗದ ಸುಪ್ರಸಾದವಿರೆ
ಬುದ್ಧರುಸಿರುವರಿದನು ಧರೆಯೊಳ
ಗುದ್ಧರಿಸಲೊಲವಿಂದ ಭಾವದ
ಸದ್ಧಿತವು ಕೇಳಾ ಪ್ರಸಿದ್ಧವದೆಂದು ಪೇಳುವರು ೧೫

ಮಂದಗುಣದಲಿ ಮಣ್ಣನಂಬುತೆ
ಚಂದದಿಂದಾ ಹೆಣ್ಣಗೊಲಿಯುತ
ಲಂದಮಾದಾ ಹೊನ್ನನೆಡೆಬಿಡದವ ವಿಮೋಹದಲಿ
ಮುಂದರಿಯುನವನಂತೆ ನಡೆನುಡಿ
ಯೊಂದುಗೂಡಿಸದವನು ಮರಣಕೆ
ಸಂದಿರುವನದರಿಂದ ಸದ್ಗತಿ ದೊರೆಯದವಗೆಂದ ೧೬

ವಾದ ವಂಚನೆ ಕಪಟದಿಂ ಸಂ
ಪಾದಿಸಿದ ಧನದಿಂದ ಜಂಗಮ
ಪಾದಪೂಜೆಯನೆಸಗಲಾವ ಪರಿಯಶಿವಾಚಾರ
ಮೇದಿನಿಯಲಾ ನಡೆನುಡಿಯದೊಂ
ದಾದ ಪರಿಯಿರೆ ಪರಮನೇ ತಾ
ನಾದಸನು ನೋಡದು ಸದಾಚಾರಾಂಕ ಕೇಳೆಂದ ೧೭

ಧರೆಯ ನಂಬಿದ ಕೌರವನು ತಾ
ನಿರುವನೇ ಬಂಗಾರ ಮೆಚ್ಚಿದ
ನರಪತಿಯರುಳಿದಿಹರೆ ನಾರೀಮಣಿಯ ಬಯಸಿರುವ
ಸುರಪ ಕೀಚಕ ದಶಶಿರರು ತಾ
ವಿರುವರೇ ಮೂರಿವನು ನಂಬಿದ
ನರರಿಗಿಹುದಾ ಘೋರನರಕವು ಯಮನಪುರದೊಳಗೆ ೧೮

ಒಟ್ಟುತಲಿ ನೆರೆದಷ್ಟಮದಗಳ
ಸುಟ್ಟಿರದೆ ಕಾಮಾದಿಗಳ ನೆರೆ
ಬಟ್ಟಬಯಲಿನ ತುಟ್ಟತುದಿಯೊಣ ಮಾತಿಗೆಡೆಗೊಡದೆ
ಗುಟ್ಟನಿಂ ನಡೆನುಡಿಯು ನೀವಿಂ
ದೊಟ್ಟುಗೂಡಿಪ ಬಟ್ಟೆಯೊಳಗಾ
ಸುಟ್ಟರಿವೆಯಂತಿರುವುದೀ ಕಲಿಮಹಿಮೆಯೊಳಗೆಂದ ೨೦

ಇಂತೊರೆಯೆ ಗುರುನಾಥನಖಿಳರ
ನಂತ ವಿಧದಿಂ ಪಾಡಿ ಪೊಗಳುತ
ನಂತಧರ ಸನ್ಮಂತ್ರಪಠನೆಯಲಿರಲು ಭಕ್ತಿಯೊಳು
ಸಂತಸದಲಂದವರ ಹರಸುತ
ಸಂತವಿಸಿ ಶಿವಯೋಗಮಂದಿರ
ದಂತರದಿ ಲಿಂಗಾಂಗಸಮರಸಭಾವದಿಂದೆಸೆದ ೨೧

ಚಂದದಿಂದಲಿ ಮಲ್ಲಿಕಾಸುಮ
ವೃಂದಮುಡುಗಣದಂತೆಸೆಯಲಾ
ನಂದಮಾ ಪರಪುಟ್ಟಕಡಗಲ್ಕನಲನತಿಶಯವು
ಸಂದಿರಲುಮರವಿಂದ ತಾ ಕಳೆ
ಗುಂದಿರಲು ಹಿಮವಾವರಿಸಲ್ಕೆ
ತುಂಡುದಾ ಹೈಮಾಗಮುವದೊಲವಿಂದಲವನಿಯಲಿ ೨೨

ತರಣಿಯಿರಲಾ ಕುಂಭಮಾಸದಿ
ಮೆರೆದ ಹೈಮಾಗಮುವನುಳಿದಾ
ದರದಿ ಗಂಗಾಧರಯತೀಶಂಗಿರದೆ ಗರಪ್ರರಿಯ
ಹಿರಿಯಮಠದೊಳು ಪಟ್ಟಗಟ್ಟುತೆ
ಬರೆಯುತಂದಾ ವಚನಶಾಸ್ತ್ರವ
ಗುರುವು ತಾ ಘನಲಿಂಗಿಯೆಸೆದನು ಲಿಂಗಸಮರಸದಿ ೨೩

ಅಂದಿನಾ ದಿನ ತೋಂಟದಾರ್ಯನು
ಬಂದು ಸೂಕ್ಷ್ಮದಿ ನಿಂದು ಯೋಗಾ
ನಂದಿ ಕಗ್ಗೆರೆಯೆಡೆಗೆ ನೀ ಬಾರೆಂದು ಹರಸುತಲಿ
ಮುಂದಿನುರುಪರಿಕರವ ಸರಿಪಡಿ
ಸಂದೊರೆದು ಮೈಗರೆಯಲಂದೊಲ
ವಿಂದ ತಾನಂದದ್ದು ಜಂಗಮಮೂರ್ತಿಯನು ನೆನೆದು ೨೪

ನಡೆನುಡಿಯನೊಡಗೂಡಿಸುತಲಂ
ದೊಡೆಯ ಲಿಂಗಾನಂದ ವೈಭವ
ದೊಡನಿರಲು ಶಿವರಾತ್ರಿಗುರುವೈತರುತಲಂದಿನಲೆ
ಒಡನೆ ಬರುವನು ಪರಮಶರಣನು
ಸಡಗರದಿ ನೀ ಪಟ್ಟಕಟ್ಟುತ
ಪೊಡವಿಯಲಿ ಸುತ್ತೂರ ಸಿಂಹಾಸನವನಾಳೆನುತೆ ೨೫

ಮರೆಯು ತಾನೊಂದಲ್ಕೆ ಗುರು ಕ
ಣ್ದೆರೆಯುತಾ ಶಿವರಾತ್ರಿದೇವನ
ಬರವ ನಿರುಕಿಸೆ ಬಂದನಾ ಘನಲಿಂಗಿ ಪುರಕಂದೆ
ಇರಲಿರಲು ಕೆಲದೆವಸದಲಿ ಸಂ
ಚರಿಸುತಂದಾ ಶರಣನೊಬ್ಬನು
ಹರಿಸದಿಂದೈತಂದನಿರದಾವರಣಪುರಮಠಕೆ ೨೬

ಬರುತ ಗುರು ಘನಲಿಂಗಿದೇವನ
ಚರಣಕಭಿವಂದಿಸಲು ತಾನಂ
ದುರುತರಾಶೀರ್ವಾದಮದನುರೆ ಗೆಯ್ಯುತೊಲವಿಂದ
ಸರಸದಿಂ ಶಿವರಾತ್ರಿಗುರುವಿನ
ಚರಣಕಮಲದ ಕರುಣವನು ಪಡೆ
ದಿರುತಲಾ ಸಿದ್ಧಾಂತಸಾರವ ಪಸರಿಸುವುದೆಂದ ೨೭

ಸಾನುನಯಗುಣಪೂರವರ ಸಂ
ಮಾನಿತದ ಸಿಂಹಾಸನದ ಘನ
ಕೇನು ಕುಂದಕಬಾರದಂತುಜ್ಜುಗಿಸು ಕಜ್ಜಗಳ
ನೀನೆಸಗಿರುವ ಪುಣ್ಯಫಲಕನು
ಮಾನವೇ ಬಾಚಾರ ಸುಚರಿಚಿರ
ದೀನಭಕ್ತದಯಾಳು ನೀ ಬಾರೆಂದ ಗುರುನಾಥ ೨೮

ಮೆರೆದು ತುರುಗಿದ ಚರ ವಿತಾನದ
ಲಿರುವ ಶಿವರಾತ್ರೀಶನತುಳಿತ
ಶಿರದಿ ಕರವಿಡುತಂದು ವರನಂಜಾರ್ಯ ಕರಜಾತ
ಹರಸುತಾತಗೆ ಪಟ್ಟಕಟ್ಟುತ
ಹರಪದವನನುಸರಿಸೆನುತ ತಾ
ತೆರಳಿದನು ಘನಲಿಂಗಿಯೊಡೆಯನು ಸಿದ್ಧಯತಿಯೆಡೆಗೆ ೨೯

ನಾರದಾದಿಮುನೀಂದ್ರಪಾಲಿನಿ
ಸಾರತರಪದವೀ ಪ್ರದಾಯಿನಿ
ಮಾರಹರ ಸಂತೋಷಕಾರಿಣಿ ಗಿರಿಜೆ ಲಲಿತಾಂಗಿ
ಕ್ರೂರದೈತ್ಯ ವಿನಾಶಕಾರಿಣಿ
ವೀರಶೈವಮತಾಭಿವರ್ಧಿನಿ
ಚಾರುತರೆ ಕಾಪಾಡು ಚಾಮುಂಡಾಂಬೆ ನೀನೆಳೆಯ ೩೦

# ಶಿವರಾತ್ರೀಶ ಕಥನಂ

ವೇದರತ ಶಿವರಾತ್ರಿದೇವನು
ಮೋದದಿಂದುಸುರುತ್ತೆ ಥರ್ವರ್ಣವ
ಮೇದಿನಿಯ ಸುತತ್ತೂರಸಿಂಹಾಸನದಿ ರಾಜಿಸಿದ

ಶ್ರೀದಯಾಂಬುಧಿ ವರದ ಸುರನತ
ಪಾದಪಂಕೇರುಹ ಗಣೈಕವಿ
ನೋದ ಸರ್ವಾಶ್ರಯ ಭವಾಮಯ ಹರಣ ಶರಣಹಿತ
ನಾದಮಯ ಕೈಲಾಸವಾಸ ಕ
ಣಾದ ನಾರದಮುಖ ವಿನುತ ಮಧು
ಸೂದನಾಪ್ತ ಮಹೇಶ ಕುಡು ಸೋಮೇಶ ಶುಭತತಿಯ ೧

ಆಲಿಸಿನ್ನೆಲೆ ಸಿದ್ಧಲಿಂಗನೆ
ಶೂಲಿಭಕ್ತ ಭುಜಂಗರಾಜಗೆ
ಮೇಲೆನಿಸೆ ಬೋಧಿಸುತಲಂದಾ ಪಾಶುಪತಮತವ
ಶೀಲಗುಣದಿಂದೆಸೆದ ಸುಗುಣಾ
ಲೋಲ ಶಿವರಾತ್ರೀಶ ಕಥನದ
ಲೀಲೆಯನು ನಾನೊರೆವೆನೆಂದೆಸೆದಿರ್ದ ಗುರುನಾಥ ೨

ಪರಿಲಸಿತ ಶಿವಗಣದಿ ಘನದಿಂ
ದರಿವ ಕುರುಹಿನ ಜನದಿ ಮನದಿಂ
ದರಿದು ಹರನಿಂ ಪದವನೊಂದುವ ಜಪದಿತಪದಿ ಸಲೆ
ಮೆರೆವ ಯತಿಯಿಂ ಮಾಳ್ಪ ನುತಿಯಿಂ
ಪರಮ ವರದಿಂದಿರುವ ಗುರುವಿಂ
ನೆರೆಯುತಂದಾವರಣಪುರ ರಂಜಿಸಿತು ಧಾತ್ರಿಯಲಿ ೩

ಕದಿವ ಪರಧನ ಪರಸತಿಯರನು
ಕದಿವ ಪರ ಭೂಧಾನ್ಯರಾಶಿಯ
ಕದಿವ ಭೂಜನಮಂದಿರಾಂಬರ ಭೂಷಣಾವಳಿಯ
ಕದಿವ ಮೋಸದ ಗುಣದಿ ಬಿಜ್ಜಳ
ಕದಿವನಾ ಪ್ರಭುವರನ ಪಣವನು ೪
ಕದಿವರೆಂಬರನರಿಯೆ ನಾನಾವರಣಪುರದೊಳಗೆ

ದುರಿತನಿಚಯಧ್ವಾಂತ ಭಾಸ್ಕರ
ಪರಮಗತಿಕುವಲಯಾ ಸುಧಾಕರ
ಸುರುಚಿರಾವಳಿತನು ವಿಶಾರದ ಭಕ್ತಮಂದಾರ
ಶರಣ ಲೋಕಪ್ರೇಮಿ ಭೂನುತ
ಗುರುಕುಲಾಶ್ರಯ ಸಾಧು ಸೇವಿತ
ಮೆರೆದನಾ ಶಿವರಾತ್ರಿಗುರುವರ ಸಿಂಹಪೀಠದಲಿ ೫

ವೇದಪಾಠಕರವರದೊಂದೆಡೆ
ವಾದಕುಶಲ ವಿತಾನವೊಂದೆಡೆ
ಭೇದಭಾವವ ತೊರೆವರೊಂದೆಡೆ ಸಾರಮತರಂತು
ನಾದವಿದ್ಯಾಧರರದೊಂದೆಡೆ
ಯಾ ದಯಾಮಯ ಹೃದಯರೊಂದೆಡೆ
ಸಾದರದಲೊಪ್ಪಿರ್ದರಾ ಗುರುವರನ ಬಳಸಿನಲಿ ೬

ಹಿಂದಿನಾ ಶಿವರಾತ್ರಿಗುರುವೈ
ತಂದನಿದೊ ತಾ ಪರಮಶರಣರ
ವೃಂದವನು ಪೊರೆಯಲ್ಕೆನುತಲಾ ಭಕ್ತಸಂದೋಹ
ಚಂದದಿಂ ವಂದಿಸುತೆ ಬೊಮ್ಮವ
ನಿಂದೊಳೆಣಿಸುತ್ತುದ್ಧರಿಸುವುದು ನೀ
ನೆಂದೆನಲು ಬೋಧಿಸಿದ ಶಿಷ್ಯನಿಗಂದು ಗುರುನಾಥ ೭

ಕಲೆಯನರಿಯದ ನರನ ವಿಭುವಿನ
ನೆಲೆಯನರಿಯದ ಭಟನ ಶ್ರುತಿಸಂ
ಕುಲವನರಿಯದ ಮೂಢನನು ಗತಿಗುಣದಿಹ ಸತಿಯ
ಕುಲವನರಿಯದ ನೆಂಟರನು ಪರ
ಬಲವನರಿಯದ ದಳಪತಿಯ ಗುರು
ಕುಲವನರಿಯದ ಶಿಷ್ಯನನು ಮೆಚ್ಚಿಸುವರಾರೆಂದ ೮

ಬಂದೆಡರ ಪರಿಹರಿಸಿಕೊಳೆ ಸಿರಿ
ಯೊಂದೆ ನಿಲೆ ನಿಂದೆಯದಿರದೆ ತಾ
ನೆಂದು ಗುಣದಿಂದೆಸೆಯೆ ಬಂಧುಪ್ರಸರದಲಿ ಜಸವ
ಚಂದದಿಂದುರೆ ಬೆರೆಯೆ ಸಂಸೃತಿ
ಯಿಂದ ತೊಲಗುತೆ ಮೆರೆಯೆ ಶಿವಕೃಪೆ
ಯೊಂದಿರಲುಬೇಕೆನುತ ಪೇಳಿದನಂದು ಗುರುನಾಥ ೯

ಅತಿಹಿತೋಕ್ತಿಯನೊರೆಯಲರಿಯದ
ಮತಿವಿಹೀನನ ಸಂಗವೆಸೆಯದು
ಮಿತವಚನಿಯಲ್ಲದನ ಸಂತತ ವಾದದಿಂದಿಹನ
ಮತವನನುಸರಿಸದನ ದುರ್ಗತಿ
ಗತಿ ಜವದೆ ನಡೆವವನ ವರಪಶು
ಪತಿಯ ನುತಿಸದ ಪಶುವ ತೊರೆವುದು ಕೇಳಿ ನೀವೆಂದ ೧೦

ಹರನ ನಾಮವೆ ಸುರರ ತರು ಪುರ
ಹರನ ನಾಮವೆ ಸುರರ ಧೇನುವು
ಹರನ ನಾಮವೆ ದುರಿತವನದಾವಾನಲವು ನೋಡೆ
ಹರನ ನಾಮವೆ ಪರುಷವಾ ಮಲ
ಹರನ ನಾಮವೆ ಸುಧೆಯು ಭವಸಂ
ಹರನ ನಾಮವೆ ನಡೆಯನುಡಿಯನು ಕೊಡುವ ಸತ್ಪಥವು ೧೧

ಗುರುವರನು ತಾನಿಂತುಸುರಿ ಸ
ರ್ವರನು ಹರಸುತೆ ಸಂತವಿಸಿ ಪುರ
ಹರನ ಪೂಜಾತುರದೆ ತೆರಳಿದ ಯೋಗಮಂದಿರಕೆ
ಭರದಲಂದಾ ಪಂಚವಾದ್ಯಗ
ಳಿರದೆ ಮೊರೆದವು ವೇದಘೋಷವು
ನೆರೆದುದಂದಾ ಲಿಂಗಪೂಜಾಸಮಯವೊದಗಿರಲು ೧೨

ಒಂದು ನಿಶೆಯೊಳು ಕನಸಿನೊಳಗೈ
ತಂದು ರೇವಣಸಿದ್ಧ ಯೋಗಾ
ನಂದದಿಂದಿಹಗೊರೆದ ಪರಮಾನಂದ ಮನದಿಂದ
ಮುಂದೆ ನೀ ಸುತ್ತೂರಪೀಠವ
ಮುಂದುವರಿಸುವುದೆನುತೊರೆದು ನಲ
ವಿಂದ ವರಶಿವಮತವನುದ್ಧರಿಸೆನುತಲಾಚಾರ್ಯ ೧೩

ವಾರಿವಾಹದಲೊಸೆದ ಮಿಂಚಿನ
ಪಾರಹೊಳಪಡಗುವವೊಲಂದಾ
ಸಾರತರ ಗುರುವರ್ಯ ತಾ ಮೈಗರೆಯಲಾಕ್ಷಣವೆ
ಧೀರ ಯಮಿವರ ಕಣ್ದೆರದು ಪರಿ
ಪಾರಕೊರೆಯುತುದಾರಗುಣ ಸಂ
ಚಾರ ಪೊರಡಲ್ಕನುಗೊಳಿಸಲನಿತರಲೆ ರೇಣುಕನ ೧೪

ಪರಮಯಾತ್ರೆಯು ಗೈದು ಸದ್ಗುರು
ವರನನುಜ್ಞೆಯನೊಂದಿ ಪರಿಕರ
ಪೆರಸಿ ಬಿರುದಾವಳಿಗಳಿಂ ಕಹಳಾರವಮದೆಸೆಯೆ
ಬರುತ ತಾನೊಂದೊಂದು ಪುರ ಬಾ
ಹಿರದಲೆಸಗಿದ ಮಂಟಪದ ಬಳಿ
ಇರುತ ಮನ್ನಣೆಯಿಂದಲೊಳಪುಗುತೆಸೆದನಾಚಾರ್ಯ ೧೫

ಮನವದೆಂಬುವ ಭೂಮಿಯನು ಸಮ
ನೆನಿಸಿ ಹಸನನು ಮಾಡಿಕೊಳುತಲಿ
ಯನಘ ಕರುಣಾರಸದ ವೃಷ್ಟಿಯು ಸುರಿವ ಸಮಯದಲಿ
ಅನುಪಮಿತ ಶಿವಮಂತ್ರ ಬೀಜವ
ನನುವಿನಿಂದೆರಚಲ್ಕೆ ಬಂದಿಹ
ನೆನುವುದೆನೆ ಕಹಳೆಯು ನಿನಾದವಮದೆಸೆದುದಂದಿನಲಿ ೧೬

ಬಂದಿಳಿಯೆ ತಾನಂದು ಗುರುವರ
ನೊಂದು ಸುಂದರ ಭವನದೊಳಗೈ
ತಂದುದಾ ಕವಿ ಗಮಕಿ ವಾಗ್ಮಿ ಸುಭಕ್ತಸಮುದಾಯ
ಇಂದುಧರನಪರಾವತಾರನೆ
ಬಂದೆ ನೀನುದ್ಧರಿಸೆ ಮತವಿದು
ನೆಂದೆರಗಿ ಬಿನ್ನವಿಸಿದರು ಮನದಿರವ ವಿನಯದಲಿ ೧೭

ಚಾರುತರ ಶೃಂಗಾರೆಯರು ಗಂ
ಭೀರ ಸುಗುಣಾಗಾರೆಯರು ಸುವಿ
ಚಾರಪರ ನಾರಿಯರು ಭಸ್ಮಲಲಾಟೆಯರು ನೆರೆದು
ಆರತಿಗಳನು ಪಿಡಿದು ಮುದದಿಂ
ಮಾರಹರಮಂಗಳವನೇಕವ
ನೀರಜಾಕ್ಷಿಯರೊಂದುಗೂಡುತ ಪಾಡಿ ಬೆಳಗಿದರು ೧೮

ಯೋಗಿನಿಚಯಮುದ್ಯೈದಿತಂದನು
ರಾಗದಿಂದವಲೋಕಿಸಲು ಶಿವ
ಯೋಗಿಯಹ ಶಿವರಾತ್ರಿದೇವನ ಭಾವದಿತರಣೆಯು
ಬೇಗದಿಂದೂರೂರ ಜನರು ಸ
ರಾಗದಿಂದುರೆ ಬಂದು ದರ್ಶನ
ವಾಗಲಂದಭಿವಂದಿಸುತಲೆಸೆದಿರದೆ ನುತಿಸಿದರು ೧೯

ಪಾಲ ಕುಡಿಯದ ಬಾಲನೋರ್ವನು
ಲೀಲೆಯಿಂದಾಡದೆಯೆ ತಾ ಯವು
ನಾಲಯವನುರೆ ಪ್ರಗುವಶಮಯದಲಂದವನ ಜನಕ
ಪಾಲಿಸಿವನನೆನುತ್ತ ಕರುಣಾ
ಲೋಲನೆಡೆಗೈತಂದು ಮಲಗಿಸೆ
ಶೂಲಧರ ಪೊರೆಯೆನುತೆ ಭಸಿತವಧರಿಸೆ ಗುರುನಾಥ ೨೦

ಬಾಲನಂದುಸಿರಾಡುತೇಳಲು
ಪಾಲ ಮಂತ್ರಿಸುತೀಯೆ ಚರಪತಿ
ಲೀಲೆಯಿಂ ತಡೆಯಿಲ್ಲದಲೆ ಕುಡಿಯಲ್ಕೆ ತಡವರಿಸಿ
ಆಲಯಕೆ ಕರೆದೊಯ್ಯುವೆಂದಾ
ಪಾಲಕಂಗೊರೆಯಲ್ಕವನು ಗುಣ
ಶೀಲ ಗುರುವರನಾಜ್ಞೆಯಂತೆಯೆ ಕೊಂಡು ತಾ ನಡೆದ ೨೧

ಅಂದಿನಚ್ಚರಿಯಿಂದ ಪುರಪುರ
ದಿಂದ ಜನರೈತಂದು ದಯವಾ
ಡೆಂದು ನಿಜಪುರಕೆಂದು ಬಿನ್ನವಿಸುತಿರೆ ಗುರುವರ್ಯ
ಚಂದದಿಂ ಬಹೆನೆಂದವರ ದಯೆ
ಯಿಂದ ಸಂತವಿಸುತೆ ಸುಯೋಗಾ
ನಂದಿ ಭಕ್ತರಿಗೊರೆದನಾ ಶಿವತತ್ತ್ವಮಾರ್ಗವನು ೨೨

ಪರರ ಹೆಣ್ಣನೆ ಬಯುಸದಿರುವವ
ಪರರ ಮಣ್ಣನೆ ನೆನೆಸದಿರುವವ
ಪರರ ಹೊನ್ನದನೆಳಸದಿರುತಿಹ ಪರಶಿವನ ಭಕ್ತ
ಧರೆಯುಲವನೇ ವೀರನೆಂಬವ
ಪರನು ಬೇರಿಲ್ಲವನಿಗಿಂತನು
ಪರಿಕಿಸಲ್ಕವ ವೀರಶೈವಾಭಿದನು ಕೇಳೆಂದ ೨೩

ಇಂತೆನಿಪ ವರವೀರಶೈವನು
ಸಂತಸದಲಷ್ಟಾವರಣಗಳ
ಕಂತುಹರ ದಯದಿಂದಲೊಂದುತನಂತಮತಗಳನು
ಚಿಂತಿಸದೆ ಮಾನಸದಿ ಗುರವನ
ನಂತ ವಿಧದಿಂ ಸೇವಿಸುತೆ ನಿ
ಶ್ಚಿಂತನೆನಿಸುತಲಂಗಲಿಂಗದ ಸಮರಸದಿ ಮೆರೆಯೆ ೨೪

ಹರಿವುದಂದಾ ಭವದ ಬಂಧನ
ಹರಿವುದಾಧಿಯು ಬೇಗ ಚಿತ್ತದಿ
ಹರಿವುದಂದಾ ವ್ಯಾಧಿಪಾಶವಿತಾನ ಕಾಯದಲಿ
ಮೆರೆವುದಂದಾ ಮನವೆ ಶುದ್ಧದ
ಬೆರಸಿ ಜಗವನು ಮರೆದು ಪರಮನ
ಲಿಹುತಿರುವುದೇಕತ್ವದಲಿ ಲಿಂಗಾಂಗಸಂಯೋಗ ೨೫

ಗುರುವಿನಾಜ್ಞೆಯನಾನುತಪ್ಪಾ
ವರಣದಲಿ ತಾ ನಿಷ್ಠನೆನಿಪನೆ
ಧರಣಿಯಲಿ ನೆರೆ ವೀರಶೈವೋತ್ಕೃಷ್ಟನೆನಿಸುವನು
ಒರವೆ ನಾನಿದರಂತರಂಗವ
ನಿರದೆ ಲಾಲಿಪುದೆನುತೆ ಯಮಿವರ
ಸರಸದಿಂ ನಡೆನುಡಿಯ ಕೂಡಿಸಿರೆಂದನಾಚಾರ್ಯ ೨೬

ಗುರುವನಾ ಲಿಂಗವನು ಜಂಗಮ
ನಿರುವ ಭಸ್ಮವನಕ್ಷಮಾಲೆಯ
ಪರಮ ತೀರ್ಥಪ್ರಸಾದ ಮಂತ್ರವನೆಂಟನುರೆ ಬೆರೆದು
ಮೆರೆವ ಪಂಚಾಚಾರದಲಿ ತಾ
ನಿರತನಾದವ ವೀರಶೈವನು
ಮರೆಯದಿವ ಪಾಲಿಸಿರಿ ನೀವೆಂದೊರೆದ ಗುರುನಾಥ ೨೭

ಇದುವಲಾ ಭೂತೇಶಬೋಧಿತ
ಸದಮಲಾದ್ಭುತ ಮತವು ಲೋಕದಿ
ಸದರವಲ್ಲವು ದುಷ್ಟನರರಿಗೆ ಪಾಪಲೇಪಲಿಗೆ
ಪದಪಿನಿಂ ಪರಿಶುದ್ಧರಾದವ
ರಿದನು ಕೈಕೊಂಡಿರುತೆ ಮುಕ್ತಿಯ
ಪದವನನುಸರಿಸುತ್ತ ಬಂಧವಕಳೆವರವರೆಂದ ೨೮

ಬಣ್ಣಗೆಟ್ಟವರೆಲ್ಲ ಭುವನದಿ
ಹೆಣ್ಣುಹೊನ್ನುಗಳಿಂದ ಕೆಡುತಲಿ
ಮಣ್ಣಕೂಡುತಲಿಹರು ಫಲವಗೆ ಕಾಡುಹರಟೆಯಲಿ
ಕಣ್ಣುಕಾಣದ ಕುರುಡರಾಗಿರು
ವಣ್ಣರೆಲ್ಲರ ಕಂಡು ಹೇಸುತ
ಕಣ್ಣುಮೂರುಳ್ಳವನ ದಯವಂ ಪಡೆವುದಿರದೆಂದ ೨೯

ಮತವು ಸರ್ವರಮತವು ಜಗದೊಳು
ಮತವು ಸರ್ವರಹಿತವು ಯೋಚಿಸೆ
ಮತವು ಮೋಕ್ಷಪ್ರದವು ಲೋಕತ್ರಯಕೆ ಸತ್ಯವಿದು
ಮತವು ನಡೆನುಡಿಯೆರಕವಾದುದೆ
ಮತವು ಸುಳ್ಳನು ತಳ್ಳಿಬಿಡುವುದು
ಮತವು ಹೆಣ್ಣನು ಬಿಟ್ಟು ಹೊನ್ನನು ತೊರೆದುಬಿಡುತಿಹುದು ೩೦

ಗುರುವರನು ತಾನಿಂತೊರೆದು ಭ
ಕ್ತರನು ಸಲಹುತ ಹರಸಿ ಕಾಣ್ಕೆಯ
ನಿರದೆ ಕೈಗೊಂಡುರು ಭರದೆ ಮುಂದರಿಸಿ ಪಯಣವನು
ಭರದಿಬರುತೊಂದೂರಿಗಾ ಶಿವ
ಶರಣರನುಭವಮಂಟಪದೆ ತಾನಿಳಿ
ದಿರುತ ಮುದದಿಂದೆಸೆದ ಶಿವರಾತ್ರೀಶ ಭವನಾಶ ೩೧

ಗುರುವು ಶಾಖಾಮಠವಿಚಾರವ
ಪರಿಕಿಸಲು ತಾನಿದೊ ಬರುವನೆಂ
ದರುಪಲಂದಾ ಕಹಳೆ ಪೇಳುವುದೆನೆ ವಿಶೇಷದಲಿ
ಪುರಪುರದಿ ದನಿಯಿಂದೆಸೆಯಲಂ
ದುರುತರದ ಸಿಂಗರದ ಸೊಬಗನು
ಪುರಹರನು ತಾ ಬಲ್ಲನೆಂದುದು ಭಕ್ತಸಂದೋಹ ೩೨

ಪರಿಕರವನೆರಸುತೆ ವಿಲಾಸದಿ
ಪೊರಮಡುತೆ ಶಿವರಾತ್ರಿದೇವನು
ಹರಿಸದಿಂದೈತಂದನಂದಾ ಗ್ರಾಮವಿರಲದಕೆ
ನೆರೆದ ಪುರಜನ ಯತಿವರನ ಪದ
ಕೆರಗುತಾಂದೋಳದಲಿ ನೆರೆ ಕು
ಳ್ಳಿರಿಸುತಲಿ ಮೆರೆಯಿಸಿದರಂದಾ ಬೀದಿಬೀದಿಯಲಿ ೩೩

ಮುಗಿಯಲುತ್ಸವವಂದೆ ಗಗನದಿ
ಮುಗಿಲುಗಳು ಪರಿದಾಡುತಿರಲಾ
ನಗೆಮೊಗದಿ ಜನರೊಗುಮಿಗೆದು ಸಂತಸದಿ ಹಿಗ್ಗುತಿರೆ
ಅಗಜೆಯರಸನ ರೂಪ ಪೊಳಲನೆ
ಪುಗಲು ಮೇಘದಮಳೆಯದಂದೇ
ಜಗದೊಳಗೆ ಮುಗಿಲಿಂದ ಸುರಿದುದು ಸರ್ವಹಿತದಿಂದ ೩೪

ಎಂಡುಮಿಲ್ಲದೆ ವೃಷ್ಟಿ ತಾ ಬಲು
ಕುಂದು ಕೊರತೆಯನಿತ್ತು ಬಾಧಿಸೆ
ನೊಂದು ನಮ್ಮೆಲ್ಲರನು ಸಲಹಲ್ಕೆಂದು ಗುರುದೇವ
ಬಂದು ಸುರಿಸಿದನೀ ಮಳೆಯು ನವ
ಸಂದುಸಿರಿ ಕರತಾಡನದಿ ಜಯ
ಮದೆನುತೆ ತೆರಳಿದರು ತಾವಂದೊಲಿದು ಮಂದಿರಕೆ ೩೫

ಅನಿತರೊಳಗಿನನುದಯವಾಗಲು
ವನಜತತಿಯಂದರಳೆ ಖಗಕುಲ
ನಿನದದಿಂ ದೆಸೆದೆಸೆಗೆ ತೆರಳಲು ಕೃಷಿಕರೊಲವಿಂದೆ
ಜನಿತ ಸಂತೋಷದಲಿ ಭೂಮಿಯು
ನನದಿರುವ ಪರಿಯರಿಯೆ ಬರಲಾ
ಜನಕದೊಂದತಿಶಯವು ಕಂಡುದು ಕಳೆಯೆ ಕಾಲವದು ೩೬

ಘೋರ ಸರ್ಪಗಳಿರದೆ ಕಚ್ಚಿದ
ನೂರಹದಿನಾರಾದ ಜನರನು
ಸಾರಭಸ್ಮವನಿತ್ತು ಬದುಕಿಸಿ ಪೊರೆದ ಗುರುನಾಥ
ಆರುಬಲ್ಲರು ಶಿವನ ಶರಣರ
ಭೂರಿಮಹಿಮೆಯಂ ದೇಶದೇಶದಿ
ಸಾರುತಿರುವುದು ಲೋಕವೆಲ್ಲವು ಭಯದ ಭಕ್ತಿಯಲಿ ೩೭

ಅಂದು ರುಜೆಯಡರುತ್ತೆ ಮೇಕೆಯ
ವೃಂದ ಮೇವನು ಮೇಯುದೆಯೆ ಸಾ
ಏಂದ ಬೆರದಿರೆ ಬಂದರಾಗಲೆ ಜನರು ಗುರುವೆಡೆಗೆ
ನೊಂದು ಹದನನು ಪೇಳಿದರು ಲಸ
ದಿಂದುಧರರೂಪನಲಿ ಚರವರ
ಬಂದು ಭಸಿತವನಿತ್ತು ಸಲಹಿದನಜವಿತಾನವನು ೩೮

ಗುರುವು ಎರಗಂಬಳ್ಳಿಯೆಡೆಯೊಳು
ಬರುತಿರಲು ಪುಲಿಯೊಂದು ರೇಗುತೆ
ಮೊರೆದು ಮುಂದೈತರಲು ಹಸ್ತದ ಸನ್ನೆಯಿಂ ನಿಲಿಸಿ
ಕರದ ನಡೆಯೆನೆ ಏರಿ ಪಾರುತೆ
ಸರಿದು ಚಂಪಕವನವ ಸೇರಿತು
ಹರನ ಶರಣರ ಪರಮಮಹಿಮೆಯ ಬಲ್ಲರಾರೆಂದ ೩೯

ಉರುತರದ ರುಜೆಯಿಂದ ಸಾವನು
ಬರೆದು ಬಿದ್ದಿರುವಷ್ಟು ಜನರನು
ಪೊರೆದು ಬದುಕಿಸಬೇಕು ನೀನೆನುತೊರೆದ ಭಕ್ತರನು
ಕರೆದು ಭಸಿತವನಿತ್ತು ಕಳುಹಲು
ಭರದಲವರ್ಕೈದುತ್ತ ಧರಿಸಲು
ಹರಿದು ರೋಗವು ಗುರುವ ನುತಿಸುತ ಸೊಗದೆ ಬಾಳಿದರು ೪೦

ಹರನ ಬೆರೆದಿಹ ಶರಣರನು ಜಗ
ವರಿದು ಪೊಗಳುತಲಿಹುದು ನರರದ
ನರಿಯುರದನೇನೆಂಬೆ ಪಾಪದ ಘೋರಲಕ್ಷಣವ
ಉರುತರದ ರುಜೆಯಿಂದ ಬೆರೆಯುತ
ಮರಣವನು ಪೊಂದಿರ್ದ ಶಿಶುವನು
ಪೊರೆದ ಭಸಿತವನಿತ್ತು ಶಿವರಾತ್ರೀಶ ಶರಣೇಶ ೪೧

ಗುರುವರನ ಗದ್ದುಗೆಯ ಪೂಜಾ
ತುರದೆ ಕಾರ್ಯವ ನೆನೆದು ಮನದಲಿ
ಪುರವನದನುಳಿದಂದು ಭಕ್ತರಿಗೊರೆದು ಮುಂದಣದ
ಪರಿಯನುರೆ ಪೇಳುತ್ತೆ ತಾ ಸಲ
ಕರಣೆಯಿಂ ಪೊರಮಡುತಲಂದಾ
ವರಣಪುರಕೈತಂದು ಪೊಕ್ಕನು ಮಠವನಾಚಾರ್ಯ ೪೨

ಇರುತಿರುತ ಕೆಲದೆವಸಗಳೆಯು
ಲ್ಕುರುತರದ ಗದ್ದುಗೆಯ ಪೂಜಾ
ಚರಣಸಮಯಮದೊದಗೆ ಗುರುವರನಂದು ಚಿಂತಿಸುತೆ
ಕರೆಯಿಸಲು ಭಕ್ತಾದಿಗಳನಾ
ದರದಲಾಶೀರ್ವಾದ ಪತ್ರವ
ಬರೆಯಿಸಿದ ಸುತ್ತೂರ ಪೀಠಾಚಾರ್ಯ ಚರವರ್ಯ ೪೩

ಆನಿತರಲೆ ಗುರುಭಕ್ತರೆಲ್ಲರು
ಮನಿಬರೊಡಗೂಡುತಲಿ ವಿಲಾಸದಿ
ಘನಗುರುವಿನಾರಾಧನೆಯನೆಸಗಲ್ಕೆ ಜವದಿಂದ
ಎನಿತೆನಿತು ಸಾಮಗ್ರಿಗಳು ಕೇ
ಳನಿತನಿತ ಸಾಗಿಸುತ ಬರುತಿರೆ ೪೪
ಜನಪನನುಚರರಂದೆ ತಡೆದರು ರಾಜಮಾರ್ಗದಲಿ

ಜನಪನಾಜ್ಞಿದು ಗಣನೆವಾಡದೆ
ಧನದಲೋಭವೆ ಬೆರೆದು ಬೇಗದೊ
ಳನಯಚಿತ್ರರು ಕೂಡಿ ಕೂಗಾಡುತ್ತ ನಿಂದಿರುತೆ
ಮನದೆ ಖತಿಗೊಂಡಂದು ಸುಂಕದ
ಜನರು ದೂಷಿಸಿ ಕೆಟ್ಟನುಡಿಯುಲಿ
ಘನವ ಕೆಡಿಸುತಲಿರ್ದರಂದಾ ಯೋಗಿಯಾತ್ರಿಕರ ೪೫

ಗುರುವನುಜ್ಞೆಯನಾಂತು ನಾವೈ
ತರುತಿಹೆವು ತಡೆವಾಡಬೇಡಿರಿ
ಚರಗಣಾರಾಧನೆಗೆ ಕುಂದಕಬರುವುದದರಿಂದ
ದುರಿತಗಿರಿಯದನೇರುವಿರಿ ಬಹು
ನರಕಯಾತನೆಯಿಂದ ಕೆಡುವಿರಿ
ಬೆರೆಯುವಿರಿ ಯಮನಾಲಯವನೆಂದನಿಬರುಸಿರುತಿರೆ ೪೬

ಎಲ್ಲಿ ಗುರುವರನೆಲ್ಲಿ ಚರವರ
ನೆಲ್ಲಿ ಯಮಿವರನೆಲ್ಲಿ ಭಕ್ತರ
ನಲ್ಲನೆಂಬವನೆಲ್ಲಿಯಾರಾಧನೆಯ ಸಂಪದವು
ಎಲ್ಲಿಯವರಾಗಿರಲಿ ಸುಂಕವ
ನಿಲ್ಲೆ ಕೊಟ್ಟಲ್ಲದೆಯೆ ಬಿಡೆನೆನು
ತಲ್ಲುಸಿರಲಂದೊರ್ವ ಗುರುವರಭಕ್ತನಿಂತೆಂದ ೪೭

ರಾಮನನು ಕೆಣಕಲ್ಕೆ ರಾವಣ
ಕಾಮಿನಿಯನೆಣಿಸಲ್ಕೆ ಕೀಚಕ
ಭೀಮನಲಿ ಸೆಣಸಲ್ಕೆ ಕೌರವಕುಲವೆ ನಾಶವಲ
ಸೋಮಧರನನು ಕೆಣಕಿ ಮನ್ಮಥ
ನಾಮಮಾತ್ರದಲುಳಿದ ಗುರುವಿನ
ನೇಮಕೆಡರಪಸಿದೊಡೆ ನಿಮ್ಮಯ ಕುಲವಳಿವುದೆಂದ ೪೮

ಪರಮ ದೂರ್ವಾಸನನು ಕೆಣಕುತೆ
ಮರಣಗತಿಯೊಂದಿರುವುದರಿಯೆಯ
ಗರುವನಡೆಯಿಂದಿರ್ದ ಯಾದವನಿಚಯಮಂದಿನಲಿ
ಹರಿಯ ಚರರಾ ಜಯವಿಜಯರುರು
ತರ ಮುನೀಂದ್ರರ ಕೆಣಕಿ ಧರೆಯೊಳ
ಗುರುಳಿಹಾದನರಿಯದೆಯೆ ನೀವಿಂತಾಡುತಿಹಿರೆಂದ ೪೯

ಎಂದೆನಲು ಗುರುಭಕ್ತ ಸುಂಕವ
ನಿಂದು ಕೊಡದಿರೆ ಬಿಡೆನು ನಾನೆಂ
ದೆಂದು ತಡೆದನು ಸುಂಕದವನುರೆ ಪಾಂಥಿಕರ ಭರದಿ
ಅಂದು ಗುರುವನೆ ಜಾನಿಸುತ ಮನ
ನೊಂದು ಶರಣರವೃಂದವಮ್ಮಿರೆ
ಬಂದುದಂದಾಪತ್ತು ಸುಂಕವಕಟ್ಟೆಯಾ ಜನಕೆ ೩೦

ಮಂದಿಮಕ್ಕಳವೆಲ್ಲ ಬಹುರುಜೆ
ಯಿಂದ ಸಾಯ್ವುದೆನುತ್ತೆ ಭಯದೊಳೆ
ಗಂದು ಪಾಂತಿಭ್ರಾಂತಿರೋಗವದಾವರಿಸಿ ಪಥದಿ
ಬೆಂದು ಬೆಂಡಾಯಿತದು ಕಸುನುಡಿ
ಯಿಂಪ ಭೂಪನ ವೃಂದ ಪಾಪದ
ಲೆಂದುದಪರಾಧವದೆನುತ ಕಟ್ಟಿದುದು ಕಾಣ್ಕೆಗಳ ೩೧

ಊರಿಗೂರಿಗೆ ಬೊಬ್ಬೆಯಾದುದು
ಸಾರಿ ಚೀರುತ ದುಃಖಪಟ್ಟಿತು
ಕೇರಿಕೇರಿಯಲಾದುದಂದಾ ವೊಬ್ಬು ತವಕದಲಿ
ತೋರಿತಂದು ಭುಜಂಗರಾಜಗೆ
ವೀರಭದ್ರನ ರೌದ್ರವಾಂತಾ
ಕಾರವೊಂದಾ ಕನಸಿನಲಿ ಗುರುವೆಡೆಗೆ ಬಾರೆನುತೆ ೩೨

ಅಂದೆ ದಿಗಿಲಿಂದೆದ್ದು ಭೂವರ
ನೆಂದನಾ ಸ್ವಪ್ನದಪರಿಯು ಬಳಿ
ಸಂದಿರುವರಲಿ ಸಾಧ್ವಸವನುರೆ ತಾಳ್ದು ಚಿತ್ತದಲಿ
ಬಂದುದೇಕೀಭಯುವು ಮಾನಸ
ಕೆಂದೊರೆಯಲನುಚರರು ಬಹುಭಯ
ದಿಂದ ಕೈಗಳಜೋಡಿಸುತ ತಾವೆಂದರಭಿಮತವ ೩೩

ಊರಿಗೂರಿಗೆ ಬೊಬ್ಬೆಯಾಗಿದೆ
ಕೇರಿಕೇರಿಯೆ ಹಬ್ಬಿ ಮೆರೆದಿದೆ
ಸಾರಿಬರುತಿಡೆ ರೋಗದುಪಟಳವಂಜಿಸುತೆ ನರರ
ಧೀರಗುರುವರನಾಗಿರುವ ಸು
ತ್ತೂರ ಸಿಂಹಾಸನದಧೀಶನ
ವೀರಶರಣರ ಶಾಪದಿಂದಿಂತಾದುದೆನೆ ಜನಪ ೩೪

ಮನದಿ ಬೆಕ್ಕಸವಾಂತು ಕಾರ್ಯವಿ
ದಿನಿತಹಡೆ ಕಾರಣವದೇನಿಹು
ದೆನುತೆ ಬೆಸಗೊಳಲಾತುರದಲಿಂತೆಂದರಾತನಲಿ
ಜನಪ ಲಾಲಿಸು ಚರಗಣಾರಾ
ಧನೆಯ ನಡೆಸಲು ಸಲಕರಣೆಗಾ
ಗನುಸಯದಿ ತರುತಿರ್ದ ಧಾನ್ಯವ ತಡೆದರದರಿಂದ ೫೫

ಘನಗುರುವಿನುರುಮನವು ನೋಯ
ಲ್ಕನಿತು ಬಾಧೆಗೆ ಮೂಲವಾಯ್ತೆಂ
ದೆನಲು ಭೂವರ ನಡುನಡುಗಿ ಬಿಡಿಸುತಲಿ ರಥತತಿಯ
ಎನಿತುಜನ್ಮದ ಕರ್ಮಫಲವಿಹು
ದೆನುತೆ ಯೋಚಿಸಿ ಮಾನಸವಲಾ
ಜನಪ ಮುಂದಿನ ಪಯಣಕನುವಾಗಲ್ಕೆ ಮನಗೊಟ್ಟು ೫೬

ಅಂದೆ ತಾ ಚತುರಂಗಸೈನ್ಯದ
ವೃಂದಮದನೊಡಗೊಂಡು ಭೂವರ
ಚಂದದಿಂ ಪೊರಮಟ್ಟನಾ ಸುತ್ತೂರಪುರದೆಡೆಗೆ
ಮಂದಮಾರುತವಂದು ಬೀಸುತ
ಮುಂದುವರಿಸಿದುದಾ ನೃಪಾಲನ
ಕಂದುಗೊರಲನ ಭಜಿಸಿ ಕಪಿಲಾತೀರದೆಡೆಯಿಳಿದ ೫೭

ಇಳಿದ ಚಣದೊಳಗಂದೆ ನಯದಿಂ
ದಿಳೆಯರಸನೈತಂದು ಮಠದೆಡೆ
ಕಳೆವುದೆನ್ನಪರಾಧಗಳ ನೀನೆನುತೆ ಗುರುಪದಕೆ
ಘಳಿಲನೆರೆ ವಿನಮಿಸುತೆ ನಿನ್ನ
ಗ್ಗಳಿಕೆಯನು ತಿಳಿಯದನ ಪಾಲಿಸು
ತಳಿಸುವುದು ಯಮಿನಾಥ ನೀನೆಂದೊರೆದು ಭೂಪಾಲ ೫೮

ಧರಣಿ ಭೂತವು ತರಣಿಯಂಬರ
ಬೆರೆದ ಶಕೆಯಲಿ ಮೆರೆದ ಸಂವ
ತ್ಸರವಿರೋಧಿಯುವಾಗಿರಲು ಬೆಳ್ನಕ್ಕ ಜೆಟ್ಟಿಯಲಿ
ನೆರೆಯೆ ದಸವಿಯೆ ಸೌಮ್ಯವಾರದಿ
ಬರೆಯಿಸಿದ ಶಾಸನವನಂದಾ
ದರದಿ ಕನಕಪುರೀಶನೆನಿಪ ಭುಜಂಗರಾಜೇಂದ್ರ ೫೯

ವೀರಶೈವ ಮತೋದ್ಧರಕೆ ಸಂ
ಚಾರದಲಿ ತಾವ್ಯೆದುತಿಹ ಸು
ತ್ತೂರ ಸಿಂಹಾಸನದ ದೇಶಿಕವರ್ಯನಭಿಮತವ
ಮೀರಿನಡೆಯಲ್ಲಾಗದೆನುತಂ
ದೂರಿನೂರಿನ ಮುಖ್ಯಜನರಿಂ
ಗಾರಯಿಪ ಪರಮಾಜ್ಞೆಯಿಂದವನಿತ್ತ ಪತ್ರಿಕೆಯು ೬೦

ಪರಮ ಶಾಖಾಮಠಗಳಿಂದಲಿ
ಬರುವ ನಾನಾ ಧಾನ್ಯಗಳಮೇ
ಲಿರುವ ಕರಿಗೆಗಳನ್ನು ತೆಗೆದಿಹನೆನುಕೆ ಶಾಸನವ
ಹರಿಸದಿಂದೀಯುತೆ ನೃಪಾಲಕ
ಗುರುವರನ ಪದಕಮಲಕೆರಗುತ
ಮರಳಿ ತಾನೊಂದಭಿಮತವನೊರೆದನು ಚರಾರ್ಯನಲಿ ೬೧

ಇನಿತುಗೈದಪರಾಧಗಳ ನೀಂ
ಮನದಲೆಣಿಸಲು ಬೇಡ ಗುರು ನಿ
ನ್ನನುವಿನಿಂದಾನಿರ್ಪೆ ನಿನ್ನಯ ಪಾದಸೇವೆಯಲಿ
ಎನಲು ಕನಕಪುರೀಶ ಗುರುಪದ
ವನಜಯುಗಕೆರಗುತೆ ವಿನೋದದಿ
ಚಿನುಮಯನೆ ತತ್ತ್ವಾರ್ಥಪೇಳೆನಲೆಂದ ಗುರುನಾಥ ೬೨

ಆದವನ ಕಷ್ಟದಲಿ ಪಳಿದಗೆ
ಭೇದಗುಣದಿಂದಿರುವ ಮರ್ಖಂಗೆ
ಕಾದಲುರೆ ಹುರಿದುಂಬಿಸುವ ಬಹುಪಾಪಿ ಮಾನವಗೆ
ಹಾದರದ ಕತೆಗೇಳ್ವ ದುರ್ಜನ
ನಾದ ಮರ್ತ್ಯಂಗೆ ಮಾರುಮಲೆಯುತ
ಸೋದರರವಧೆಗೆಳಸುವವಗಿದು ಯೋಗ್ಯವಲ್ಲೆಂದ ೬೩

ಮೋಸದಾಶ್ರಯದಿಂದ ಬಾಳುವ
ಹೇಸಿಗೆಯ ಹೊಲೆಯಂಗೆ ಜಗದೊಳು
ದಾಸಿಯೆಂಜಲತಿಂದು ಬದುಕುವ ಕೀಳುಮಾದಿಗಗೆ
ಕಾಸುವೀಸವ ಕೊಡದ ಲೋಭಿಗೆ
ಬಾಸೆತಪ್ಪುವ ಹೆಣಕೆ ಬಣಗಿಗೆ
ಲೇಸೆನಿಪ ಶಿವಧರ್ಮತತ್ತ್ವವನುಸುರಲರಿದೆಂದ ೬೪

ಗುರುವರಗೆ ಪೊಡಮಡದ ನುಡಿವೆಣ
ಏರುವೆಡೆಗೆ ನೆರೆ ಪೋಪ ನಡೆವೆಣ
ಕಿರದೆ ಮನಗೊಡುತಿರುವ ಭೂತಕೆ ಜಾರಚೋರರಿಗೆ
ಮರಸಿ ಕೊರಳನುಕೊಯ್ವ ಪೇತಕೆ
ಕರೆದು ನಂಬಿಸಿ ತಿಂಬುತಿಹ ಕೆಡು
ಗರಕೆ ಶರಣರ ನೋಡಿ ಕಿರಿಚುವ ಕೋತಿಗರಿದೆಂದ ೬೩

ಹಿರಿಯರನು ನಿಂದಿಸುವ ದುರುಳಗೆ
ಮರುಳರಿಗೆ ಮಂಕರಿಗೆ ಪಿಸುನಗೆ
ಹೊರಗೊಳಗೆ ಬೆರೆಯದಿರುವೊಡಕುಳಿಗಾ ದುರಾತ್ಮನಿಗೆ
ಮರೆಯಪೊಕ್ಕಿರುತಿರುವ ನರರನು
ಪೊರೆಯುದವನಿಗೆ ನಡೆನುಡಿಯನುರೆ
ಬೆರಸದವನಿಗೆ ತತ್ತ್ವಬೋಧನೆ ತಕ್ಕುದಲ್ಲೆಂದ ೬೬

ಪರಮಮಿತ್ರದ್ರೋಹಮಾಡುವ
ಹಿರಿಯಭೂತಕೆ ಹಿಂದುಮುಂದಣ
ಪರಿಯನರಿಯದೆ ಬೊಗಳುತಿರುತಿಹ ಹಾಳು ಸೊಣಗನಿಗೆ
ಹರುಕನಿಗೆ ಮೂಳನಿಗೆ ಮುಕ್ಕಗೆ
ಬರಿಮನದ ಪಶುಗಳಿಗೆ ಬುರುಡೆಗೆ
ಕುರುಡರಿಗೆ ಬರಡಿಂಗೆ ಮಲಘಟಕುಸಿರಲರಿದೆಂದ ೬೭

ಹೊತ್ತುಹೊತ್ತಿನೊಳಿದ್ದು ನಡೆಯುತ
ಲೆತ್ತಿನಂದದೊಳುತ್ತು ಬಳಲುತೆ
ಹೊತ್ತು ಕತ್ತೆಯ ತೆರದೆ ನೋಯುವ ತೊತ್ತಿನಾಳುಗಳು
ಇತ್ತಲತ್ತಲು ಚಲಿಸದಿರುತುರೆ
ತೆತ್ತು ತನುವನು ಹೆಣ್ಣುಹೊನ್ನಿಗೆ
ಸತ್ತುಹೋಗುವ ನರರು ಬೋಧನೆಗರ್ಹರಲ್ಲೆಂದ ೬೮

ನಡೆಗೆ ತಪ್ಪಿದ ನರನಭಾಷ್ಯನು
ನುಡಿಗೆ ತಪ್ಪಿದ ನರನು ದೂಷ್ಯನು
ನಡೆನುಡಿಗಳೆರಡೊಲಿಯದವನವ ನಾಸ್ತಿಕಾಗ್ರಣಿಯು
ಮೃಡನಪೂಜೆಯು ದಾನಧರ್ಮವು
ಮಡುವಿನಲಿ ಮುಳುಗುವುದು ನಿಷ್ಫಲ
ಬಿಡುಬಿಡಂತಾ ಬಾಯಿಹರುಕರ ಜಳ್ಳುಮಾತುಗಳ ೬೯

ಇನಿತ ಪೇಳುತಲಂದು ಗುರುವರ
ಕನಕಪುರದಧಿನಾಥನಭಿಮತ
ವನು ವಿನೋದದಿ ನಡಸೆ ನಡೆನುಡಿಯೆರಡ ಕೂಡಿಸುವ
ಘನತರದ ಸದ್ಬೋಧೆಯನು ತಾ
ನನುವಿನಿಂದರುಪುತಲಿ ಮೋಕ್ಷದ
ಸನುಮತದ ಮಾರ್ಗವನು ತೋರಿದನಂದು ಗುರುನಾಥ ೭೦

ಧೀರಗುರುವರ ನನ್ನ ಮತವಿದು
ಮಾರಹರ ಸುಕುಮಾರನೆನಿಪಾ
ವೀರಭದ್ರನ ದೇಗುಲವ ವಿರಚಿಸುವ ಮನವಿಹುದು
ಸಾರವಚನವನಿತ್ತು ಪೊರೆವುದು
ದಾರಭಾವದಲೆನೆ ವಿನೋದದಿ
ಬಾರ ನೀನೆನುತೊಯ್ದನಂದಾ ಕಿರಿಯುಗಿರಿಯೆಡೆಗೆ ೭೧

ಗಿರಿಯ ಬಳಿಗೈತಂದು ಗುರುವರ
ನಿರದೆಯುಂದಾ ದೇಗುಲವ ನೆರೆ
ವಿರಚಿಸುವ ಶಿಲ್ಪಿಯನು ಕರೆಯಿಸುತಾಜ್ಞೆಯನು ಕೊಡುತ
ಭರದಲಂದದ ರಚಿಸಿ ಕಾಳಿಯು
ವರಕುಮಾರನ ವಿಗ್ರಹವ ನಾ
ದರದೆ ಹದಿಟೆಯನಂದು ಮಾಡಿಸಿ ಪೊರೆದ ನಲವಿಂದ ೭೨

ವೀರಭದ್ರನ ಕೊಂಡವನು ನೆರ
ವೇರಿಸುತಲಿ ಭುಜಂಗರಾಜನು
ಸಾರಗುಣಮಣಿ ಯತಿಪತಿಯ ಪಾದಾಬ್ಜಕೆರಗುತಲಿ
ವೀರಶೈವ ವಿನೋದವರ ಸು
ತ್ತೂರ ಸಿಂಹಾಸನದ ಗುರುವಿಗೆ
ಸೇರಿಹುದು ದೇವಾಲಯದ ಪರಿಪಾಲನವು ಮುಂದೆ ೭೩

ಎನುತ ವಹಿಸುತಲಂದು ಗುರುಪದ
ವನಜಕೆರಗಿ ಮಹೇಶಭಕ್ತಿಯ
ನನಿತನದ ಬೋಧಿಸುತ ಸಲಹಿದೆಯೆಂದ ರಾಜೇಂದ್ರ
ಕನಿಕರದ ಗುಣದಿಂದಲಂದಾ
ಕನಕಪುರದ ಭುಜಂಗರಾಜನ
ನನಘ ತಾನೊಡಗೂಡಿ ಪಿಂದಿರುಗುತ್ತಲಿರುತಿರಲು ೭೪

ವೀರಭದ್ರನ ಗಿರಿಯನಿಳಿಯುತ್ತೆ
ಭೂರಿತೋಷದಿ ಗುರುವರನು ಪರಿ
ವಾರಮದನೊಡಗೂಡಿ ಪಿಂದಿರುಗುತಿರಲಾ ಭುಜಗ
ದಾರಿಯಲಿ ತಾ ಬರುತ ವೇಗದಿ
ಮೀರಿ ಜನರನು ಮುಂದೆ ಹರಿಯುತ
ಸೇರುತಿರೆ ದೇವಾಲಯವನದ ನೋಡಿ ಭಕ್ತಚಯ ೨೫

ಗುರುವೆ ಯತಿವರ ನಂಜದೇವನ
ಪರಮ ವಚನದಿ ಗಿರಿಗೆ ಪೋಗಿ
ದುರಗ ಪಿಂದಿರುಗಿದುದು ಸೋಮೇಶ್ವರನ ದೇಗುಲಕೆ
ಬೆರಸಿತಂದಿನ ಭಯವೆ ನಮಗುರೆ
ಭರದಿ ನೀನಿದ ಪರಿಹರಿಸುತಲಿ
ಪೊರೆವುದೆಂದೆನೆ ಜನರು ಪೇಳಿದನಂದು ಗುರುನಾಥ ೨೬

ಅಭಯವನು ತಾನಿತ್ತು ಭಕ್ತರಿ
ಗಭವನುರು ದೇವಾಲಯಕೆ ಬರು
ತಿಭದನುಜಹರ ಮಂತ್ರಪಠನೆಯನೆಸಗಿ ಯತಿವರ್ಯ
ವಿಭುವರನು ತಾ ಕರೆಯುತುರಗನ
ಶುಭವವೆಲ್ಲರಿಗೀಯೆ ಕೊರಳಲಿ
ರಭಸದೊಳು ಧರಿಸುತ್ತೆ ಕರೆದದ ಪೋಗು ವನಕೆಂದ ೨೭

ಸರಿಸರಿದು ತಾನಾಗ ಪೋಗ
ಲ್ಯುರಗನದು ಕಾನನಕೆ ಜನರುರೆ
ನಿರುಕಿಸುತ ಗುರುವರನ ಮಹಿಮೆಯ ಹಾಡಿ ಹರಸಿದರು
ಅರಸನಿದನವಲೋಕಿಸತ ಬಲು
ಹರಿಸದಲಿ ಕೊಂಡಾಡಿ ತಣಿಯುತ
ಲೊರೆದನೊಂದಭಿಮತವನಿರದೆ ಭುಜಂಗರಾಜೇಂದ್ರ ೨೮

ವಿನನೆಸಗಲಿ ಧರ್ಮಕಾರ್ಯವ
ದೀನನಾದೆನ್ನೊಳಗೆ ಬೆಸಸೆನೆ
ಮಾನವಾಧಿಪ ಶಿವನ ದೇವಾಲಯವ ರಚಿಸೆಂದು
ಸಾನುರಾಗದಲೂರಿಗೂರಿಗ
ಳೂನದೇವಸ್ಥಾನಗಳನೆ ನ
ವೀನ ವಿಧದಲಿ ನಿರ್ಮಿಸುತೆ ಸುಖದಿಂದ ಬಾಳೆಂದ ೨೯

ಗುರುವಿನಾಜ್ಞೆಯನಾಂತು ನೃಪವರ
ನಿರದೆ ಶಿವದೇವಾಲಯಂಗಳ
ವಿರಚಿಸುತೆ ಕಲ್ಕುಂದ ಗೋಡನಹಳ್ಳಿ ಮೊದಲಾಗಿ
ಬರುಬರುತಲಾ ಗ್ರಾಮಕೊಂದಿಹ
ತೆರದಿ ಸುಂದರತರದಿ ರಚಿಸುತೆ
ನರಪನಿರ್ದನು ಮೋದದಿಂದಾ ಕನಕಪುರದೊಳಗೆ ೮೦

ಕನಕಪುರದಧಿನಾಥ ರಚಿಸಿದ
ಘನತರದ ಶಾಸನದ ದಿನದಲಿ
ಸನುಮತದ ಸುತ್ತೂರ ಸಿಂಹಾಸನದ ಯತಿವರಗೆ
ವಿನಯದಿಂ ಗರಪುರನಿವಾಸಕ
ನೆನಿಸಿದಾ ಶಿವಪೂಜೆದೇವಪ
ಮನದೊಲವಿನಾ ಶಿಷ್ಯ ಶಾಸನವೊಂದ ಬರೆಯಿಸುತೆ ೮೧

ವೇದಚಕ್ರಾಧೀಶನಿಧಿಯಾ
ಮೋದದಂಬರ ಬೆರೆದ ಕಲಿಯುಗ
ದಾದಿಪಾದದಲೆಸೆದ ಬರಿಸದಿ ಹೊನ್ನಗದ ಚರನ
ಪಾದಸೇವಾಸಕ್ತ ತಾನಂ
ದಾದರದಲರ್ಪಿಸುತೆ ಗತಿ ಸಂ
ಪಾದನೆಯನೆಸಗಿದನು ಶಿವರಾತ್ರೀಶ್ವರನ ದಯದಿ ೮೨

ಅನಿತರಲಿ ಸುತ್ತೂರ ಸೋಮೇ
ಶನ ಸಮರ್ಚನೆಯನು ನಡೆಯಿಸಲು
ಮನವೊಲಿದು ಪೂರ್ವದವಿಧಿಯ ನಡೆಸುತ್ತ ಬರುವುದಕೆ
ಜನಪ ತಿರುಮಲರಾಯನನುಪಮ
ಘನಚರಿತ್ರನು ಭದ್ರವರ್ಯನು
ಚಿನುಮಯಗೆ ಸುತ್ತೂರ ಗುರುವಿಗೆ ಬರೆಸಿ ಶಾಸನವ ೮೩

ಚಿರತರದೆ ಸೋಮೇಶಪೂಜಾ
ಚರಣೆಯದು ನಡೆಯಲ್ಕೆ ಸಂವ
ತ್ಸರ ವಿರೋಧಿಯದಿರಲು ಮಾಘದ ಬಹುಳ ಬಿದಿಗೆಯಲಿ
ಅರಸರೀರ್ವರ ಕೀರ್ತಿ ಪಸರಿಸೆ
ಹರಿಸಬಗೆಯಿಂದೊಲಿಯುತದನುರು
ತರದ ಶಾಸನವೊಂದ ಲಿಖಿಸುತಲಿತ್ತ ಗುರುವರಗೆ ೮೪

ಕೆಲದಿನಂಗಳು ಕಳೆಯೆ ಗುರುವರ
ಸುಲಲಿತದಲಾ ವೀರಭದ್ರನ
ನಿಲಯವೊಂದನು ವಿರಚಿಸುತ ಸಂಭ್ರಮದಿ ಸೇವಿಸುವ
ವಿಲಸಿತಾರ್ಚನವಿಧಿಯನೆಸಗುತ
ಲೊಲವಿನಿಂದಿರಲಲ್ಲಿಗಾ ಭೂ
ಲಲನೆಯಧಿಪ ಭುಜಂಗರಾಜನು ಬಂದನತಿಮುದದಿ ೮೫

ಬರುತ ತಾ ವಿನಮಿಸುತವನ ಪದ
ಸರಸಿಜಕೆ ಬಿನ್ನವಿಸಿದನು ಬಂ
ದಿರುವೆಡರನಿದ ಹರಿಸಿ ಕಾವುದೆನುತ್ತಲತಿಶಯದಿ
ಇರದೆ ಪಿಂದೆಸಗಿರುವ ದುರಿತದಿ
ಬರುತಿಹುದು ನಾನಾವಿಧದ ತೊಂ
ದರೆಯನನುಭವಿಪುದು ಸಹಜವಿದು ರಾಜ ಕೇಳೆಂದ ೮೬

ಉರಿಯುದುವೆ ಕರ್ಪೂರವ ಬೆರೆಯಲು
ಮೆರಡು ಲಯವಾಗಿರ್ದೊಡೆಯು ತಾ
ನುಳಿವೆಡೆಯೆ ಕುರುಪೊಂದು ತೋರ್ಪುದು ಪೂರ್ವಭಾವನೆಗೆ
ಇರುವುದಂದಾ ಕರ್ಮಫಲ ಹರ
ಕರುಣದೊರೆತವಗಾದರುಂ ಬಿಡ
ದಿರದು ನಡೆನುಡಿಯೆರಕವಾದೊಡೆ ಪರಿಹರವದೆಂದ ೮೭

ಮೊದಲಹಂತವ ಸೇರಿ ತರದಿಂ
ತುದಿಯ ಮುಟ್ಟಲುಬೇಕು ಸತ್ಯವಿ
ದವಕೆ ಧರ್ಮವನೆಸಗಿ ಮುಂದಣ ಪಥವ ಹಿಡಿಯೆನುತ
ಮುದದಿ ಗುರುವರನುಸಿರಲಾತಗೆ
ಪದುಳದಿಂದವನೀಶ ನಮಿಸುತ
ಸದಯಮಾನಸನಾಗಿ ಗುರುವರಗೆಂದನೊಲವಿಂದ ೮೮

ಗುರುವೆ ನಿನ್ನಯ ಕರುಣದಿಂದಲಿ
ಹರಿದುದೆನ್ನಯ ದುರಿತಪಾಶವು
ಪರಮಹರ್ಷದಿ ಬದುಕಿ ಬಾಳುವೆನೆಂದು ಪೇಳುತಲಿ
ನರಪತಿಯು ವಿನಮಿಸುತ ತನ್ನಯ
ಪುರಕೆ ಪೊರಡುತ ಸರ್ವಸೈನ್ಯವು
ವೆರಸಿ ನಡೆದನು ನೆನೆದು ಗುರುಪದ ಪಾರಿಜಾತವನು ೮೯

ಇತ್ತ ಶಿವರಾತ್ರೀಶ ಯತಿವರ
ನುತ್ತಮೋತ್ತಮಡಿನದಲಾದರಿ
ಸುತ್ತಲಾ ಚೆನಬಸವರಾಜಗೆ ಸತ್ಯಮುದ್ರಿಕೆಯು
ನಿತ್ತು ಪಟ್ಟವ ಕಟ್ಟುತಲಿ ನೆಲ
ಸುತ್ತಲಂದಾ ನಿಜಸಮಾಧಿಯು
ಲತ್ತ ಯೋಗಾನಂದದಿಂದೆಸೆದಿರ್ದ ಗುರುನಾಥ ೯೦

ಯೋಗಿವಂದಿತೆ ಶಿವಗಣಾರ್ಚಿತೆ
ಭೋಗಮೋಕ್ಷದೆ ಸಕಲಭುವನಕೆ
ನಾಗರಾಜ ಸುರೇಂದ್ರಸೇವಿತೆ ಮುದಿತೆ ವೇದನುತೆ
ಆಗಮಾಂತಪ್ರಣುತೆ ಶಾಶ್ವತೆ
ಆಗಳುಂ ಸಲೆ ಧರ್ಮಬೋಧಿನಿ
ರಾಗದಿಂ ಪೊರೆ ದೇವಿ ಚಾಮುಂಡಾಂಬೆ ಜಗದಂಬೆ ೯೧

# ಚೆನ್ನಬಸವದೇಶಿಕೇಂದ್ರ ಕಥನಂ

ಚೆನಬಸವರಾಜೇಂದ್ರ ಸಜ್ಜನ
ವಿನುತ ನೀತಿಯುಮಾರ್ಗವನು ತಾ
ನನಘ ಬೋಧಿಸುತೆಸೆದನಾ ಸುತ್ತೂರಪೀಠದಲಿ

ಶ್ರೀ ಪರಮ ಪದದಾತ ಸುಗುಣ ಕ
ಲಾಪ ಭುವನೋದ್ಧಾರ ಶಿವ ನಿ
ರ್ಲೇಪ ಸಂಚಿತಹರ ವಿಮುಕ್ತಾಧಾರ ಗಂಭೀರ
ಸಾಪರಾಧಕ ದಕ್ಷ ಶಿಕ್ಷಕ
ಧೂಪಿತಾಖಿಲ ಲೋಕರಕ್ಷಕ
ಗೋಪವಾಹನ ಕುಡು ಶುಭವ ನಿಂ ಸೋಮನಾಥೇಶ ೧

ಕಲಿತ ಸದ್ಗುಣ ಸಿದ್ಧಲಿಂಗನೆ
ಲಲಿತನೀತಿಯುಮಾರ್ಗ ವಿವರವ
ನೊಲಿದೊಲಿದು ಬೋಧಿಸುತೆ ಭಕ್ತರ ಕಾಯ್ದ ಗುರುವರನ
ಬಲಮಹಿತ ಚೆನಬಸವರಾಜನ
ಫಲಭರಿತ ಸತ್ಕಥೆಯನೊರೆವೆನು
ನಲವಿನಲಿ ಕೇಳೆನುತ ಪೇಳಿದನಂದು ಗುರುನಾಥ ೨

ಒಂದುದಿನ ಪೂರ್ವಾಹ್ಣದಲಿ ಯತಿ
ಬಂದು ಗುರುವಿನ ಗದ್ದುಗೆಯ ನಲ
ವಿಂದ ಪಾದ್ಯಾರ್ಘ್ಯಾದಿವಸ್ತುಗಳಿಂದ ಪೂಜಿಸುತೆ
ಚಂದದಲಿ ಕರೆಯಿಸುತೆ ಬಕುತರ
ಮುಂದೆ ಮಲಕೆ ವಿದೂರರಾಗುತೆ
ಪೊಂದವುದು ಸದ್ಗತಿಯನೆನಲವರೆಂದರಾತನಲಿ ೩

ಮಲಗಳೆನಿತಿಹವದನು ನೀನಿಂ
ದೊಲುಮೆಯಿಂದುಸಿರೆನೆ ಪರಮ ಗಣ
ಕುಲವಿನುತ ಚೆನಬಸವದೇಶಿಕ ನುಡಿದನಾದರದಿ
ಮಲಗಳವು ಮೂರಿಹವು ನರರಲಿ
ಬಲದೊಳಾಣವ ಮಾಯಿಕವು ಸಂ
ಕಲಿತ ಕಾರ್ಮಿಕವೆನುತ ದೇಹತ್ರಯದ ನಿತ್ಯದಲಿ ೪

ಒಂದುದಿನದಲಿ ನೆರೆದ ಸಭೆಯೊಳೆ
ಗಂದು ಶಿಷ್ಯವಿತಾನವದು ಬಲು
ಚಂದದಿಂದಭಿವಂದಿಸುತ ಚೆನಬಸವರಾಜಂಗೆ
ತಂದೆತಾಯಿಯು ಬಂಧುಬಾಂಧವ
ವೃಂದ ನೀನಾಗಿರುವೆ ನೆರೆ ಸಲ
ಹಿಂದು ಬೋಧಿಸುತೆನ್ನನೆನೆ ಗುರುನಾಥನೀಂತೆಂದ ೫

• ಹಿರಿಯ ಸಂಪದವದನು ನೀವ
ಸ್ಥಿರಪದವಿಯೆನುತಿಂದು ತಿಳಿಯಿರಿ
ನೆರೆವ ಸುತೆಯುತೆರದಿ ಕಾಲವು ಸರಿದು ಬರಲದುವೆ
ಹರಿಮುಪೋಪುದು ಪರಿಪರಿಯ ಪರಿ
ಕರವು ಸತಿಸುತಹಿತರು ತಾವಂ
ದಿರರು ಋಣಸಂಬಂಧ ತೀರುತಬರಲು ಧಾತ್ರಿಯಲಿ ೬

ಶರಧಿಯೊಳಗಣ ಬುದ್ಬುದವು ತಾ
ಭರದೆ ಕಾಣುತ್ತಡಗುವಂದದಿ
ಲಿರದೆ ತನುವದನಿತ್ಯವೆಂಬುರುತರದ ಜ್ಞಾನವನು
ಬೆರೆದು ಮುದದಿಂ ಗಾಳಿಗೆದುರಾ
ಗಿರುವ ದೀಪದ ತೆರವಿದೆನುತಲಿ
ಪರಮಮುಕ್ತಿಯ ಪಥವ ಹಿಡಿಯಿರಿ ನಡೆಯುಬಲದಿಂದ ೭

ಭೋಗಭಾಗ್ಯವದಿರುವ ಕಾಲದಿ
ರಾಗರಚನೆಗೆ ಸೋತು ನಡೆಯದೆ
ಬಾಗಿರುವ ಶಿರದಿಂದ ಬಾಳಲಪಾಯವಿಲ್ಲವಲೆ
ತಾಗುತಂದಾ ತಲೆಯೊಡೆಯೆ ತಾ
ನಾಗುತಿಹ ತೆರ ಬೇರಿಹುದು ನಿಜ
ವಾಗಿ ದುರಿತಕ್ಕಂಜಿ ಶಿವನೊಡವೆರೆಯಬೇಕೆಂದ ೮

ಸಾವಸಮಯದಿ ಚಿಂತೆ ಸಲ್ಲದು
ಹಾವಿನೊಡನೆಯ ಸರಸ ಸಲ್ಲದು
ಭಾವಹೀನರ ನೆರೆಯು ಸಲ್ಲದು ಮೂರುಕಾಲದಲಿ
ಕೋವಿದನ ಹಗೆತನವು ಸಲ್ಲದು
ಕಾವವಗೆ ಮೂಢತ್ವ ಸಲ್ಲದು
ಭಾವಿಸಲು ನಡೆನುಡಿಯು ಕೂಡಿರೆ ಮೋಕ್ಷ ಕೇಳೆಂದ ೯

ಮನಸಿಗತಿಶಯ ಭಂಗವಪ್ಪುದು
ಘನತರದ ನಿದ್ದೆಯದು ಕೆಡುವದು
ವಿನುತ ಯೋಗ್ಯರ ನಿಂದೆಯಿಂದಲಿ ಸತ್ಯವಿದು ಜಗದಿ
ವನಿತೆಯರ ಸುತಹಿತರ ಬದಿಗರ
ಮನವ ಕೆಡಿಸಲ್ಕಂದೆ ನಡೆಯಲಿ
ತನಗೆ ಬಂದಿದೆ ಮರಣಸಮಯವದೆಂದರಿವುದೆಂದ ೧೦

ತುಂಬಿರುವ ಕೆರೆ ಬಾವಿಗಳ ಜಲ
ತುಂಬಿ ಮೆರೆವುದೆ ಸತತ ಭೋಗವ
ನಂಬಿ ಮೆರೆಯಲುಬೇಡ ಸಿರಿಯೋರ್ವನೊಳಗಿಪಳಲ್ಲ
ತುಂಬಿಕೊಳಲಾ ಸಿರಿಯು ಬಡತನ
ಬೆಂಬಿಡದೆ ತಾನೈದಿ ಜಗದಲಿ
ಹಂಬಲಕೆ ಗುರಿಪಡಿಸುವುದು ನೀನರಿವುದಿದನೆಂದ ೧೧

ಇನಿತು ನೀತಿಯನೊರೆದು ಶುಭವಿಹ
ದಿನದ ಬರವದ ನಿರುಕಿಸುತ ನಿಜ
ದನುವನವರಿಂಗೊರೆದು ಬರುತಿಹ ಭಕ್ತನಿಚಯವನೆ
ಕನಿಕರದಲಾಶೀರ್ವದಿಸಿ ತಾ
ನೆನೆಯುತವರಭಿಮತವನಾ ಗುರು
ವನುಗೊಳಿಸಿ ಸಂಚಾರಕಾರ್ಯಕ್ಕಿರದೆ ಮನಗೊಟ್ಟ ೧೨

ಗುರುವರಗೆ ಶಿವರಾತ್ರಿದೇವಗೆ
ಹರಕೆಕಾಣ್ಕೆಗಳಿರದೆ ಬರುತಿರೆ
ಧರಣಿಯಲಿ ಪಸರಿಸಿತು ಮಹಿಮೋನ್ನತ ಯಶೋರಾಶಿ
ಅರಿಯುತುರುಸಂಗತಿಯನಂದಾ
ವರಣಪುರಿಗೈತರುತಲಿರ್ದರು
ಪುರಪುರದ ಜನರಂದೆ ಬಹು ನಯವಿನಯಭಕ್ತಿಯಲಿ ೧೩

ಶರಣನೊರ್ವನ ಗೃಹದಿ ಬಿಲ್ವದ
ತರುವದೊಂದೊಣಗಿರಲು ಯೋಚಿಸಿ
ಗುರುವರನ ಬಳಿಗೈದುತೊರೆಯಲ್ಕವ ವಿನೋದದಲಿ
ಚರನ ಪಾದೋದಕವನೆರಚಲು
ಮರಳಿ ಚಿಗುರುವುದೆನಲು ತಾನಂ
ದಿರದೆಯೇ ಕರೆದೊಯ್ದನಾ ಯಮಿವರನ ಮಂದಿರಕೆ ೧೪

ವೇದಸನ್ನುತನಾದ ಗುರುವಿನ
ಪಾದಪದ್ಮವ ಪೂಜಿಸಲು ಪರ
ಮಾದರದಲಭಿಷೇಕವದ ವಿರಚಿಸುತ ಭರದಿಂದ
ಮೇದಿನಿಯಲೊಣಗಿರ್ಪ ಬಿಲ್ವದ
ಪಾದಪದ ಮೇಲೆರಚೆ ಮರುಳುತೆ
ಮೋದವಗೆಯಲು ಮರವದುವೆ ತಾ ಚಿಗುರಿತತಿಶಯದಿ ೧೫

ಅಂದಿನಚ್ಚರಿಯಿಂದ ಮಾನವ
ವೃಂದ ತಾ ಬಳಿಸಂದು ಗುರುವೆಡೆ
ನಿಂದು ಭಕ್ತಿಯನೊಂದೆ ವಂದನೆಯಿಂದ ಮಾನಸದಿ
ಕುಂದುಕೊರತೆಯ ಹರಿಸಿ ಪರಮಾ
ನಂದಿ ಸೌಖ್ಯವನೀಯುತವರಿಗ
ಮಂದ ಭದ್ರಾಸನದೊಳೆಸೆದನು ಚೆನಬಸವರಾಜ. ೧೬

ಧೀರ ಚೆನಬಸವಾರ್ಯನುರು ಸಂ
ಚಾರಸಮಯದಿ ಸರ್ಪದಷ್ಟರ
ನಾರುಜನರನು ಪೊರೆದ ಭಸ್ಮವನಿತ್ತು ಮೋದದಲಿ
ಭೂರಿಹರ್ಷದೊಳವರು ದೇಶದಿ
ಸಾರಿದರು ಗುರುಮಹಿಮೆಯನು ಸು
ತ್ತೂರ ದೇಶಿಕನಿಂತು ಭಕ್ತರ ಪೊರೆಯುತಂದೆಸೆದ ೧೭

ಪರಮರೋಗದೊಳೆಂಟುಜನಗಳು
ಮರೆದು ಮೈಯನು ಸಾಯುತಿರುತಿರೆ
ನೆರೆದ ಬಂಧುನಿಕಾಯವಳಲುತೆ ಗುರುವಿನೆಡೆಗೈದಿ
ಮೊರೆಯಿಡಲು ಕನಿಕರಿಸಿ ಭಸಿತವ
ಕರದಲೀಯುತೆ ಕಳುಹಲವರುರು
ಭರದಿ ಪೋಗುತ ಧರಿಸೆ ಬದುಕಿದರಂದು ರೋಗಿಗಳು ೧೮

ಪಾಲಕುಡಿಯದ ಬಾಲನೊರ್ವನ
ಕಾಲಮರಣವನೊಂದುತಿರೆ ಪರಿ
ಪಾಲಕರು ಕರೆತಂದಿಳುಹಿ ಮೊರೆಯಿಡಲು ದುಃಖಿಸುತ
ಮೇಲನೆಣಿಸುತ ಪರಮ ಕರುಣದಿ
ಕಾಲಕಾಲನ ನೆನೆದು ಭಸಿತವ
ಫಾಲದಲಿ ಧರಿಸುತ್ತ ಬದುಕಿಸಿ ಪೊರೆದನಾಚಾರ್ಯ ೧೯

ಮೆರೆದ ಹದಿನಾಡರಸನೆಂಬುರು
ತರದ ಕೀರ್ತಿಯನಾಂತ ಗುಣಮಣಿ
ಇರಲು ಜನನೀಜನಕರಾಜ್ಞಾಬದ್ಧನೆಂದೆನಿಸಿ
ಬರಲವನ ಮಾತೃಬಿಗೆ ರುಜೆಯೊಂ
ದಿರದೆ ಸುತ್ತೂರಿನ ಸುಮಹಿಮರಾ
ಕರಗೆ ಕಾಣ್ಕೆಯ ಕಟ್ಟೆ ರೋಗವದಳಿಯಲನಿತರಲಿ ೨೦

ಮನವಲಚ್ಚರಿಯೊಂದಿ ನೃಪವರ
ಜನನಿಗಂದಾ ಪುಣ್ಯದೊರೆಯು
ಕ್ಕೆನುತ ಚನ್ನಾಜಮ್ಮನೆಂಬುವ ಜಸದ ಪೆಸರಿಂದ
ಜನಕನಹ ದೇವಪ್ಪಗೌಡನ
ಘನತೆಯನು ವಿಸ್ತರಿಸೆ ತಾನಂ
ದನುವಿನಿಂ ಬರೆಯಿಸಿದ ಶಾಸನವೊಂದ ಗುರುವರಗೆ ೨೧

ಧರಣಿ ಪಾಂಡವ ತರಣಿ ಭೂತವ
ದಿರುವ ಸಂವತ್ಸರ ವಿಜಯದಲಿ
ನೆರೆದ ಬಹುಳದ ದಶಮಿಯಿರೆ ಭಾದ್ರಪದಮಾಸದಲಿ
ಭರದಲಂದಾ ಹೊಂಗನೂರಿನ
ಸರಿಸದೊಳಗಿಹ ಹಸೂರುಹಳ್ಳಿಯು
ವಿರಡೆ ಇಮ್ಮಡಿ ರಾಮರಾಜನು ಬರೆಯಿಸುತಲಿತ್ತ ೨೨

ದುರಿತ ಸುಕೃತವನರಿಯದೆಯೆ ತಾ
ನಿರುತಲುದರದ ಪೋಷಣೆಯದಿಹ
ಪರದ ಸುಖವೆಂದರಿದು ವರ್ತಿಪ ಮಾನವನ ಪರಿಯೆ
ಮರವು ಫಲವೇನಿಲ್ಲದೆಯೆ ತಾ
ನುರುಳುವಂದದಿ ಹುಟ್ಟಿ ಮಡಿವನು
ನಿರುಕಿಸಲ್ಕವನಾತ್ಮನಾಶವ ಪಡೆವ ಕಡೆಗೆಂದ ೨೩

ಆಕುನೆಲೆಗಳ ಸಾಧ ತತ್ತ್ವವಿ
ಚಾರವನು ಲಿಂಗಾಂಗಯುಗಳದ
ಸೇರುವಿಕೆಯನು ಬೋಧಿಸುತ್ತೊಲವಿಂದ ಗುರುನಾಥ
ಪಾರಮಾರ್ಥಿಕವಾದ ತತ್ತ್ವದ
ಭೂರಿಮಹಿಮೆಯನರುಹಿ ಸುದಿನವ
ಶರಯಿದಂ ಗುರುನಂಜದೇವಗೆ ಪಟ್ಟಗಟ್ಟುತಲಿ ೨೪

ಹರಸಿ ಪರತರ ಕರುಣದಿಂದಲಿ
ಬರಿಸಿ ನಡೆನುಡಿಯೆರಕದಂದವ
ತೆರೆದು ಧೂರ್ತರ ದುಷ್ಟವಚನದ ಪಾಪಸಂಗತಿಯ
ಕರೆದು ಶಿವಕಲೆಯನ್ನು ಶಿಷ್ಯನ
ಶಿರದಿ ನೆಲೆಗೊಳಿಸುತ್ತ ಪರಶಿವ
ಚರಣವನು ಭಜಿಸುತ್ತ ಕಾಶಿಗೆ ನಡೆದನಾಚಾರ್ಯ ೨೫

ದುಷ್ಟಮರ್ದನ ಚಂಡಕೋಪಿನಿ
ಶಿಷ್ಟವರ್ಧನ ಪಕ್ಷಪಾತಿನಿ
ಕಷ್ಟಸಾಗರ ಮಗ್ನಪಾಲಿನಿ ಪರಮರುದ್ರಾಣಿ
ನಷ್ಟಮೋಹ ಜನಾನುರಾಗಿಣಿ
ಭ್ರಷ್ಟಮರ್ತ್ಯ ನಿಪಾತಕಾರಿಣಿ
ಸೃಷ್ಟಿರಕ್ಷಿಣಿ ಸಲಹು ಚಾಮುಂಡಾಂಬೆ ಜಗದಂಬೆ ೨೬

# ಗುರುನಂಜ ದೇಶಿಕೇಂದ್ರ ಕಥನಂ

ಪರತರಾಸ್ತಿಕಮತವ ತಾನು
ಉದ್ಧರಿಸಿ ಮೆರೆದನು ವೀರಶೈವರ
ಪೊರೆದು ಗುರುನಂಜಾರ್ಯ ತಾ ಸುತ್ತೂರ ಪೀಠದಲಿ

ಶ್ರೀಮದಮಲ ಗುಣಾಭಿರಾಮ ಸು
ನಾಮ ಭೀಮ ಮಹಾಮಹೇಶ್ವರ
ಕಾಮಿತಾರ್ಥ ವರಪ್ರದಾಯಕ ಭವಭಯಾಪಹನೆ
ಕಾಮತನು ನಿರ್ನಾಮ ಗಿರಿಜೋ
ದ್ದಾಮ ಮುಖತಾಮರಸ ಭಾಸ್ಕರ
ಸೋಮನಾಥೇಶ್ವರನೆ ನೀಂ ಕುಡು ಧರಣಿಗತಿಶುಭವ ೧

ಭೂತಿಸಂಯುತ ಸಿದ್ಧಲಿಂಗನೆ
ಸಾತಿಶಯದಿಂದಾಲಿಪುದು ಗುಣ
ಪೂತ ಪರತರ ವೀರಶೈವಾನೀಕ ವಂದಿತನ
ನೀತಿವಿದ ಗುರುನಂಜದೇವನ
ನೂತನದ ಕಥನವನು ಬಹು ಸಂ
ಪ್ರೀತಿಯಿಂದಾನೊರೆವೆನೆನುತುಸಿರಿದನು ಗುರುನಾಥ ೨

ಗುರುವರನ ಗದ್ದುಗೆಯನಂದಾ
ದರದೆ ವರ್ಷೋತ್ಸವದಿ ಪೂಜಿಸೆ
ಪರಿಕರವನಳವಡಿಸಿ ಮಲೆಯಾಳದಲಿ ನೆಲಸಿರುವ
ಪರಮಶಿಷ್ಯರ ಕರೆಯಿಸುತಲವ
ರಿರುವನರಿಯುತಲವರನಂದುಪ
ಚರಿಸಿ ಗುರುಸೇವಾದಿ ಕಾರ್ಯವನೊಲಿದು ಮುಗಿಸಿರಲು ೩

ಹರಸುತವರನು ಗುರುವಿನುರುತರ
ಚರಣಕುಸುಮವನಿತ್ತು ನೀವಿ
ಲ್ಲಿರುವುದೆಂದರುಪಲ್ಕವರು ವಿನಮಿಸುತ ವಿನಯದಲಿ
ಕರೆದರೊಲಿಯುತ ತಮ್ಮ ನಾಡಿಗೆ
ಗುರುವರನೆ ದಯಮಾಡಿ ನಮ್ಮನು
ಪೊರೆಯಬೇಕೆಂದೆನಲು ದೇಶಿಕ ನುಡಿದನವರೊಡನೆ ೪

ಗುರುವು ಭಕ್ತಾಧೀನ ತಾನೆನಿ
ಸಿರುವನದರಿಂದಿಂದು ಮರೆದಾ
ವರಣಪುರದ ವಿಚಾರವೆಲ್ಲವ ಸರಿಪಡಿಸಿ ಮುದದಿ
ಪೊರಡುತಿಹೆ ನಿಮ್ಮೊಡನೆ ನೀವಾ
ವರೆಗೆ ನೆರದಿಲ್ಲಿರುವುದೆಂದೆನು
ತೊಳೆದು ಯೋಗಾನಂದದಿಂದಲ್ಲೆಸದನಾಚಾರ್ಯ ೫

ಅನಿತರಲಿ ಪರದೇಶದಿಂ ರುಜೆ
ಯನುಸರಿಸಿ ವೇದನೆಗೆ ಸಿಲುಕಿದ
ಮನುಜನೊರ್ವನ ತಂದು ಮಲಗಿಸಿದರು ಭಯಾನಕದಿ
ಘನುವಿನಾಕಾರದಲಿ ಬಾಗಿಹ
ತನುವದಿರಲದ ನೋಡಿ ಚಿಂತಿಸಿ
ಕನಿಕರದಿ ಪದತೀರ್ಥದಿಂದಲಿ ಪೊರೆದ ಗುರುನಾಥ ೬

ಭೂತಪೀಡಿತಳಾದ ನಾರಿಯು
ನಾತುರದಿ ಬಂಧುಗಳು ಗುರುವೆಡೆ
ಗಾತುಕೊಂಡೈತರುತ ಗದ್ದುಗೆಯೆಡೆಯಲಿರಿಸುತಲಿ
ಸಾತಿಶಯದಲಿ ಬೇಡಿದರು ನರ
ರೀ ತರುಣಿಯನು ಪೊರೆವುದೆನಲು ವಿ
ಭೂತಿಯನು ಧರಿಸುತಲಿ ಬಿಡಿಸಿದನಂದು ದೆವ್ವವನು ೭

ಗುರುವರಗೆ ಕಾಣ್ಕೆಯನು ಕಟ್ಟುತ
ಭರದಲಂದೈತಂದ ಭಕ್ತರ
ಹರಸುತವರಿಂಗೊದಗಿಡುರು ಭೀತಿಯನು ಪರಿಹರಿಸಿ
ಮರೆದ ಮಲೆಯಾಳರ ನೆರವಿಯನು
ಬೆರೆಸು ಗದ್ದುಗೆಯನು ಬಿಡುತಲಾ
ವರಣಪುರ ಪೀಠಾಧಿಪತಿ ಹಿಂದಿರುಗಿದನು ಮಠಕೆ ೮

ಊರಿನೂರಿನ ಭಕ್ತಜನ ಪರಿ
ವಾರವನು ಕರೆಯಿಸುತಲೀ ಸು
ತ್ತೂರ ಪೀಠಾಧಿಪನನೊರ್ವನ ಮಾಳ್ಪ ತವಕದಲಿ
ಸೇರಿಸಿಹೆ ನಿಮ್ಮೆಲ್ಲರನು ಸುವಿ
ಚಾರವೇನಿಹುದದನರುಹಿರೆನೆ
ಸಾರಗುಣ ನಿನ್ನಾಜ್ಞೆಯಂ ತಾವೆಸಗುತಿಹೆವೆನಲು ೯

ಕರೆಯುತಾ ಚೆನಬಸವದೇವನ
ತೆರಳುವೆನು ಮಲೆಯಾಳಕಾಗಿಯೆ
ಮರೆಯದಿರು ಗುರುಹಿರಿಯರೆಸಗಿಹ ಕಾರ್ಯಗಳ ನಡಿಸೆ
ಪರಮ ರೇಣುಕನಾಜ್ಞೆಯಿಂ ಬಂ
ದಿರುವ ಪೀಠವ ಮುಂಬರಿಸು ಭೆ
ಕ್ತರನೆ ಕರುಣದಿ ಪೊರೆವುದೆಂದೆನುತೊಲಿದು ಗುರುನಾಥ ೧೦

ಇನಿತ ಶಿಷ್ಯನಿಗೊರೆದು ತತ್ತ್ವವ
ನನುಸರಿಸುವಂತೆಸಗಿ ಭದ್ರಾ
ಸನದಲುರೆ ಕೂರಿಸುತ ಪಟ್ಟವಕಟ್ಟಿ ಮುದದಿಂದ
ಚೆನಬಸವದೇವನನು ಹರಸುತ
ಚಿನುಮಯನು ಗುರುನಂಜದೇವನು
ಮನದಿ ಶಿವರಾತ್ರೀಶನನು ನೆನೆದಂದೆ ಪೊರಮಟ್ಟ ೧೧

ಚರವರನು ಪೊರಡಲ್ಕೆ ಪುರಜನ
ಬಿರುದು ವಾದ್ಯನಿನಾದಸಹಿತಲಿ
ಮೆರೆಯಿಸುತಲಾಂದೋಳದಲಿ ವರ ವೀಧಿವೀಧಿಯಲಿ
ಇರದೆ ಪುರಬಾಹಿರದಲಿಳಿಸುತ
ಚರಣಕೆರಗಲ್ಕವರ ಹರಸುತ
ತೆರಳಿದನು ಗುರುನಾಥ ಕಪಿಲಾಶ್ರಮವ ಪಿಂದುಳುಹಿ ೧೨

ಬರುಬರುತೆ ಮಲೆಯಾಳಿವೆಡೆಯಣ
ಪರಮಶಿಷ್ಯರ ಬೆರಸಿ ಗುರುವರ
ಹರಿಸದಿಂ ಗರಪುರಿಂ ಸೇರುತ ಹಿರಿಯಮಠದೊಳಗೆ
ನೆರೆಯುತಂದಾ ಪಧಿಯನರಿಯುತ
ಲೊರೆದು ಬೊಮ್ಮವ ಚರವರಗೆ ತಾ
ಸರಿದ ಮುಂದಕೆ ಬಾಣದಾನವಗಿರಿಯ ನೆನಪಿನಲಿ ೧೩

ಗುರುವರನು ಬರುತಿರುವನೆಂದೆಂ
ಬುರುತರದ ಭಕ್ತಿಯಲಿ ನೆರೆ ಭೂ
ತರುಣಿ ಕೊಡೆಯನೆ ಪಿಡಿದಿರುವಳೆನೆ ತೋರುತಲಿ ಮೆರೆವ
ತರುವದೊಂದಿರಲದರ ನೆಳಲೊಳು
ತರಣಿ ತಾಪಕೆ ನಿಂದನಲ್ಲಿಯೆ
ಪರಮಶಿಷ್ಯರ ಕೂಡಿ ಮನದೊಲವಿಂದ ಗುರುನಾಥ ೧೪

ಚರವರನು ಮುಂಬರಿಯೆ ಪಯಣದಿ
ಧರೆಯೆನಿಪ ಮಾನಿನಿಯು ತಾ ರಚಿ
ಸಿರುವ ಪರತರ ತೋರಣದ ಸಾಲೆನ ೨ ತೋರುತಲಿ
ಮರಮರಂಗಳ ತಳಿರೆಸೆಯುತಿರೆ
ನಿರುಕಿಸುತೆ ಪರಿವಾರವನು ಕೂ
ಡಿರುತ ಪುರಗಳ ದಾಂಟಿ ಕೌಂಡಿನ್ಯಾಶ್ರಮಕೆ ಬಂದ ೧೫

ಗುರುವರನು ನೆರೆದಾತಪದಿ ಬಳ
ಲಿರುವನದರಿಂದರಿದರಿದು ನಾ
ನಿರುವುದನುಚಿತವೆನುತೆ ಯೋಚಿಸಿ ನೈಜಭಾವದಲಿ
ಭರದಿ ತಾನಂದಪರಶರಧಿಯ
ನಿರದೆ ಸೇರಿದನೆಂಬವೊಲು ಭಾ
ಸ್ಕರನ ಬಿಂಬವು ಮುಳುಗಿಮುದು ಸಂಧ್ಯಾಸಮಯುವೊದಗೆ ೧೬

ಇಂದುಧರನಪರಾವತಾರನು
ಬಂದು ಬಳಲಿಕೆಯಿಂದಿರುವ ತಾ
ನೆಂದೆನುತಲರಿದಂದು ತಣ್ಪದನೆಸಗಲತಿಶಯದಿ
ಚಂದದಿಂದ್ಯೈತಂದನೆನಲಾ
ನಂದದಿಂ ಪೂರ್ಣೇಂದುಬಿಂಬಮು
ದಂದುದಯಿಸಿತು ಮೂಡಣದ ದೆಸೆಯೊಳಗೆ ರಾಜಿಸುತ ೧೭

ಬಂದುದಲ್ಲಿಗೆ ಕೌಂಡಿನೀಪುರ
ದಿಂದ ಮಾನವವೃಂದ ಫಲಸುಮ
ದಿಂದ ಕೂಡುತೆ ನಾರಿಯರು ಸೊಬಗಿಂದಲೈತರುತ
ಅಂದು ಕಾಣ್ಕೆಯನಿತ್ತು ನಿತ್ಯಾ
ನಂದ ಸಲಹೆಂದೆನುತ ವಿನಮಿಸ
ಲಂದವರ ಹರಸುತ್ತಲೆಲ್ಲರ ಪೊರೆವನಾದರದಿ ೧೮

ಶಿವನ ನೆನಪಿಂದೇಳಿ ಶಯನದಿ
ಶಿವನೆನುತ ಬೆರೆಯುವುದು ಕರ್ಮದಿ
ಶಿವನೆ ಸರ್ವವೆನುತ್ತಲರಿವುದು ನಿಜದಮಾತಿನಲಿ
ಶಿವನ ನಡೆನುಡಿಯೊಳಗೆ ಬೆರೆಯಿಸಿ
ಶಿವನೆ ನೀವಾಗುವಿರಿ ಪರಿಕಿಸೆ
ಶಿವನ ಮಹಿಮೆಯ ಮೂರುಲೋಕದಿ ಕಂಡ ನರರಾರು ೧೯

ಕಲಹಿದೊಡೆಯುನ ನೆನೆವ ಶುನಕನ
ನೆಲೆಯರಿದು ಲೋಕವನು ಸೃಜಿಸುತೆ
ಕಲಹಿದವ ನಿಮ್ಮೊಡನಿರಲು ನೀವರಿಯದಾತನನು
ಫಲವನನುಭವಿಸದೆಯೆ ನರಕದ
ನೆಲೆಯುನನುಸರಿಸುವಿರಿ ಪರಶಿವ
ನೊಲುಮೆ ದೊರೆಯುವುದಂಗಲಿಂಗದ ಸಮರಸದಲೆಂದ ೨೦

ಅಂದು ಸಮರಾತ್ರಿಯಲಿ ಭಕ್ತರ
ವೃಂದ ಪಂಜನು ಪಿಡಿದ ಕರಯುಗ
ದಿಂದ ಸಾಲಾಗೈತರುತ ದೀವಟಿಗೆ ಸೇವೆಯನು
ಚಂದದಿಂದೆಸಗುತ್ತ ವರನುತಿ
ಯಿಂದ ಪಾಡುತ ವರವನೊಂದುತ
ಬಂದಿರುಗಿದುದು ನಿಜಪುರಕೆ ಪರಮಾನುರಾಗದಲಿ ೨೧

ಅನಿತರಲಿ ಸರಿಯಲ್ಕೆ ಭಕ್ತರು
ಸನುಮತನು ಶಿವಯೋಗನಿದ್ರೆಯ
ನನುಸರಿಸೆ ಮಲೆಯಾಳಭಕ್ತಸಮೂಹ ಕಾವಲಿರೆ
ಇನನುದಯಮಾಗಲ್ಕೆ ಮುನ್ನಮೆ
ಚಿನುಮಯನು ಮುಂಬರಿಸಿ ಪಯಣವ
ಘನತಳದ ವನಗಿರಿತಟಾಕವನೀಕ್ಷಿಸುತೆ ಮುದದಿ ೨೨

ಕರಡಿ ಕಾಡೆಮ್ಮೆಯ ನಿವಹ ತಾ
ಭರದೆ ಸರಿಸರಿದೋಡಿ ಬರುತಿರೆ
ಶರಭ ಶಾರ್ದೂಲಾದಿ ಮೃಗತತಿ ಬೆದರುತೋಡುತಿರೆ
ಕರಿ ಹರಿಣ ಕೇಸರಿವಿತಾನವ
ದಿರದೆ ಪರಿದಾಡುತಿರೆ ಬೇಟೆಯ
ತರದಲಬ್ಬರದಿಂದ ಬಂದುದು ವನದಿ ಬಿಯದ ಪಡೆ ೨೩

ಅಂದು ಶಿವಯೋಗಿಯನು ಕಾಣುತ
ಮಂದನಭಿನಮಿಸುತ ವಿನೋದದಿ
ತಂದರಾ ಫಲಮಧುವ ಕಾಣ್ಕೆಯನೀಯೆ ಗುರುವರಗೆ
ಚಂದದಿಂ ಸ್ವೀಕರಿಸಿ ಹರಸುತ
ಮುಂದುವರಿದನು ಪಯಣದಲಿ ಜನ
ವೃಂದದಿಂದೊಡಗೂಡಿ ಗಿರಿತಟದೊಳಗೆ ತಾ ನಿಂದ ೨೪

ತರತರದಲಿಹ ಧಾತುಚಯದಿಂ
ಪರತರದ ಪಾಷಾಣಮಯದಿಂ
ಮೆರೆವ ಗಂಧತಮಾಲ ಚಂದನವೃಕ್ಷತತಿಯಿಂದ
ಗಿರಿಯೆಸೆಯುಲಂದೊಂದು ಗುಹೆಯನು
ನಿರುಕಿಸುತ ಗುರುನಾಥ ಶಿಷ್ಯರ
ವೆರಸಿ ತಾನೊಳಪೊಕ್ಕನಂದು ಶಿವಾರ್ಚನಾದರದಿ ೨೫

ಲಿಂಗಪೂಜೆಯ ಮುಗಿಸಿ ಭಸಿತದ
ಮಂಗಳಾಂಗದೊಳೆಸೆದು ಪರಮ ಚಿ
ದಂಗಮೂರ್ತಿಯು ಸಾರತರ ಸದ್ಭಕ್ತಿಮಾನಸದಿ
ಲಿಂಗಸಂಗದ ಸುಖದಿ ಬೆರೆಯುತ
ತುಂಗ ಪರಮಾನಂದದೊಡನೆಯ
ನಂಗಹರ ಸಮರೂಪನೆಸೆದನು ಪಯಣಕನುವಾಗಿ ೨೬

ಪರಮ ಪಂಚಾಕ್ಷರಿಯ ಪಠಿಸುತ
ಗುರುವು ಪಯಣದಮೇಲೆ ಪಯಣದಿ
ಬರುತ ನದಿಗಳ ದಾಂಟಿ ವಿಪಿನವ ಮೀರಿ ಗಿರಿಗಳನು
ನಿರುಕಿಸುತ ಮಲೆಯಾಳಿಪೆಂಬುದ
ನರಿದು ಭಕ್ತರ ಕರೆದು ಮುಂದಿನ
ಪರಿಯನರಿಸುತಲೆಸೆದನಂದಾ ದೇಶದಾದಿಯಲಿ ೨೭

ಎತ್ತನೋಡಿದೊಡತ್ತ ಘಟ್ಟಗ
ಳೆತ್ತನೋಡಿದೊಡತ್ತ ಬೆಟ್ಟಗ
ಳೆತ್ತ ನೋಡಿದೊಡತ್ತ ತಿಟ್ಟುಗಳೆತ್ತ ದಿಟ್ಟಿಸಲು
ಸುತ್ತ ತೆಂಗಿನತೋಟವದರೊಳ
ಗೆತ್ತ ಕಾಪಿನಕೂಟವದರೊಳ
ಗೆತ್ತ ಜನರೋಡಾಟವೆಸೆದುದು ಗುರುವರನ ಮುಂದೆ ೨೮

ಗುರುವರನ ಬರುವರಿದು ದೇಶದ
ನರತು ನಯವಿನಯಾದಿ ಭಕ್ತಿಯ
ವೆರಸಿ ಫಲಪುಷ್ಪಾದಿಗಳ ಕರದಿಂದ ಪಿಡಿದೊಡನೆ
ಬರುತ ಯಮಿವರಗರ್ಪಿಸುತ ಪದ
ಸರಸಿಜಕೆ ನಮಿಸಲ್ಕೆ ಹರಸುತ
ಪುರವ ತಾನೊಳಪೊಕ್ಕ ಸುತ್ತೂರೀಶ ಭವನಾಶ ೨೯

ಅಂಗದೊಳಗಾ ಸಾತಸೀರೆಯ
ನಂಗನೆಯರುಡುತಂದೆ ಭಸಿತವ
ನಿಂಗಿತಜ್ಞತೆಯಿಂದ ಧರಿಸುತಲಕ್ಷಮಾಲೆಗಳ
ಸಿಂಗರದಲೈತರುತಲಾ ಸಾ
ರಂಗನಯನೆಯರೆಲ್ಲ ಕೂಡುತೆ
ಮಂಗಳವ ಪಾಡುತಲಿ ಗುರುಪದವನಜಕೆರಗಿದರು ೩೦

ಲಿಂಗವಂಗದಲಿದ್ದ ಮಾತ್ರವೆ
ಮಂಗಳದ ಪರಪದವು ದೊರೆವುದೆ
ಲಿಂಗದಂಗದ ಸಂಗವನು ತಿಳಿಯದಿರೆ ಗುರುವಿನಲಿ
ಭಂಗಬರುವುದು ಸದ್ಗತಿಗೆ ಕೇ
ಳಂಗವದು ನಡೆಯಿಂದ ಪರತರ
ಲಿಂಗಸಂಗವ ಪಡೆಯಬೇಕೆಂದೆನುತ ಪೇಳಿದನು ೩೧

ಕರುಣದಿಂ ಹಲಬರಿಗೆ ಮುಕ್ತಿಯ
ನೆರೆವ ಮಂತ್ರವ ಬೋಧಿಸುತ ಕೆಲ
ಬರಲು ದೀಕ್ಷಾಕ್ರಮವನನುಗೊಳಿಸುತ್ತ ನಲವಿನಲಿ
ಪರತರದ ಲಿಂಗಾಂಗ ಸಮರಸ
ದಿರುವನರುಪುತಲುಳಿದರಿಗೆ ತಾ
ಮೆರೆದ ಭಕ್ತಹೃದಬ್ಜಹಂಸವಿಲಾಸಗುಣದಿಂದ ೩೨

ಪಾಪಪುಣ್ಯದ ನೆಲೆಯನರುಪುತ
ಲಾ ಪವಿತ್ರಶಿವತ್ವಬರುವುದ
ನಾ ಪರಿಯೊಳೊರೆಯುತ್ತ ಲಿಂಗವ ಧರಿಸಿ ಬಹುಜನಕೆ
ಭೂಪವಂದಿತನಾಗಿ ವರ ನಿ
ರ್ಲೇಪ ಸಕಲರ ಹರಸಿ ಮುಂದದಲಿ
ಗೋಪವಾಹನ ನೆನೆದು ಹೊರಟನು ಬಾಣಪರ್ವತಕೆ ೩೩

ಭರದಲೆರಗಲು ಹೊನ್ನುದುಂಬಿಗ
ಳರದೆ ಝೇಂಕರಿಸುತ್ತ ಗುರುವರ
ಕರದಲುದಿ ತಡೆಗೆಯ್ಯುತೇರುತ ಗಿರಿಯನೊಲವಿನಲಿ
ಸುರುಚಿ ಕಪಿಲಾನದಿಯ ಜನನದ
ಕುರುಪರಿದು ಗುರುನಂಜದೇವನು
ಮೆರೆದನಾ ಕಪಿಲಾಶ್ರಮದಿ ಶಿವಯೋಗಮುದ್ರೆಯಲಿ ೩೪

ಸರ್ವಭಕ್ತಚಯಾಭಿವರ್ಧಿನಿ
ಸರ್ವಭೂತಕುಲಾತಿವರ್ತಿನಿ
ಸರ್ವಸೌಮಾಂಗಲ್ಯದಾಯಿನಿ ವಿಮಲೆ ಶುಭವಾಣಿ
ಸರ್ವಲೋಕಹಿತಪ್ರದಾಯಿನಿ
ಶರ್ವಚಿತ್ತೋಲ್ಲಾಸಕಾರಿಣಿ
ಸರ್ವಮಂಗಳೆ ಸಲಹು ಚಾಮುಂಡಾಂಬೆ ಜಗದಂಬೆ ೩೫

# ಗುರು ಚೆನ್ನಬಸವ ಶಿವಾಚಾರ್ಯ ಕಥನಂ

ಚೆನಬಸವದೇಶಿಕನು ತಾನಂ
ದನುಪಮಿತ ಸೌರಾಷ್ಟ್ರ ಪೀಠದಿ
ಘನತರದ ಮಹಿಮೆಯಲಿ ರಾಜಿಸುತಿರ್ದನಂದಿನಲಿ

ಶ್ರೀಡಮುಖ ದಿಕ್ಪಾಲ ವಂದಿತ
ಪಾದಪಂಕಜ ಹೈಮವತ್ಯಾ
ವೇದ ನಿಗಮಾತೀತ ಸಂಚರಿತ ಭರಿತ ಭಸಿತಾಂಗ
ನಾದಬಿಂದುಕಳಾಮಯನೆ ಸುವಿ
ನೋದ ಪಾವನಮೂರ್ತಿ ಮೌನಿ ಶಿ
ರಾದ ವಿನಮಿತ ಕಾಡು ಶುಭವ ನೀಂ ಸೋಮನಾಥೇಶ ೧

ಹಿತದಿ ಲಾಲಿಸು ಸಿದ್ಧಲಿಂಗನೆ
ಮತವನುದ್ಧರಿಸಲ್ಕೆ ಬೋಧೆಯ
ನತಿಶಯದಲಿರಡೆಸಗಿದಾ ಚೆನಬಸವನುರುಕಥೆಯ
ನುತಿಸುತಾನಂದದಲಿ ಮುಂದಿನ
ಗತಿಯ ಸಾಧನಕಾಗಿ ನೆರೆ ಸ
ಮ್ಮತಿಯನಾಂತೊರೆಯುವೆನು ಕೇಳಿದನೆಂದ ಗುರುನಾಥ ೨

ಶರಣಪತಿ ಗುರುನಂಜದೇವನು
ತೆರಳಲಂದವನತ್ತಲಿತ್ತಲು
ಚರವರನ ಗದ್ದುಗೆಯ ಪೂಜೆಯನೆಸಗಲತಿಶಯದಿ
ಪರಮ ದಿವ್ಯ ಸಹಸ್ರಕಮಲದ
ಶಿರದಲಂಕರಿಸುತೆ ವಿಲಾಸದಿ
ಮೆರೆದನಾ ದೀಪೋತ್ಸವವ ರಚಿಸುತಲಿ ಗುರುನಾಥ ೩

ಗುರುವಿನಾಜ್ಞೆಯನಾಂತು ತಾನು
ದ್ಧರಿಸೆ ಶಿವಮತವನು ವಿಲಾಸದಿ
ಪರಿಣತರ ಚಯವೆರೆದು ಮುಕ್ತರ ಮಧ್ಯದೊಳಗಿರುತೆ
ಮೆರೆಯುತಿರೆ ಚೆನಬಸವದೇವನು
ಧರದಲಾ ಗಾರ್ಗ್ಯಾಶ್ರಮವ ತಾ
ತೊರೆದು ಬಂದಾ ರೇವಣನು ಪೀಠಾಧಿಪನ ಕಂಡ ೪

ಅಂದು ಚಂದ್ರಿಕೆಯನು ಚಕೋರದ
ಸಂದಣಿಯು ನಿರುಕಿಸಿ ನಲಿವವೊಲ
ಮಂದಗುಣಿಯೊಲವಿಂದಲಿರಿಸಿದ ರಚಿತಪುಸ್ತಕವ
ಇಂದು ನೀನೀ ಕಬ್ಬವನು ಕೃಪೆ
ಯಿಂದ ಪರಿಕಿಸುತೆನ್ನ ತಿಳುಹುವು
ದೆಂದು ಪೇಳಿದನಾಗ ಸೋಸಲೆ ರೇವಣಾರಾಧ್ಯ ೫

ಮುದುಗೆರೆಯ ರಘುವಪ್ಪನಾಯಕ
ನಿದನು ಬರೆಯಿಸಿದನು ಸುಮೋದದಿ
ಸದಮಲನೆ ನಾನಿತ್ತೆ ನಿನಗೆನಲೋದು ನೀನೆಂದು
ಮುದದಿ ಪೇಳಲು ಯತಿಯು ತಾನಂ
ದದನು ಪಠಿಸಲು ಮೊದಲಿನಿಂದಲಿ
ತುದಿಯ ಪರಿಯಂತರವು ಮೆಚ್ಚಿದ ಗುರುವರನು ಕವಿಯ ೬

ಕ್ಷೋಣಿಪತಿ ವಿಜಯೇಂದ್ರಚೋಳನ
ರೇಣುಕನು ವಾದದಲಿ ಜಯಿಸುತ
ಲೇಣಧರ ಸನ್ಮತದ ಬೋಧನೆಯೆಸಗುತಾತನಲಿ
ಮಾಣಿಸುತ ಪರಮತದ ತಿಳಿವಂ
ಪ್ರಾಣಲಿಂಗವನೊರೆದ ಕಥೆಯಂ
ಕ್ಷೀಣದುರಿತವ ಕೇಳಿ ನಲಿದರು ಸಕಲಸಾಧಕರು ೭

ಪರಮಕಾವ್ಯದಲಿಹ ರಹಸ್ಯವ
ನಿರದೆ ವಿವರಿಸುತರ್ಥವನು ನೀ
ಬರೆವುದೆಂದೆನಲಾಗ ಚರವರ ಸಾನುರಾಗದಲಿ
ವರಕವಿಯು ತಾನೊಪ್ಪಿದನು ಗುರು
ವರನು ಸಮ್ಮಾನಿಸಿದನವನನು
ನೆರೆದ ಸಭೆಯಲಿ ಪಾರಿತೋಷಕ ವಸ್ತುಚಯದಿಂದ ೮

ಅದನರಿತು ಸದ್ಭಕ್ತರೆಲ್ಲರು
ವಿದಿತಮಾನಸರಾಗಿ ನುತಿಸುತ
ಲೊದವಿದತಿಶಯ ಭಕ್ತಿಭರದೊಳು ಕೂಡಿ ನಲಿಯುತಲಿ
ಸದಯ ಜಯಜಯ ಶರಣ ಸಂಚಯ
ಮುದವೆ ಜಯಜಯ ಪರಮಮುಕ್ತಿಯ
ಪದವೆ ಜಯಜಯವೆಂದು ಕೊಂಡಾಡಿದುದು ಮೋದದಲಿ ೯

ಇಂತುಸಿರಿ ಜನನಿಚಯ ತೆರಳ
ಲ್ಕಂತು ಗುರು ಚೆನಬಸವದೇವನು
ಕಂತುಹರನಾಜ್ಞೆಯನು ಯೋಗದಲಾಂತು ವಿನಯದಲಿ
ಅಂತರಂಗದಿ ಯೋಚಿಸುತ ನಿ
ಶ್ಚಿಂತೆಯಲಿ ಕಳೆಯಿಸುತ ಭಕ್ತರ
ನಂತರಂದ್ವೈತರಲು ಹರಸಿದನೊಲಿದು ಗುರುನಾಥ ೧೦

ನೆರೆದಿರುವ ಭಕ್ತರಿಗೆ ಮಾಹೇ
ಶ್ವರಂಗಾದರದಾ ಪ್ರಸಾದಿ ವಿ
ಸರಕೆ ಹರಣದ ಲಿಂಗಿಸಂಚಯಕಂತು ಶರಣರಿಗೆ
ವರಶಿವೈಕ್ಯರ ನೆರವಿಗೊರೆಯುತ
ಪರನ ಪರತರ ಮತದ ಮಹಿಮೆಯ
ಪರಮ ಶಿವಲಿಂಗಾಂಗಸಂಗವನೊರೆದನಾಚಾರ್ಯ ೧೧

ಬರಿಸುತಾ ಪಂಚಾಕ್ಷರಾರ್ಯನ
ಕರೆದ ಸಭೆಯೊಳು ಶೈವತತ್ತ್ವವ
ತೊರೆದು ಮೋಕ್ಷದ ಪರಮ ಮಾರ್ಗವನರುಹಿ ಸಾದರದಿ
ದುರಿತಚಯದುತ್ಪತ್ತಿ ವಿಧವನು
ವಿರತಿಗತಿಯಲಿ ಪುಣ್ಯಬರುವುದ
ಸರಿಸಿ ಪಟ್ಟವಕಟ್ಟಿ ಮುಂದಣ ಪಯಣಕನುವಾದ ೧೨

ಹಿಂದೆ ಮುಂದೆ ಮಹಾಮಹೇಶ್ವರ
ವೃಂದವಾವರಿಸಿರಲು ಪುರಜನ
ವಂದು ವಿನಮಿಸೆ ಹರಸುತೊರೆದನು ಪರಮಹರ್ಷದಲಿ
ಇಂದು ಗುರುವಾಗಿಹನ ನಂಬುತೆ
ತಂದು ಕಾಣ್ಕೆಯನಿತ್ತು ನಮಿಸುತೆ
ಮುಂದುವರಿಸಿರಿ ಪರಮಲಿಂಗಾಂಗೈಕ್ಯಮಾರ್ಗವನು ೧೩

ಪಶರಿಗುಪಕೃತಿ ಮಾಡುತಿರಿ ಪರ
ತರದ ಜಾನವನು ಸಾಧಿಸಿ ಹರ
ಶರಣರನು ಸೇವಿಸುತಲರಿಯಿರಿ ಮೋಕ್ಷಮಾರ್ಗವನು
ಮರೆಯದಿರಿ ನಿಮಗಿಪ್ಪವಾದುದ
ತೊರೆಯದಿರಿ ಪರಮೇಶಭಕ್ತಿಯ
ಸರಿಯದಿರಿ ಶಿವತತ್ತ್ವಡೆಡೆಯಿಂದೆಂದ ಗುರುನಾಥ ೧೪

ಮಾಡುವುದ ಪರಿಕಿಸುತ ಮಾಡಿರಿ
ಕೇಡು ಬರುವುದನರಿದು ನಡೆಯಿರಿ
ಕೂಡಿಯಗಲದೆ ಬಾಳುತಿರುವುದು ತಿಳಿದು ನೀತಿಯನು
ನೋಡಲಾಗದು ಪರರ ವಸ್ತುವ
ಕಾಡಿ ಬದುಕುವ ನರರ ತೊರೆವುದು
ಮಾಡುವುದು ವರಧರ್ಮಕಾರ್ಯವನೆಂದ ಗುರುನಾಥ ೧೫

ಕೆಡಿಸಿ ನಡೆನುಡಿಯೆರಕದಂದವ
ಬಿಡುತ ಪರಶಿವಧರ್ಮಚಿಂತೆಯ
ಕೆಡುನುಡಿಯ ನುಡಿಯುತ್ತ ಲಿಂಗದ ಭವಿಗಳವರೆಲ್ಲ
ಒಡವೆ ಕೂಡುತಲಿಂಗಭವಿಗಳ
ನಡೆದು ಕೆಡುವರು ದುಡುಕಿಸಿಂದಲಿ
ಮೃಡನಸೇವೆಯನುಳಿದು ಮನುಜರು ಮಡಿವರವರೆಂದ ೧೬

ಹಿಂದೆ ಬಸವೇಶ್ವರನು ಶಿವಮತ
ದಂದವನು ಹರಡುತ್ತ ಜಗದೊಳು
ಸಂದೆಗವನಳಿಸುತ್ತ ಜನರೊಳು ತತ್ತ್ವಬೋಧನೆಯ
ಅಂದು ವಿಸ್ತರಿಸುತ್ತ ಶರಣರ
ಸಂದಣಿಯನೊಡವೆರದು ಮೆರೆದನು
ಚಂದದಿಂದಿದನರಿದು ಬಾಳುವುದೆಂದ ಗುರುನಾಥ ೧೭

ವೀರಶೈವನು ತನ್ನ ಭೋಗಕೆ
ಸಾರಿ ಬಂದಿರುತಿರುವ ವಸ್ತುವಿ
ಚಾರವನು ಮಾಡುತ್ತ ದೋಷವದಿಲ್ಲದಿರೆ ಮುದದಿ
ಮಾರಹರಗರ್ಪಿಸುತ ಸೇವಿಸೆ
ಸಾರತರ ಪರಿಣಾಮವದರಿಂ
ಸೇರುವನು ನಿಜಭಕ್ತ ಮುಕ್ತಿಯನೆಂದ ಗುರುನಾಥ ೧೮

ಬಂದು ಪಶ್ಚಿಮವಾಹಿನೀತಟ
ಕಂದು ಶರಣರವೆರಸಿ ನಿಜಮತ
ದಂದವನು ಬೋಧಿಸಲು ಬಹುವಿಧ ಪತ್ರಪುಷ್ಪಗಳ
ತಂದುಮಡಗುತಲಿತಲು ಭಕ್ತರು
ಮಿಂದು ಮಡಿಯನುಡುತ್ತ ಗುರುವರ
ಚಂದದಿಂ ಶಿವಲಿಂಗಪೂಜೆಯ ಮಾಡಿದನು ಮುದದಿ ೧೯

ಅಂಗವದು ನಿಜದಿಂದ ಕಾಪುಪ
ಸಂಗದಲಿ ನೆಲೆಸಿರಲು ಸೇವೆಯು
ಭಂಗವಿಲ್ಲದೆ ನಡೆದುಬರುವುದು ಲೋಕದೃಷ್ಟಿಯಲಿ
ಅಂಗವದು ಸಮರಸದಿ ನಿತ್ಯವು
ಲಿಂಗದೊಡನಿರುತಿರಲು ನಿಶ್ಚಲ
ದಿಂಗಿತಜ್ಞತೆಯಿಂದ ನಡೆವುದು ಶಿವನ ಪೂಜೆಯದು ೨೦

ನದಿಯು ಬಳಿಯೊಳು ಕೆಲದಿನಂಗಳು
ಮುದದಿನಿರುತಿರಲೊಲಿದು ಯತಿಪತಿ
ಯದನು ಕೇಳುತ ದೊಡ್ಡ ಕೃಷ್ಣಕ್ಷಿತಿಪನೊಲವಿಂದ
ಒದಗಿದತಿಶಯ ಹರ್ಷದಿಂದಲಿ
ಸದಯ ಗುರುವರನೆಡೆಯ ಸೇರುತ
ಪದುಳದಿಂ ಮಠವೊಂದ ವಿರಚಿಸಿ ಚರನಿಗರ್ಪಿಸಿದ ೨೧

ವಿರತಿಜನರೊಡನಿರುವ ಯತಿವರ
ನಿರದೆ ತಾ ಪಂಚಾಕ್ಷರಾರ್ಯನ
ಕರೆದು ಮಠದಧಿಕಾರವೀಯುತ ಯೋಗಮಾರ್ಗದಲಿ
ನಿರತನಾಗಿಹುದೆನುತಲರುಹುತ
ಪೊರಟನಾ ಗುರುನಾಥ ಪರಶಿವ
ಶರಣರೊಡಗೂಡುತಲಿ ಪಶ್ಚಿಮವಾಹಿನಿಯನುಳಿದು ೨೨

ಪರಮಪಂಚಾಕ್ಷರಿಯು ಪರಿಸುತ
ತೆರಳಿದನು ಚೆನಬಸವ ದೇಶಿಕ
ಶರಣಪೂಜಿತ ತಾನು ಶಿವನಸಮುದ್ರದೆಡೆಯಿರುವ
ಪರಮ ಸಪ್ತಯತೀಂದ್ರರಾಶ್ರಮ
ವಿರುವೆಡೆಗೆ ಬರುತಂದು ನದಿಯಾ
ಕರೆಯೊಳಗೆ ನೆಲೆಸಿರ್ದ ಶಿವಲಿಂಗಾತ್ಮ ಸಂಗದಲಿ ೨೩

ಅಂದು ಸಪ್ತಯತೀಂದ್ರರಾಶ್ರಮ
ದಿಂದ ಶರಣರ ಕೂಡಿ ಮನದೊಲ
ವಿಂದ ಮುಂದಣ ಪಯಣಕನುವಾಗುತ್ತ ಹರಿಸದಲಿ
ಬಂದಭಕ್ತರ ಹರಸಿ ಕಾಣ್ಕೆಯ
ನಂದದಿಂ ಕೈಕೊಳುತ ಚರವರ
ನಂದು ಮುದದಿಂ ಬಂದ ವೈಶಂಪಾಯನಾಶ್ರಮಕೆ ೨೪

ಏನುತ ವೈಶಂಪಾಯತೀರ್ಥದ
ಸನಿಹದೊಳಗಿಳಿಯುತ್ತ ಭಕ್ತರ
ನನಿಬರೊಡಗೂಡುತ್ತ ಶಿವಸಂಕಲ್ಪಹೃದಯದಲಿ
ಘನಮಹಿಮ ಪರಶಿವನ ಪೂಜೆಯ
ವಿನಯಭಾವದೊಳೊಲಿದು ಮಾಡುತ
ಚಿನುಮಯನು ಹೊರಹೊರಟ ಮಡಿವಾಳಕ್ಕೆ ಮುಂಕೊಂಡು ೨೫

ದಾರಿಯಲಿ ಹುಲಿಯೊಂದು ಬರುತಲಿ
ಮೀರಿ ಗರ್ಜಿಸಿ ಗುರುವಿನಿದಿರೊಳು
ಸಾರಿ ನಿಲ್ಲಲು ಗುರುವು ತಾನದ ಕಂಡು ಶಾಂತಿಯಲಿ
ತೋರಿ ಹಸ್ತವ ಪೋಗು ನೀನೆನೆ
ಹಾರಿತದು ನಲವಿಂದ ಕಾಡಿಗ
ದಾರುಬಲ್ಲರು ಪರಮಪರಶಿವಶರಣಮಹಿಮೆಯನು ೨೬

ನೆರೆದ ಭಕ್ತರು ಪೊಗಳುತಿರುತಿರ
ಲುರುಭರದಿ ಗುರುವರನು ಬರುವುದ
ನರಿದು ನೆಲೆನೆಲೆಯಿಂದ ಬರುತಲಿ ಶರಣಸಂದೋಹ
ಕರಗಳನು ಜೋಡಿಸುತ ಮಣಿಯುತ
ಹರಕೆಗಳನೊಪ್ಪಿಸುತ ಸರಿಸದ
ಲಿರುತ ಮಡಿವಾಳಕ್ಕೆ ಬಿಜಯಂಗೈಸಿದುದು ಯತಿಯ ೨೭

ನರಪರಿಗೆ ಕೃಷಿಕರಿಗೆ ವಣಿಜರ
ನೆರವಿಗೊಲಿಯುತೆ ತಂತುವಾಯರ
ತೆರಳಿಕೆಗೆ ವಿಧವಿಧದ ಕಸುಬಿನ ನರರ ತಿಂತಿಣಿಗೆ
ಒರೆಯುತಲಿ ಶಿವಮಂತ್ರದರ್ಥವ
ಪರಮಶಿವಲಿಂಗೈಕ್ಯ ಮರ್ಮವ
ಗುರುವರನು ಮೆರೆದಿರ್ದನಾ ಮಡಿವಾಳದೇಗುಲದಿ ೨೮

ಭಾನುಕೋಟಿ ಸಮಾನಶೋಭಿನಿ
ಸಾನುಭೂತಿ ವರಪ್ರದಾಯಿನಿ
ದಾನವಾಹಂಕಾರಭಂಜಿನಿ ವಿಮಲೆ ಶರ್ವಾಣಿ
ಜ್ಞಾನದಾಯಿನಿ ದೀನಪಾಲಿನಿ
ಮಾನವಾವಳಿಪಂಕಶೋಷಿಣಿ
ಮೀನಲೋಚನೆ ಸಲಹು ಚಾಮುಂಡಾಂಬೆ ಜಗದಂಬೆ ೨೯

# ಪಂಚಾಕ್ಷರ ದೇಶಿಕೇಂದ್ರ ಕಥನಂ

**ಹರನ ಪಂಚಾಕ್ಷರದ ಮಹಿಮೆಯ**
**ನೊರೆಯುತಾ ಪಂಚಾಕ್ಷರಾರ್ಯನು**
**ಮೆರೆದನಾ ಸುತ್ತೂರ ಸಿಂಹಾಸನದಿ ಮೋದದಲಿ**

ಶ್ರೀಮದಮರವ್ರಾತ ಪಾಲನ
ಸಾಮಜಾಸುರಮಥನ ಸುಗುಣೋ
ದ್ದಾಮ ಕಲುಷವಿರಾಮ ಜಗದಭಿರಾಮ ಧೃತಸೋಮ
ಸಾಮಗಾನಪ್ರೇಮ ನತ ರಘು
ರಾಮ ಯಮಿಪರಿವಾರವಂದಿತ
ಭೀಮ ಕುಡು ಸಂಪದವ ಮುದದಿಂ ಸೋಮನಾಥೇಶ ೧

ಮೆರೆದ ಕಾರ್ಯಹ ವಿಭುವಿನುತತಾತರ
ಚರಣಸರಸಿಜ ಕರುಣವಡೆದಾ
ಶರಣ ಲಾಲಿಸು ಸಿದ್ಧಲಿಂಗನೆ ಸರಸಗುಣಹಾರ
ಪರಮಪಂಚಾಕ್ಷರಿಯ ಮಂತ್ರದಿ
ಚೆರೆದ ಪಂಚಾಕ್ಷರಿಯ ದೇವನ
ಚರಿತೆಯನು ಮುದದಿಂದಲೊರೆಯುವೆನೆಂದ ಗುರುನಾಥ ೨

ಮುಂದೆ ಪಂಚಾಕ್ಷರಿಯ ಮಂತ್ರದ
ಹೊಂದುವನು ಮಹಿಮೆಯನು ತಾನಿವ
ನೆಂದರಿದು ಯೋಗದಲಿ ವರ ಚನಬಸವದೇಶಿಕನು
ಚಂದದಿಂ ಪಂಚಾಕ್ಷರೀ ಗುರು
ವೆಂದೆನುತೆ ಪೆಸರಿಟ್ಟು ತೆರಳಿರ
ಲಂದಿನಿಂದಾ ಮಹಿಮೆಯಲಿ ತಾನೆಸೆದ ಗುರುನಾಥ ೩

ಘನತರದ ಪಂಚಾಕ್ಷರಾರ್ಣವ
ಮನೆಮನೆಯಲಿರುತಿರುವ ಜನಗಳಿ
ಗನುವಿನಿಂದೊರೆಯುತ್ತ ತತ್ತ್ವದ ನೆಲೆಯ ಬೋಧಿಸುತ
ಮನಸಿಜಾರಿಯ ಪಾದಪದ್ಮವ
ನನುವಿನಿಂದನುದಿನದಿ ಜಾನಿಸು
ತನಘ ಪಂಚಾಕ್ಷರಿಯದೇವನು ಮೆರೆದ ಮಹಿಮೆಯಲಿ ೪

ಒಂದುದಿನದಲದೊರ್ವ ಭಕ್ತನು
ಬಂದು ಗುರುವಿನ ಚರಣಕಂದಭಿ
ವಂದಿಸುತ ಲಿಂಗಾಂಗವಿವರವ ಮತದ ಸಾರವನು
ಇಂದು ಬೋಧಿಸುತೆನ್ನ ಮನಕಾ
ನಂದವನು ಪೊಂದಿಸೆನೆ ಯಮಿಚರ
ವೃಂದಮಧ್ಯದಲೊರೆದ ತತ್ತ್ವವನಾಗಳೊಲವಿಂದ ೫

ಖಗನಿವಹ ಪಕ್ಕಗಳ ಬಲದಿಂ
ಸೊಗಬಗೆಯನಾಂತಂದು ಜವದಿಂ
ಗಗನಕುರೆ ಪಾರ್ವಂತೆ ಮಾನವನವನು ಧರಣಿಯಲಿ
ಮಿಗಿಲೆನಿಸುವಾ ಕಿರಿಯು ಜಾನದ
ಬಗೆಯೊಳಿರೆ ತಾನದರ ಬಲದಲಿ
ಸೊಗಸಿನಿಂದಾ ಮುಕ್ತಿಪದವಿಯು ಸೇರುತಿಹನೆಂದ ೬

ಗುರುವಿನಿಂ ತಾ ಪಡೆದ ಲಿಂಗವ
ಕರದೊಳುರುತರ ಭಕ್ತಿಯಿಂದದ
ನಿರಿಸುತಂದುಪಚರಿಸಿ ಪೂಜಾಕ್ರಮವನನುಸರಿಸಿ
ಹೊರಗಡೆಯು ಕಾಯಾವಲಂಬನ
ವಿರದೆ ತನ್ನಯ ಮನವನದರಲಿ
ಬೆರೆಯಿಸುವನವ ವೀರಶೈವಾಭಿದನು ಕೇಳೆಂದ ೭

ನಾಕಲೋಕದ ಸುಖವ ಬಯಸುತ
ನೇಕರಾ ಯಜ್ಞಾದಿ ಕರ್ಮವ
ನೇಕಚಿತ್ತದಿಗೆಯ್ದರಾದೊಡೆ ಮೋಕ್ಷಲಭಿಸುವುದೆ
ಕಾಕುಮತಿಗೊಳಗಾಗದೆಯೆ ತಾ
ನೇಕವಾಶಲು ನಡೆನುಡಿಯ ಮು
ಕ್ತೀಕೆ ಮೋಕ್ಷದ ಬಯಕೆ ಸಮರಸಭಾವಮುಳ್ಳವನೆ ೮

ಹರನು ತಾ ಲಿಂಗಾಂಗವೆಂದೆಂ
ಬೆರಡು ತೆರನಾದನು ಕಣಾ ಕೇ
ಳಿರದೆಯಂಗತ್ಯಾಗಭೋಗಸುಯೋಗವೆಂದಾಯ್ತು
ಮೆರೆವ ಲಿಂಗವದಿಷ್ಟವಾದುದು
ಪರಮ ಹರಣದ ಲಿಂಗಭಾವದ
ಸುರುಚಿಲಿಂಗವದಾದುದೀ ಪರಿಯರಿದು ನೋಡೆಂದ ೯

ಸುರುಚಿ ಪರತರದಿಷ್ಟಲಿಂಗದಿ
ಬೆರೆದಿರುವುದಾಚಾರ ಗುರುವೆಂ
ಬೆರಡು ಹರಣದ ಲಿಂಗದಲಿ ಶಿವಜಂಗಮಾಭಿದದಿ
ಇರುವವೆರಡಾ ಭಾವಲಿಂಗದಿ
ಪರತರದ ಸುವಿಚಾರಗುಣದಿಂ
ದರಿದೊಡಂದಾ ಪ್ರಸಾದ ಮಹಾಲಿಂಗವೆರಡಾಯ್ತು ೧೦

ತ್ಯಾಗಭಕ್ತ ಮಹೇಶವೆಂದನು
ರಾಗದಿಂದೆರಡಾಯ್ತು ಭೇದವು
ಭೋಗಭೇದವದಾ ಪ್ರಸಾದಿ ಪ್ರಾಣಲಿಂಗಿಯದು
ಯೋಗದೇಹದಲಾದುದಾ ಬಲು
ಬೇಗ ಶರಣೈಕ್ಯತೆಯ ಭೇದವು
ಸಾಗಿಸುವುದಿದನರಿಯೆ ಮುಕ್ತಿಯಪದವಿಗೊಲವಿಂದ ೧೧

ಪರಮಭಕ್ತಿಯು ಕರ್ಮಲಯ ತಾ
ನಿರುತ ನಿರ್ಮಲಮತಿ ವಿಚಾರ ವಿ
ಸರವು ನಿರಹಂಕಾರವಂದಾ ಜ್ಞಾನಭಾವನೆಯು
ಮೆರೆಯೆ ಕರದೊಳಗಿಷ್ಟಲಿಂಗವ
ಧರಿಸಿ ಚಿತ್ತವನಿರಿಸುತದರಲಿ
ಭರದಲಂದಂತರದಲಿಂಗವ ಪೂಜಿಸಲ್ಕೆಣಿಸಿ ೧೨

ನೆರೆ ಬಕುತನಾಚಾರಲಿಂಗವ
ನಿರದೆ ಶ್ರದ್ಧಾಭಕ್ತಿಯಿಂದಲಿ
ಪರಿಲಸಿತದ ಸುಚಿತ್ತ ಕರದಿ ನಕಾರಮಂತ್ರದಲಿ
ಭರದಿ ಪೂಜಿಸಿ ಗಂಧವಸ್ತುವ
ಪರತರದಲಾಘ್ರಾಣಮುಖದಲಿ
ಹರಿಸದಿಂದರ್ಪಿಪುದು ಕೇಳಿದನೆಂದನಾಚಾರ್ಯ ೧೩

ಪರಮ ಗುರುಲಿಂಗವನು ನಿಷ್ಠೆಯು
ಬೆರೆದ ಭಕ್ತಿಯಿನಾ ಮಹೇಶ್ವರ
ವೆರಸುತೊಡನೆ ಸುಬುದ್ಧಿ ಕರದಿ ಮಕಾರಮಂತ್ರವನು
ಒರೆಯುತರ್ಚಿಸಿ ರಸಪದಾರ್ಥವ
ನಿರದೆ ಜಿಹ್ವೇಂದ್ರಿಯದ ಮುಖದೊಳೆ
ಗರುವಿನಿಂದರ್ಪಿಪುದ ಲಾಲಿಪುದೆಂದ ಗುರುನಾಥ ೧೪

ಸಾವಧಾನದ ಭಕ್ತಿಯದು ತಾ
ನಾವರಿಸೆ ಶಿವಲಿಂಗಮೂರ್ತಿಯು
ಭಾವದೊಳಗೆ ಹಸಾದಿ ನಿರಹಂಕಾರಹಸ್ತದಲಿ
ಭಾವಿಸುತಲಿ ಶಿಕಾರಮಂತ್ರವ
ಕೋವಿದನೆ ಕೇಳ್ ರೂಪವಸ್ತುವ
ನೋವಿ ಮುದದಿಂ ನೇತ್ರಮುಖದಿಂದರ್ಪಿಸುವುದೆಂದ ೧೫

ನೆರೆದು ಮೆರೆವನು ಭಾವಭಕ್ತಿಯ
ತರದಿ ಜಂಗಮು ಲಿಂಗಮೂರ್ತಿಯು
ನಿರದೆ ಸುಮನೋಹಸ್ತದಿಂದ ವಕಾರಮಂತ್ರವನು
ಒರೆದು ಪೂಜೆಯ ಮಾಡುತಂದವ
ಸರದಲಂದಾ ಸ್ಪರ್ಶವಸ್ತುವ
ಭರದಲರ್ಪಿಪ ಚರ್ಮಮುಖದಲಿ ಹರಣಲಿಂಗಿಯುವ ೧೬

ಶರಣ ಪರಮಾನಂದಭಕ್ತಿಯ
ನಿರದೆಯಾ ಸುಜ್ಞಾನಹಸ್ತದಿ
ಪರತರದಲಂದಾ ಯಕಾರವ ಮಂತ್ರಪಠನೆಯಲಿ
ಮೆರೆದು ಪೂಜೆಯುಗೆಯ್ದು ಕಿವಿಗಳ
ತರದಮುಖದಿಂ ಶಬ್ದವಸ್ತುವ
ಭರದೊಳರ್ಪಿಸುತಿಹನು ಕೇಳಿದನೆಂದ ಗುರುನಾಥ ೧೭

ಸಮರಸದ ಭಕ್ತಿಯೊಳಗೈಕ್ಯಂ
ಮೆರೆಯುತಾ ಸದ್ಭಾವಹಸ್ತದಿ
ನೊರೆಯುತೋಂಕಾರವನು ಪೂಜೆಯಮಾಡುತೊಲವಿನಲಿ
ಹರಿಷದಿಂದ ಮನೋಮುಖದಲಂ
ದುರುತರದ ಸಂತೃಪ್ತಿವಸ್ತುವ
ಭರದಲರ್ಪಿಪುದಾ ಮಹಾಲಿಂಗಕ್ಕೆ ಕೇಳೆಂದ ೧೮

ಪೂತಸದ್ಗುರುವಿಂ ಷಡಧ್ವದ
ರೀತಿಯೊಳಗಾ ವ್ಯಾಸಪೂರ್ವಕ
ದಾ ತೆರದಿ ಸಂಸ್ಕರಿಸಿ ಬಂದಿಹ ಪರಮಲಿಂಗವನು
ಸಾತಿಶಯದಿಂ ವಾಮಹಸ್ತದಿ
ನೀತಿವಿದ ಧರಿಸುತಲಿ ಪೂಜಿಪ
ಮಾತಲಾಲಿಸಿ ಧನ್ಯತೆಯನೊಂದುವುದು ನೀವೆಂದ ೧೯

ಪರಮಲಿಂಗಾಕೃತಿಯೊನಾಂತಿಹ
ಹರನ ಕರಕಮಲದೊಳಗಾವನು
ಧರಿಸಿರುವನವಗೆಂಪುಮೆನ್ನಾಸ್ಥಾನ ಕರಗತವು
ಅರಿವುದಿದನೆನುತೊರೆದ ಶಿವನೆಂ
ದರುಪುವೆನು ನಾನಿದನು ಕೇಳ್ ನೀ
ನಿರದೆ ಪೂಜಿಸಲವನ ಮುಕ್ತಿಯು ಸದನ ನಿನಗೆಂದ ೨೦

ಆವನುಂ ಸ್ಥೂಲಾಂಗದಲಿ ನೆರೆ
ಭಾವಿಸುತಲಂದಿಷ್ಟಲಿಂಗವ
ತೀವಿದತಿ ತೋಷದಲಿ ಧಾರಣೆಮಾಡದಿರುತಿಹನೊ
ಭೂವಲಯದೊಳಗವನ ನೋಡಲು
ಭಾವಶುದ್ಧಿಯುದಿರದೆ ಕೆಡುವುದು
ಕೋವಿದನೆ ಮುದದಿಂದ ಲಾಲಿಸುತಿಹುದು ನೀನೆಂದ ೨೧

ಲಿಂಗಧಾರಣ ಮಂತ್ರಬೋಧನೆ
ತುಂಗಕರಪೀಠಾರ್ಚನೆಯು ಜಪ
ದಿಂಗಿತಜ್ಞತೆಯಿಂದ ಕದಲದೆ ಧರಿಸುವಿಕೆಯದುವೆ
ಮಂಗಳತ್ವವನೀಯುವುದು ಸ
ತ್ಸಂಗವನೆ ಮಾಡಿಪುದೆನುತೆ ಸಾ
ರಂಗಧರ ಸಮರೂಪ ಪೇಳಿದನಂದು ಗುರುಮೂರ್ತಿ ೨೨

ಕೇಳು ಭಕ್ತಲಲಾಮ ಶಿವಪದ
ದೇಳಿಗೆಯ ವಿವರವನು ಲಿಂಗವ
ಮೇಳಿಸುತ ಧರಿಸಿದೊಡೆ ಮೋಕ್ಷಾಗಾರವಶವೆನುತ
ಹೇಳುವುದಕಿದನಸದಳವು ನೆರೆ
ಭಾಳಲೋಚನ ಬಲ್ಲನೆನುತ ಕೃ
ಪಾಳು ಪೇಳಿದನೊಲವಿನಿಂ ಪಂಚಾಕ್ಷರಾಚಾರ್ಯ ೨೩

ಶ್ರುತಿಯೊಳುರು ಶಾಸ್ತ್ರದಲಿ ನೆರೆ ಸ
ಮ್ಮತಿಯು ಪೌರಾಣದಲಿ ಹಿತಕರ
ದತಿಶಯಾಗಮಗಳಲಿ ನೋಡಲು ವೀರಶೈವನವ
ಸತತ ಲಿಂಗವ ಧರಿಸದಿರುತಿರೆ
ಪತಿತನಾಗುವನೆನುತಲೊರೆಯುವೆ
ನತುಲಮತಿಯಿಂ ಲಾಲಿಪುದು ನೀನೆಂದ ಗುರುನಾಥ ೨೪

ಚರಿಸುತಿಹ ಸಮಯದಲಿ ತಾನಿಂ
ದಿರುವ ವೇಳೆಯಲಂದು ನೆರೆದೆ
ಚ್ಚರದೊಳಿರುವಾ ಸಮಯ ನಿದ್ರೆಯ ಮಾಳ್ಪ ಹೊತ್ತಿನಲಿ
ಭರದಿ ಕಣ್ಗಳ ಮುಚ್ಚುವಾಗಲು
ತರದಿರುವ ಕಾಲದೊಳಗಾದರು
ಧರಿಸಿ ಲಿಂಗವ ಮೆರೆವನವ ಕೃತಕೃತ್ಯನಹನೆಂಪ ೨೩

ವೇದತತಿಯ ನಿರೀಕ್ಷಿಸಲು ಋ
ಗ್ವೇದದೊಳಗೆ ಯಜುಸ್ಸಿನಲಿ ತಾ
ವಾದರದಲುಸಿರಿಹುದು ಬಾಹ್ಯದ ಲಿಂಗಧಾರಣೆಯು
ಮೇದಿನಿಯಲದನರಿಯುದಿರ್ದೊಡೆ
ಮಾದಿಗನ ಮನೆತೊತ್ತದಲ್ಲವೆ
ವೇದಸಮ್ಮತವಾದ ಮತವಿದು ತಿಳಿದು ನೋಡೆಂದ ೨೬

ತಾನು ಮಾಡುವ ನಿತ್ಯಕರ್ಮವ
ಮಾನಸೋದ್ಭವ ಹರನಿಗೊಪ್ಪಿಸಿ
ಜಾನವನು ಪಡೆಯುವನೆ ಕೇಳವ ವೀರಶೈವನಲ
ಹೀನಗುಣದಿಂ ಲಿಂಗಪೂಜೆಯ
ಹಾನಿಗೊಳಿಪಾ ಶ್ವಾನಗಂದು ನ
ವೀನ ನರಕವು ದೊರೆಯುವುದು ಯಮಲೋಕದೊಳಗೆಂದ ೨೭

ಹರನನರ್ಚಿಸದಿರಲು ದೋಷವು
ಹರನ ನುತಿಸದಿರಲ್ಕೆ ದುರಿತವು
ಹರನ ಪೂಜಿಸದಂತೆ ತಾನಿರಡುಂಡಭೋಜನವು
ಧರಣಿಯೊಳಗಾ ಶುನಕಮಾಂಸವ
ದಿರದೆ ಕುಡಿದಾ ನೀರೆ ಮೂತ್ರವು
ಭರದಿ ತಿಂದಾ ಭಕ್ಷ್ಯ ಸೊಣಗನ ಮೂಳೆ ಕೇಳೆಂದ ೨೮

ಆವಕಾಲದಲಾದೊಡಾಗಲಿ
ಭಾವಿಸುತ ಸದ್ವ್ರತವನೆಸಗುತ
ಭಾವದಿಂದಾರಾಧಿಪುದೊ ಕರದಿಷ್ಟಲಿಂಗವನು
ಭಾವ ಬೇರೊಂದಿರಲು ಪರಶಿವ
ಸೇವೆಯೆತ್ತಲೊ ಹರನದೆತ್ತಲೊ
ಭಾವಜಾರಿಯು ಬಿಡದಿರಲು ಸದ್ಗತಿಯು ಕೇಳೆಂದ ೨೯

ವೀರಶೈವನದಾವನಾದರು
ಸಾರತರವಾದಿಷ್ಟಲಿಂಗದ
ಧಾರಣೆಯುಳ್ಳಿರಬೇಕು ಸತಿಸುತಭೃತ್ಯಚಯದಿಂದ
ಸೇರಿರುವ ಗೃಹ ಗೋವು ವೊದಲಾ
ಧಾರವಸ್ತುವಿಗೆಲ್ಲ ಲಿಂಗದ
ಚಾರುತರ ಮುದ್ರೆಯನು ಹಾಕಲುಬೇಕು ಕೇಳೆಂದ ೩೦

ಗುರುವಿಗುರುತರ ಲಿಂಗಜಂಗಮ
ಕಿರದೆ ಸೇವೆಯನರ್ಪಿಸದ ಸುರು
ಚಿರವ ಭಸಿತವನಿಡದೆಯಾ ರುದ್ರಾಕ್ಷವಾಲೆಗಳ
ಧರಿಸದಾ ಪಜ್ಜಲಪ್ರಸಾದವ
ಬೆರೆಯದಾ ಪಂಚಾಕ್ಷರಿಯ ತಾ
ನೊರೆಯದವ ಕೇಳ್ ನರಕಲೋಕದ ಹಂಗಿನಾಳೆಂದ ೩೧

ಶಿವನಿಗಾಗಿಯೆ ತನುವ ನೋಡಲು
ಸವೆಯಿಸುವುದೇ ತಪವು ಬಾಹ್ಯದ
ವಿವರವಳಿಯುತೆ ಲಿಂಗಪೂಜೆಯುವಾಳ್ಪುದೇ ಕರ್ಮ
ಶಿವನ ಮಂತ್ರಪ್ರಣವ ಪಠನೆಗ
ಳವುವೆ ರುದ್ರಾಧ್ಯಯನ ಜಪವದು
ಶಿವನ ಚಿಂತನೆ ನೆನಪದಾಗಮದರ್ಥದಭ್ಯಾಸ ೩೨

ಪರತರದ ಸುಜ್ಞಾನವೆಂಬೀ
ತೆರದರಿವೆ ತಾ ಪಂಚಯಜ್ಞವು
ಪರಿಲಸಿತ ಮಾನಸದಿ ಕೂಡಲ್ಕವ ನರೋತ್ತಮನು
ಧರಣಿಯುಲಿ ಶಿವಭಕ್ತನೆನಿಸುತ
ಮೆರೆಯುವನು ವೋಕ್ಷಾಧಿಪನ ತಾ
ಬೆರೆಯುವನು ಕೇಳೆನುತೆ ಬೋಧೆಯ ಪೇಳ್ದ ಗುರುನಾಥ ೩೩

ಇನಿತೊಲಿದು ತಾನೊರೆದು ಭಕ್ತನ
ಮನದಿರುವ ತಾನರಿದು ಮಂತ್ರದ
ಘನಮಹಿಮೆಯಿಂದಾತನನು ಸಲಹಲ್ಕೆ ಬಗೆಗೊಂಡು
ಕನಿಕರದಲಾತನನು ಹರಸುತ
ಲನಘನಾ ಪಂಚಾಕ್ಷರಾರ್ಯನು
ಮನಸಿಜಾರಿಯ ನೆನೆದು ಮುಂದಿನ ಪಯಣಕನುವಾದ ೩೪

ಇನಿತು ಮಹಿಮೆಯನಾಂತ ಚರವರ
ಘನ ವಿನೋದವ ನೆನೆದು ತಾ ಚಿ
ದ್ಘನನ ಕರೆಯಿಸುತಂದು ಪಂಚಾಕ್ಷರಿಯ ಬೋಧಿಸುತ
ವಿನುತ ಪಶ್ಚಿಮವಾಹಿನಿಯಲಿಹ
ಘನಮಠದಲಾನಿಹೆನು ನೀ ಬಾ
ರೆನುತ ಪಟ್ಟವ ಕಟ್ಟಿ ತೆರಳಿದನಂದು ಗುರುನಾಥ ೩೫

ಧೀರೆ ಭುವನಾಧಾರೆ ಮಲಹರೆ
ಘೋರರಾಕ್ಷಸ ಗರ್ವಸಂಹರೆ
ವೀರೆ ಮಹಿಮಾಗಾರೆ ಭವಹರೆ ದುರಿತನಾಶಕರೆ
ತಾರಕಾರಿ ಗಜಾಸ್ಯವತ್ಸಲೆ
ಮಾರಹರ ವಾಮಾಂಗಸಂಗಿನಿ
ಭೂರಿಶಕ್ತಿಯೆ ಸಲಹು ಚಾಮುಂಡಾಂಬೆ ಜಗದಂಬೆ ೩೬

# ಚಿದ್ಘನ ಶಿವಾಚಾರ್ಯ ಕಥನಂ

**ವಿರಚಿಸುತ ಶಾಖಾಮಠಂಗಳ**
**ನಿರದೆ ಗುರುವರ ಚಿದ್ಘನಾರ್ಯನು**
**ಮೆರೆದನಾ ಸುತ್ತೂರ ಸಿಂಹಾಸನದಿ ಬೋಧಿಸುತ**

ಶ್ರೀಲಸದ್ಗೌರೀಶ ಯಮಿಚಯ
ಪಾಲ ಶಿವ ಗಂಗಾಧರಾಮರ
ಜಾಲ ವಂದಿತ ಧನದಮಿತ್ರ ವಿರೂಪನಯನಾಂಕ
ನೀಲಕಂಧರ ಶಂಭುಶಂಕರ
ಬಾಲಚಂದ್ರಶಿರೋವಿಭೂಷಣ
ಶೂಲಧರ ಸೋಮೇಶ ಕುಡು ನೀಂ ಸರ್ವಮಂಗಳವ ೧

ವಿರಚಿಸಲು ಶಾಖಾಮಠಂಗಳ
ನಿರದೆ ಹರಿಸದಿ ಸಂಚರಿಸುತಂ
ಉರುತರದ ಮಹಿಮೆಯಲಿ ಮೆರೆದಾ ಚಿದ್ಘನಾಚಾರ್ಯ
ಒರೆಯುವೆನು ನಾನವನ ಕಥನವ
ಭರದಿ ಲಾಲಿಸು ಸಿದ್ಧಲಿಂಗನೆ
ಪರಗತಿಯು ನಿನಗಹುದು ಕೇಳಿದೊಡೆಂದ ಗುರುನಾಥ ೨

ಪರಿಲಸಿತ ಪಂಚಾಕ್ಷರಾರ್ಯನು
ತೆರಳೆ ಪಶ್ಚಿಮವಾಹಿನಿಗೆ ತಾ
ನಿರದೆ ಚಿದ್ಘನನಿತ್ತ ಶಿಷ್ಯವಿತಾನದೊಡನೈದಿ
ಹೊರಹೊರಟು ಬರುತಂದು ಪುರಪುರ
ದಿಳುವ ತಾನರಿಯುತ್ತ ಭಕ್ತರ
ಪೊರೆವ ಬರವಸದಿಂದ ಬೆಟ್ಟದಪುರಕೆ ನಡೆತಂದ ೩

ಹರಿಸದಿಂದೈತರಲು ಶಿಷ್ಯರ
ನೆರವಿಂತೊಗ್ಗಟ್ಟಿನಲಿ ಕುಸುಮವ
ಸುರಿದು ಕರೆದೊಯ್ದರು ಮಹೋತ್ಸವದಿಂದ ಗುರುವರನ
ಪರಮ ಪಲ್ಲವ ತೋರಣದ ಮಂ
ದಿರದ ಬಳಿಯಿಳಿಸಲ್ಕೆ ಚಿದ್ಘನ
ನಿರದೆ ತಾನೊಳಪೊಕ್ಕು ಯೋಗಾನಂದವಾಂದಿರವ ೪

ನೆರೆದರಲ್ಲಿಯೆ ಭಕ್ತರೊಂದೆಡೆ
ಮೆರೆದರಲ್ಲಿ ಮಹೇಶರೊಂದೆಡೆ
ಪರಮ ಗುಣದಿಂದಾ ಪ್ರಸಾದಿಗಳೊಂದೆಡೆಯೊಳಿಸೆಯೆ
ಹರಣದಾ ಲಿಂಗಿಗಳದೊಂದೆಡೆ
ಶರಣರೈಕ್ಯರ ನಿಚಯಮಾ ಗುರು
ವರನ ಬಳಿಯಿರೆ ಮೆರೆದುದಂದಾ ಸಭೆ ಮಹೋತ್ಸವದಿ ೫

ಶರಣರೊರ್ವನು ನಿಂದು ಸಭೆಯಲಿ
ನೆರೆದ ಜನಸಮುದಾಯದಲಿ ತಾ
ನೊರೆದ ಶೈವಾಚಾರ ವಿವರವನನಿತನೆಲ್ಲರಲಿ
ಗುರುವು ದೇಹತ್ರಯದ ಮಲವೆಂ
ದಿರುವ ಕಾಷ್ಠದ ಕಂತೆಯನು ತಾ
ನುರಿಸಿ ದೀಕ್ಷಾತ್ರಯದ ಶಿಖಿಯಲಿ ಮೂರುಲಿಂಗಗಳ ೬

ನೆಲೆಗೊಳಿಸಲೈತಂದನೆನಲಂ
ದೊಲವಿನಲಿ ನವವಿಧದ ಭಕ್ತಿಯ
ಕಲೆಯನಾಂತತಿ ವಿನಯಭಾವದಿ ಭಕ್ತಸಂದೋಹ
ನಲಿನಲಿದು ಗುರುವರನ ಚರಣಕೆ
ಸಲಿಸುತಿರ್ದುದು ಕಾಣ್ಕೆಯನು ಗತಿ
ಫಲವನನುಭವಿಸಲ್ಕೆ ನೆರೆದಾ ಸಭೆಯ ಮಧ್ಯದಲಿ ೭

ಸ್ಮರನ ಮದದಾನೆಯೊಲು ಮಲೆಯುವ
ತರುಣಿಯರನುರೆ ಬಣ್ಣಿಸಲು ತಾ
ನಿರದೆಯುಂದೇಕಾಗ್ರಚಿತ್ತದಿ ಕೇಳ್ವ ವಿರಹಿಯೊಲು
ಗುರುವರನ ಚರಿತೆಯನು ಲಾಲಿಸು
ತಿರುವ ಪರತರ ಭಕ್ತಸಂತತಿ
ಮೆರೆದುದಂದಾ ಶ್ರವಣಭಕ್ತಿಯನಾಂತು ಸಭೆಯೊಳಗೆ ೮

ನಿಜದಿ ತನ್ನಾಶ್ರಯದಲೆಸೆಯುವ
ಭುಜಗಿಯನು ಕೊಂಡಾಡುತಿರುತಿಹ
ಭುಜಗನೊಲು ಗದ್ಗದ ನಿನಾದದಿ ಗುರುವಿನುರುತರದ
ಭಜನೆಯನು ಪಾಡುತಿಹ ಶರಣ
ವ್ರಜಮದೊಂದೆಡೆ ನೆಲಸುತಲಿ ನೆರೆ
ಸುಜನ ಶೋಭಿಸಿತಂದೆ ಕೀರ್ತನ ಭಕ್ತಿಮಾರ್ಗದಲಿ ೯

ಇರದೆ ಕಡಜದ ಕೈಗೆ ತಾ ಸಿಲು
ಕಿರುವವರೆಯಾ ಹಾಳುವು ಬಾಹ್ಯವ
ನರಿಯುದೆಯೆ ತಾಸದನೆ ಜಾನಿಸುತಿರ್ಪ ತೆರನಂತೆ
ಮರೆಯುದೆಯೆ ಗುರುವರನ ನಿಜದಂ
ತರದಿ ನೆನೆವಾ ಸ್ಮರಣಭಕ್ತಿಯು
ವೆರಸಿದವರೊಂದೆಡೆ ವಿರಾಜಿಸುತಿರ್ದರೊಲವಿನಲಿ ೧೦

ಸಿರಿಯು ಮಿತ್ರರ ಸತಿಯು ಪುತ್ರರ
ಲಿರುವ ಮೋಹಕೆ ತನುವು ಬಳಲುವ
ಪರಿಯನರಿಯದೆ ಧರಣಿಯಲಿ ದುಡಿಯುತಿಹ ಮರ್ತ್ಯನೊಲು
ತೊರೆದು ತೃಷೆಯಾ ಹರಿವ ನಿದ್ರೆಯ
ಗುರುವರನನುಪಚರಿಸುತಿರುವಾ
ಚರಣಸೇವೆಯ ಭಕ್ತರಂದೆಸೆದಿರ್ದರತಿಶಯದಿ ೧೧

ಸುಂದರಿಯರಿರದಂದೆ ನಿರುಕಿಸ
ಲಂದಲಂಕರಿಸುತ ತನುವನಾ
ನಂದದಿಂ ಮೆರೆಯುವವನೊಲು ತಾವಿರುತೆ ಗುರುವರನ
ಚಂದದಿಂ ವಸ್ತ್ರಾಭರಣ ಚಯ
ದಿಂದಲಂಕಾರವನು ಮಾಡುವ
ಮಂದಗುಣದರ್ಚನದ ಭಕ್ತಿಯನಾಂತವರು ಮೆರೆಯೆ ೧೨

ವೀರ ತಾ ತನ್ನೊಡೆಯನಿದಿರಲಿ
ತೋರಿ ಸಾಹಸವದನೆ ಕಡೆಯಲಿ
ಧಾರಿಣಿಯೊಳುರೆ ಭಕ್ತಿಭಾವದಿ ನಮಿಪತೆರದಂತೆ
ಸೇರಿಸುತಲಷ್ಟಾಂಗಗಳ ಸುವಿ
ಚಾರಗುಣದಿಂ ನಮಿಸುವರ ಪರಿ
ವಾರವೊಂದೆಡೆಯೆಸೆದುದಾ ಗುರುವರನ ಮುಂದಿನಲಿ ೧೩

ಅರಸ ತಾ ಸಿಂಹಾಸನದಿ ನೆಲ
ಸಿರುವವೇಳೆಯಲವನ ಸೇವೆಯ
ನಿರದೆ ನಯಭಾವದಲಿ ಮಾಡುವ ನೂತನದ ಚರನ
ಪರಿಯೊಲಂದಾ ನೆರೆದ ಭಕ್ತರ
ನೆರವಿ ಗುರುಸೇವೆಯನು ತಾನಾ
ಚರಿಸುತಿರ್ದುದು ಚಿದ್ಘನಾಚಾರ್ಯನ ದಯಾಘನನ ೧೪

ಸಮರತಿಯು ಸಮಯದಿ ವಿಲಾಸ
ಭ್ರಮೆಯನಿತ್ತಾ ಪುರುಷನಿಗೆ ಸ
ದ್ವಿಮಲಮಾನಸದಿಂದ ತನ್ನಯ ಮುಂಗುರುಳನೀವ
ಕಮಲಮುಖಿಯೊಲು ಸಖ್ಯಭಕ್ತಿಯು
ಸುಮನಸರು ತಾವಾಂತು ಗುರುವಿನ
ಸಮದಿ ಮಂಡಿಸಿ ರಾಜಿಸಿದರೊಲವಿಂದ ಸಭೆಯೊಳಗೆ ೧೫

ಪತಿಯು ಭಕ್ತಿಯನಾಂತ ನಾರಿಯು
ಹಿತದಿ ತನ್ನಂಗವನು ನಿಜಪತಿ
ಗತಿಶಯದಲೊಲವಿಂದ ತಾನರ್ಪಿಸುವ ತೆರದಿಂದ
ಕ್ಷಿತಿಯೊಳಾ ಗುರುವರಗೆ ನಿಜವನು
ಮತಿಯೊಳಗೆ ತನುವರ್ಪಿಸುವ ಸನು
ಮತರದಾತ್ಮ ನಿವೇದನದ ಭಕ್ತಿಯೊಳಗಿರುತಿರಲು ೧೬

ಈ ತೆರದ ನವವಿಧದ ಭಕ್ತಿಯು
ಸಾತಿಶಯದಿಂದಿರುವ ಭಕ್ತ
ವ್ರಾತವನೆ ಬೋಧಿಸುತ ತತ್ತ್ವವನಾದರದ ಗುಣದಿ
ಶಾ ತೆರಳಿದನು ಕೊಡಗಿನುರುತರ
ಭೂತಲಾಧಿಪನೆಡೆಗೆ ನೆರೆ ಸಂ
ಪ್ರೀತಿಯಿಂದಲ್ಲಿಂದ ಮಲೆಯಾಳದಲಿ ನೆರೆ ನಿಲಲು ೧೭

ಪರಿಕರವನುರೆ ಬೆರಸಿ ಮುಂದಿನ
ಪುರಕೆ ಬಿಜಯಂಗೈಯ್ಯುತಿರಲಂ
ದುರುಭರದಿ ವಿಪಿನದಲಿ ಚೋರವಿತಾನವೈತರುತ
ಸರಿಯದಂಡದೆ ತಡೆಯುಗೈದುರೆ
ಜರಿದು ನಿಂದಿರಲನಿತರಲೆ ಕ
ಣ್ಣಿರಡೆ ಕಾಣದಿರಲ್ಕೆ ಬಾಯನು ಬಡಿದುಕೊಳುತಳುತ ೧೮

ಆರು ನೀನೆಲೆ ವೀರ ಗಹನದಿ
ಸಾರಿರುವೆ ಶಂಕರನೊ ಬೊಮ್ಮನೊ
ವಾರಿರುಹದಳನಯನನೋ ದಿಕ್ಪಾಲರೊಳಗಾರು
ಚೋರರಾವೈತಂದು ನಿನ್ನಯ
ಭೂರಿಮಹಿಮೆಯನರಿಯದೆಯೆ ನೆರೆ
ಸಾರಿ ಮುಂದಣ ಪಯಣಕತಿವಿಘ್ನವನುಗೈದೆವಲ ೧೯

ಮಾಡಿದಪರಾಧವದು ತಾ ಕೈ
ಗೂಡಿಸಮು ಮಾಸವರಭೀಷ್ಟವ
ನೋಡಲಾಗದು ಕೋವಿದನೆ ಕಾಪಾಡು ನೀನೆನುತ
ಜೋಡಿಸುತ ಕರಗಳನು ನೆರೆ ಪೊರ
ಳಾಡಿದರು ಗೋಳಾಡುತಲಿ ಕೃಪೆ
ಮಾಡಿ ಭಸಿತವಧರಿಸಿ ಸಲಹುವುದೆನಲು ಗುರುನಾಥ ೨೦

ಪರರ ಧನವವದನಪಹರಿಸುತಾ
ದರದಲವರಿಂಗುಪಹತಿಯು ನಿ
ತ್ತರೆ ಸಫಲವೇನಿಹುದು ನಿಮಗಿಂದೀ ಧರಿತ್ರಿಯಲಿ
ದುರಿತವಿತತಿಯ ನೆರೆಯುತಂದಾ
ನರಕಭಾಜನರಾಗಿ ನರಳುತ
ಕೊರಗುವಿರಿ ಯಮಪುರದಿ ತಾಪದಭೀತಿಯೊಳಗೆನಲು ೨೧

ಅರಿಯದೆಯೆ ನಾವೆಸಗಿದುದ ನೀ
ನಿರಿಸಲಾಗದು ಮನದಿ ಗುರುವರ
ನರುಹನಿರಿಸುವರಿಲ್ಲದೆಯೆ ದುರ್ಮಾರ್ಗಕೆಳಸಿಹೆವು
ದುರಿತನಿಚಯವ ಕಳೆದು ಗತಿಯನು
ಸರಿಪ ರೀತಿಯನೊರೆದು ನೀನು
ದ್ಧರಿಪುದೆನುತಂದೆರಗಿರಲು ಚರವರನ ಪದಯುಗಕೆ ೨೨

ಪರತರದ ನೀತಿಯನು ಬೋಧಿಸು
ತರಿವನರುಪುತ ಭಾಷೆಮಾಡಿಸು
ತುರುತರದ ಕರುಣಾಮೃತವ ನೆರೆ ಸೂಸುತಂದಿನಲಿ
ಹರಿಸದಾ ಮನದಿಂದ ಸರಿಸಕೆ
ಕರೆಯುತವರನು ಧರಿಸಿ ಭಸಿತವ
ನೊರೆದು ಪಂಚಾಕ್ಷರಿಯ ಕಳುಪುತಲವರ ಗುರುನಾಥ ೨೩

ಬಾಳಿದರು ಭಕ್ತಿಯಲಿ ಪರಮ ಗು
ಣಾಳಿಯುತರಂದೊಲುಮೆಯೊಳಗಾ
ಫಾಳಲೋಚನ ಮಂತ್ರದುಚ್ಚಾರಣೆಯೊಳಭಿಮತವ
ಏಳಿಗೆಯ ನೆರೆ ಪೊಂದಿ ತಮ್ಮಯ
ಪಾಳಿಯುದಲೆಸೆದಿರ್ದರನಿಶ ದ
ಯಾಳುವಹ ಚಿದ್ಘನನ ಕರುಣದಿ ಚೋರರತಿಶಯದಿ ೨೪

ಮುಂದುವರಿಯಿಸಿ ಪಯಣವನು ಚರ
ವೃಂದವುದನೊಡಗೂಡಿ ಪುರಪುರ
ದಿಂದ ಮುಂದಕೆ ನಡೆದು ಶಾಖಾಮಠಗಳನು ರಚಿಸಿ
ಬಂದು ಪುರವನು ಪೊಕ್ಕು ಭಕ್ತರ
ವಂದನೆಗೆ ಹರಸುತ್ತ ಯೋಗಾ
ನಂದಿಯೆಂದೆಸೆದಿರ್ದ ಭದ್ರಾಸನದಿ ಮಠದೊಳಗೆ ೨೫

ಕೆಲದಿನಂಗಳು ಸವೆಯೆ ಮುಂದಿನ
ಫಲವನರಿದಾ ಯೋಗಮಾರ್ಗದ
ಬಲದಿ ಗುರುಕುಲವಾಸಿಯೆಂದೆನಿಸುತಲಿ ಗುರುವರನ
ಬಲವರಿದ ಚೆನವೀರದೇವನ
ಲಲಿತಮಾನಸದಿಂವ ಕರೆಯಿಸು
ತೊಲವಿನಿಂದಲಿ ಪಟ್ಟಗಟ್ಟುತಲಿರದೆ ಹೊರಹೊರಟ ೨೬

ದೇವವರಗಂಧರ್ವ ಸೇವಿತೆ
ಕೋವಿದವ್ರಜ ನಿತ್ಯಸನ್ನುತೆ
ಪಾವನಾಕೃತಿ ಭಾವಬೋಧಿನಿ ಪರಮಯೋಗಿಹಿತೆ
ಶೈವಧರ್ಮಪ್ರಕಟನಾಶಯೆ
ಭಾವಜಾರಿಜನೋಪಕಾರಿಣಿ
ದೇವಿ ಗಿರಿಸುತೆ ಸಲಹು ಚಾಮುಂಡಾಂಬೆ ಜಗದಂಬೆ ೨೭

# ಚೆನ್ನವೀರ ಶಿವಾಚಾರ್ಯ ಕಥನಂ

ವ್ರತ ವಿತತಿರತ ಸತತ ಸಜ್ಜನ
ವಿತತಿ ನುತ ಚೆನವೀರಗುರು ವಸು
ಮತಿಯೊಳಗೆ ಸುತ್ತೂರ ಸಿಂಹಾಸನದಿ ರಾಜಿಸಿದ

ಶ್ರೀಗಿರಿಕ್ಷೇತ್ರಾಧಿವಾಸ ವಿ
ರಾಗಿ ಹೃದಯನಿವಾಸ ನುತವರ
ಯೋಗಿವಂದಿತಚರಣ ಕರುಣಾಪೂರ ಜಿತಮಾರ
ನಾಗಭೂಷಣ ದೈತ್ಯಭೀಷಣ
ರಾಗಶೋಷಣ ಗಣವಿಶೇಷಣ
ರಾಗದಿಂ ಕುಡು ಭಕ್ತಿಭಾಗ್ಯವ ಸೋಮನಾಥೇಶ ೧

ವ್ರತನಿಯಮ ರತನೆನಿಪ ಗುರುವಿನ
ಕತೆಯನಾಲಿಸು ಸಿದ್ಧಲಿಂಗನೆ
ನುತ ಸುಜನನೇ ಪ್ರಮಥಗಣಪದವಾರಿರುಹ ಭೃಂಗ
ಕ್ಷಿತಿಯಲಾ ಚೆನವೀರ ನಿನ್ನಯ
ಮತಿಗೆ ಮಂಗಲವಿತ್ತು ಕಾಯುವ
ನತಿಹಿತದಲೆನುತಂದು ಶಿವರಾತ್ರೀಶ ಗುರುವೊರೆದ ೨

ಗುರುಪರಂಪರೆಯಿಂದ ಬಂದಾ
ಪರಮಪದ್ಧತಿವೆರಸಿ ಮೆರೆವಾ
ವರಣಪುರ ಸಿಂಹಾಸನಾಧಿಪ ಚಿದ್ಘನಾಚಾರ್ಯ
ಭರದೆ ನಿಜಗುರುವೆಡೆಗೆ ತಾನೊಲಿ
ದಿರದೆ ಪೊರಡಲ್ಕತ್ತಲಿತ್ತಲು
ಮೆರೆದ ಚೆನವೀರಾರ್ಯದೇಶಿಕ ಭದ್ರಪೀಠದಲಿ ೩

ಒಂದುದಿನದೊಳಗೊರ್ವ ಭಕ್ತನು
ಬಂದು ಯಮಿಯೆಡೆ ನಿಂದು ಕೈಮುಗಿ
ದಂದು ಬಿನ್ನವಿಸಿದನು ತನಗೊದಗಿರುವಳಲನಿರದೆ
ಇಂದಿನಾವರೆಗೊಂದು ಕಾರ್ಯವ
ನೆಂದು ಬಿಡದೆಯೆ ಗೆಯ್ಯುತಿರಲದು
ಮುಂದುವರಿಯದು ದೇವ ಕಾಪಾಡೆನಲು ಗುರುವೆಂದ ೪

ಪರಮ ಕಾರ್ಯಮದೊಂದ ನೆನೆಯುತ
ಲಿರದೆಯಾಚರಿಸುತ್ತಲಿರಲವ
ಪುರುಷನೆನಿಸುವ ಧಾತ್ರಿಯಲಿ ಸಿರಿಯೊಲಿವಳಾತನಿಗೆ
ಹರನ ಚಿತ್ತವಿದೆಂದು ಮನದೊಳ
ಗರಿಯುತಂದದನೆಸಗಲೊಳ್ಳಿತು
ಪಿರಿಯರೊರೆವರು ಪಿಡಿದ ಕಜ್ಜವ ಬಿಡದಿರೆಂದೆನುತ ೫

ಅನಿತರೊಳಗಂದೊರ್ವ ಬಳುತನು
ಘನಗುರುವಿನುರುತರದ ಚರಣಕೆ
ವಿನಮಿಸುತ ಮಂತ್ರೋಪದೇಶವ ದೀಕ್ಷೆಯನು ಭರದಿ
ಸನುಮತನೆ ನೀಂ ಗೆಯ್ದು ಪರಶಿವ
ಘನವ ತೋರಿಸೆನುತ್ತ ಬೇಡಲು
ಚಿನುಮಯಾತ್ಮಕನಾಗ ಕರುಣಾಹೃದಯನಾಗುತಲಿ ೬

ಕರಶಿರದ ಸಂಯೋಗವೆಂದೆನು
ತೊರೆವ ವೇಧಾದೀಕ್ಷೆಯನು ತಾ
ನಿರದೆಸಗುತುಪದೇಶವೆನಿಪಾ ಮಂತ್ರದೀಕ್ಷೆಯನು
ಹರಿಸದಿಂದ್ಲಲಿ ಮಾಡುತಾತನ
ಕರಕೆ ತಾನಾಗಿಷ್ಟಲಿಂಗವ
ಭರದಲಂದಿತ್ತಾ ಕ್ರಿಯಾದೀಕ್ಷೆಯನು ಗುರುನಾಥ ೭

ಇಂತು ತಾನಂದೆಸಗುತವನಿಗ
ನಂತಬೋಧೆಯ ಮಾಡಿ ಕಳುಪುತ
ನಂತಧರಮಂತ್ರವನೆ ಜಾನಿಸುತಂತರಂಗದಲಿ
ಸಂತಸದೆ ಸಂಚಾರ ಪೊರಡ
ಲ್ಕಂತು ಯೋಚಿಸಿ ಮಾನಸದಿ ನಿ
ಶ್ಚಿಂತೆಯಿಂ ಗುರುವರನ ಸೇವಾಕಾರ್ಯಕನುವಾದ ೮

ಹಿಂದೆ ಶಿವರಾತ್ರೀಶ ಯೋಗಾ
ನಂದದಿಂ ನೆಲಸಿರ್ದ ತಾಣದ
ಲಂದು ಕಪಿಲಾನದಿಯ ಮಧ್ಯದಿ ಶರಣರೊಡಗೂಡಿ
ಚಂದದಿಂ ಶಿವತತ್ತ್ವಸಾರದ
ಮಂದ ಸುಜ್ಞಾನಾತಿಶಯಗುಣ
ದಿಂದ ಕೂಡಿರುತಂದು ಭಕ್ತೋಲ್ಲಾಸನೆಸೆದಿರ್ದ ೯

ಗುರುವವನುವಿಂ ಸೇವಿಸುತ ಸ
ತ್ಕರಿಸಿ ಶರಣರ ಸಂಚಯವ ತಾ
ನಿರದೆ ಶಿವಯೋಗವಲಿ ಬೆರೆದಾನಂದಮಯನಾಗಿ
ಇರಲಿಕಾ ತ್ರಿಂಶದ್ದಿನಂಗಳು
ಹೊರಗೆ ಬಾರದೆ ಗುರುವಿರಲು ಭ
ಕ್ತರ ಸಮೂಹವದಂದೆ ತರಹರಿಸುತಲಿ ಬೆರಗಾಗಿ ೧೦

ಪರತರದ ಗದ್ದುಗೆಯ ಬಳಿಯಲಿ
ಹರಪುರಾಣವನೊಲಿಯುತೋದಿಸು
ತಿರಲು ಬಾಗಿಲುತೆರೆದುದಂದಾಕ್ಷಣವೆ ಗದ್ದುಗೆಯ
ಗುರುವೆ ಜಯಜಯ ಭಕ್ತಜನ ಸುರ
ತರುವೆ ಜಯಜಯ ನಮ್ಮ ಮುಕ್ತಿಯ
ಸಿರಿಯೆ ಜಯಜಯವೆನುತ ಮಣಿಯುತ ಹರ್ಷಭಾವದಲಿ ೧೧

ಕರೆದರಾ ಪೂವಳೆಯ ಭಕ್ತರು
ತಿರುಗಿ ವಂದಿಸಿ ಪಾಡಿ ನಲಿಯುತ
ಕರದ ತಾಡನದಿಂದ ಜಯಜಯವೆಂದು ಪೊಗಳಿದರು
ಹರಸುತೆಲ್ಲರನಾ ವಿರಾಗಿಯು
ಕರೆಯಿಸುತಲಂದಾ ಮಹಾಂತನ
ನಿರದೆ ತಾ ವೈರಾಗ್ಯತತ್ತ್ವವನೊರೆದ ದಯದಿಂದ ೧೨

ಪರಮತತ್ತ್ವವ ಮರೆಯದಿರುತಿರು
ಹರನ ಲಿಂಗಾಂಗೈಕ್ಯದಿರುವನು
ಬೆರೆಯುತಿರುತಿರು ಭಕ್ತಲೋಕವ ಸಲಹು ನೀನೊಲಿದು
ದುರಿತ ಸುಕೃತದ ನೆಲೆಯನರಿವುದು
ವರದ ಷಟ್ಸ್ಥಲಮಾರ್ಗಗತಿಯದ
ನರಿದು ನಡೆವುದು ಬಿಡದೆ ನಡಿಪುದು ಪೂರ್ವಪದ್ಧತಿಯ ೧೩

ಸರಸಿಜಾರಿಯು ನಿರುಕಿಸುತಲುರು
ಶರನಿಧಿಯು ಹಿಗ್ಗುವುದು ಶಶಿ ತಾ
ನಿರದಿರಲು ತಗ್ಗುವುದು ಗೆಳೆತನವಿಂತಿರುವುದರಿಯೈ
ಇರದೆ ಚಂದ್ರನ ರಾಹು ತಡೆಯಲು
ಶರಧಿಯಂದ ಮುನಿವರನು ಪೀರಲಿ
ಕೊರುವರೊಡುವರಿಗಿಲ್ಲ ಋಣಸಂಬಂಧ ತೀರಿದರೆ ೧೪

ಏರಿ ಕೆರೆಯೊಳಗಿರುವ ನೀರನು
ಹೀರಿದೊಡೆ ಹೊಲವನ್ನು ಬೇಲಿಯು
ಏರಿ ಮೆಯ್ದೊಡೆ ಮನೆಯಗಳತಿಯು ಕದಿಯುತಿರು ತಿರಲು
ವೀರಮೃತ್ಯುವು ಬಂದು ಸೆಳೆದೊಡು
ದಾರಭಾವದಿ ಬಿಡಿಸುತಿರ್ಪರ
ದಾರಿಹರು ಪರಮೇಶನಲ್ಲದೆ ಮೂರುಜಗದೊಳಗೆ ೧೫

ಕೊಂಬೆಕೊಂಬೆಯ ಮೇಲಿರುತ ಕಪಿ
ಹಂಬಲಿಸಿ ತಾ ನೆಗೆನೆಗೆಯುವಾ
ಡಂಬರದ ತೆರದಿಂದ ಮನವದು ಮಾಯೆಗೊಳಗಾಗಿ
ಇಂಬುಗೊಡದಾ ನಡೆನುಡಿಗೆ ನೆರೆ
ನಂಬುಗೆಯ ಕೆಡಿಸುತ್ತ ಶಿವನಾ
ಲಂಬನವ ತೊರೆಯಿಸುವುದಪನಿಂ ಕಟ್ಟಿ ಕೆಡುಹೆಂದ ೧೬

ಕೊಡವುಗಳ ರಚಿಸಲ್ಕೆ ನೋಡಲು
ಪೊಡವಿಯೊಳಗೆ ಸುವರ್ಣವೊದಲಾ
ಕುಡಿಕೆ ಮಡಿಕೆಯ ಮಾಡಲಂತಾ ಮಣ್ಣ ವೊದಲಹುದು
ಮೃಡನಪದವಿಯ ಪಡೆಯುವಾತಂ
ಗೆಡೆಬಿಡದ ವೈರಾಗ್ಯ ವೊದಲದ
ಬಿಡದೆ ನೀನಾಚರಿಸುವುದು ಕೇಳೆಂದ ಗುರುನಾಥ ೧೭

ಮರಣವಾಗುವ ಸಮಯದಲಿ ತಾ
ಸಿರಿಯು ಮನೆಯೊಳು ನಿಲ್ಲುವುದು ಬಲು
ತರದಿ ಬಂಧುಗಳೆಲ್ಲ ಮಸಣದೊಳಲ್ಲೆ ನಿಲ್ಲುವರು
ದುರಿತ ಪುಣ್ಯಗಳೆರಡು ಮಾತ್ರವೆ
ಹೊರಡುವವು ಜೊತೆಯೊಳಗೆ ತಿರುಗಿಯೆ
ಬರುವವೇಳೆಯೊಳವೆ ಬಹವು ಭೂತಲಕೆ ಕೇಳೆಂದ ೧೮

ಪರತರಾಯುರ್ದಾಯರೇಖೆಯು
ದಿರದಿರಲು ಧನರೇಖೆ ವರ್ಧಿಸೆ
ಬರುವ ಫಲವೇನಿಹುದು ಸಂಚಿತ ದೈವವಿಲ್ಲದಿರೆ
ಧರೆಗರಸ ತಾನಾಗಿ ಮೆರೆದರು
ಕೊರತೆ ಬಿಡದವನನ್ನು ನೋಡಲ
ಸ್ಥಿರದ ಪದವಿಗೆ ಮನವ ಕೊಡಬೇಡೆಂದ ಗುರುನಾಥ ೧

ಇನಿತನೆಲ್ಲವನೊರೆದು ಚಿನುಮಯ
ಘನದ ಚೆನವೀರನು ಮಹಂತಾ
ರ್ಯನ ಹರಸಿ ಕುಳ್ಳಿರಿಸಿ ಭದ್ರಾಸನದಲೊಲವಿಂದ
ಮನಸಿಜಾರಿಯ ಭಾವಭಕ್ತಿಯ
ನನುಸರಿಸಿ ತಾ ಕಟ್ಟಿ ಪಟ್ಟವ
ನನಘ ತೆರಳಿದನಂದು ಲಕ್ಷ್ಮಣತೀರ್ಥದೆಡೆಗಾಗಿ ೨೦

ಬರುತ ಶಾಖಾಮಠದಲಿಳಿಯುತ
ನೆರೆದ ಭಕ್ತರನಂದು ಹರಸುತ
ಪರಮ ಯೋಗಾನಂದಭವನವ ರಚಿಸುತತಿಶಯದಿ
ಶರಣರೊಡನಾಡುತ್ತ ನಂಬಿದ
ನರರ ಮನದಾದರದಿ ತಿಳುಹುತ
ಮೆರೆದನಂದಾ ಚೆನ್ನವೀರನು ಲಿಂಗಸಂಗದಲಿ ೨೧

ಶೈಲರಾಜವರಾನ್ವಯೋದ್ಭವೆ
ಶೂಲಪಾಣಿ ಕರಾವಲಂಬನೆ
ಕಾಲಕೂಟೋದ್ವೇಗಹಾರಿಣಿ ಪಾವನಾಂಘ್ರಿಯುಗೆ
ಪಾಲಿತಾಖಿಲ ವಿಬುಧಮಂಡಲೆ
ನೀಲಕಂಧರೆ ನತಜಗತ್ತ್ರಯೆ
ಶೀಲಭೂಷಿಣಿ ಸಲಹು ಚಾಮುಂಡಾಂಬೆ ಜಗದಂಬೆ ೨೨

# ಮಹಾಂತ ದೇಶಿಕೇಂದ್ರ ಕಥನಂ

ಗುರುಮಹಾಂತಾಚಾರ್ಯ ತಾಸಂ
ದುರುತರದ ಸುತತ್ತ್ವರ ಪೀಠದಿ
ಮೆರೆದನಾ ಗುರುಪೀಠಸಮ್ಮತ್ಕರಣಕಾರ್ಯದಲಿ

ಶ್ರೀಗಿರಿಜೆಯಧಿನಾಥ ಚಿನ್ಮಯಂ
ಭೋಗಸಂತತಿ ವರವಿಧಾಯಕ
ಯೋಗಗಮ್ಯ ಪ್ರಮಥವಂದಿತ ಪಾದಪಂಕರುಹ
ನಾಗಭೂಷಣ ನಿರುಪಮಾಶ್ರಯು
ರಾಗರಹಿತ ನಿರಂಜನಪ್ರಭು
ಬೇಗದಿಂ ಕುಡು ಶುಭವ ಮೃಡ ನೀ ಸೋಮನಾಥೇಶ ೧

ಗುರುವು ಮುಮ್ಮಡಿಕೃಷ್ಣರಾಜಂ
ಗೊರೆದು ತನ್ನಭಿಮತವ ನೆರೆ ಮುಂ
ಬರಿಸುತಂದೆಸೆದಿರ್ದನಾ ಸತ್ಕರ್ಮದುಜ್ಜುಗದಿ
ಭರದಲಾತನ ಕಥನವನು ನೀ
ನಿರದೆ ಕೇಳ್ವುದು ಸಿದ್ಧಲಿಂಗನೆ
ಹರಿಸದಿಂದಾನೊರೆವೆನೆಂದನಮಂದಗುರುವರನು ೨

ತರಣಿ ರಾಜ್ಯಾಂಗಾಕ್ಷಿಮೂರ್ತಿಯ
ಬೆರೆದ ಶಕೆಯಲಿ ರೌದ್ರಿವತ್ಸರ
ವಿರಲು ಮಾಘಮಾಸದಲಿ ಮೂರ್ಧಾಭಿಷೇಚನವ
ವಿರಚಿಸಿ ಮಹಾಂತಾರ್ಯಮೂರ್ತಿಗೆ
ಪರಮಗುರು ಜನವೀರದೇಶಿಕ
ನಿರದೆ ಲಕ್ಷ್ಮಣತೀರ್ಥದೆಡೆಯಿಹ ಮಠಕೆ ತೆರಳಲ್ಕೆ ೩

ಬಂದುದಾ ಬಲುಬೇಗೆ ಜಗದೊಳು
ನೊಂದು ಬಳಲುತಲಿರ್ದುದಾಗಳು
ಸಂದಿರುವ ಮನುಜಾವಳಿಯು ಸಾಕಾಗಿ ಬೇಸರದಿ
ಬೆಂದುಪೋದುದು ವನವನಾಂತರ
ಕುಂದು ಕಸರಿಕೆಯಿಂದ ಮೃಗತತಿ
ಯೊಂದು ಪಾರಿತು ಬಿಸಿಲಬೇಗೆಯನಂಜಿ ಮರದಡಿಗೆ ೪

ಬತ್ತಿದವು ಕೆರೆ ಬಾವಿಯೆಲ್ಲವು
ಒತ್ತಿ ದಡವನು ಹರಿವ ನದಿಗಳ
ವೆತ್ತನೋಡಲು ಬಸಿದಜಲದಿಂ ಕೂಡಿ ತೋರಿದವು
ಹತ್ತಿರದೆ ಮಲಗಲ್ಕೆ ಮನುಜರು
ತತ್ತರಿಸಿ ದಗೆಯಿಂದ ಚಿಂತಿಸು
ತತ್ತಲಿತ್ತಲು ಸರಿಮಪೋದರು ತಣ್ಪನೆಡೆಹಾಗಿ ೫

ಬಂದುದಾ ಶ್ರಾವಣದ ಮಾಸವು
ಚಂದದಿಂದಾ ವರ್ಷಋತುವಿರೆ
ಬಂದು ಭಕ್ತರು ನೆರೆದರತಿಶಯದಿಂದ ಭಕ್ತಿಯಲಿ
ಅಂದು ಗುರುವಿನ ಪಾದಪೂಜಾ
ನಂದವನು ತಾವಿರದೆ ಸೇವಿಪೆ
ವೆಂದೆನುತ ನಾನಾವಿಧದಭಾಷಣದಿ ಕೊಡುತಲಿ ೬

ಮಲ್ಲಿಗೆಯು ಕುಸುಮವನು ಚಂಪಕ
ವಲ್ಲದೆಯೆ ಕರವೀರಜಾತಿಯು
ಫುಲ್ಲಸುಮವನು ಬೆಟ್ಟದಾವರೆ ಕುಂದಪುಷ್ಪವನು
ಸಲ್ಲಲಿತ ಪಾಟಲಿಯು ಸುರಗಿಯು
ಪಲ್ಲವದ ಬಹುವಿಧದ ಪತ್ರವ
ನೆಲ್ಲವನು ಕೈಕೊಂಡು ಬಂದರು ಶಿವನ ಶರಣೆಯರು ೭

ಬಂದರಾ ಶಿವಭಕ್ತನಾರಿಯು
ರಂದು ಭಕ್ತಿಯು ಭರದಿ ಕೂಡುತ
ನಿಂದು ಕೊಂಡಾಡಿದರು ಗುರುವಿನ ಪಾದಪಂಕಜವ
ಇಂದುಧರಸಮರೂಪ ಗುರುವರ
ಗಂದು ಕಾಣ್ಕೆಯನಿತ್ತು ಮುದದಲಿ
ಕುಂದದಾ ಶಿವತತ್ತ್ವಚಿಂತೆಯಲಿರ್ದರಾದರದಿ ೮

ಪಾವನಾತ್ಮನ ವರಮಹಾಂತನ
ಭಾವಜಾರಿಯು ಭಕ್ತರಕ್ಷನ
ಸೇವೆಗೈತರುತಿರ್ದುದಾಗಳು ಭಕ್ತಸಂಚಯವು
ಕೋವಿದರು ಕವಿ ಗಮಕಿ ಪಂಡಿತ
ಶೈವತಂತ್ರಾಭಿಜ್ಞ ಮನುಜರು
ಠೀವಿ ಬಂದರು ಸಕಲ ಪೂಜಾದ್ರವ್ಯದೊಡಗೂಡಿ ೯

ಚತುರವಚನರು ಯೋಗಶಾಸ್ತ್ರದ
ಗತಿಯ ಬಲ್ಲವರಂತೆ ಗಾಯಕ
ನುತಿವಿಶಾರದ ಸಕಲಶಾಸ್ತ್ರಜ್ಞಾನ ಪರಿಣತರು
ಪತಿಪದಾರ್ಥದ ತಿರುಳನರಿದಿಹ
ರತಿಶಯದಿ ಪಶುಪಾಶದರ್ಥದ
ಮತಿಯುತರು ನೆರೆದಿರ್ದರಂದಿನ ಪಾದಪೂಜೆಯಲಿ ೧೦

ಕಮಲ ಚಂಪಕಕುಸುಮದಾಮದಿ
ದಮನ ಕುಂದದ್ರೋಣ ನಿಯಮದಿ
ವಿಮಲತರ ಮಂದಾರ ಮರುವಕ ಪಾಟಲೀಸುಮದಿ
ಕುಮುದ ಶಮಿ ಕರವೀರ ಬಿಲ್ವದಿ
ನಮಿತ ಬಂಧೂಕಾದಿ ಪುಷ್ಪದೊ
ಳುಮೆಯರಸನೊಲವಾಂತು ಗುರುಪದಪೂಜೆ ಮಾಡಿದರು ೧೧

ಸರತರದ ಮಣಿಖಚಿತ ದಿವ್ಯಾ
ಭರಣಮಾಲಾಲಂಕೃತೆಯರುರು
ತರದ ಕರರುಹ ಕಾಂತಿಯುತೆಯರಮಂದಭಕ್ತಿಯರು
ಚರಣಯುಗ ಮಂಜೀರದೆಸಕದ
ತರುಣಿಯರ್ ಕಂಕಣ ಝಣತ್ಕೃತಿ
ಯುತೆ ಮೆರೆದ ಕನಕಾಂಗಿಯರು ತಾವೈದಿದರು ಮಠಕೆ ೧೨

ಹರಿಸದಿಂದಾಗಮಿಸಿ ಸುಮಮಂ
ಜರಿಯ ಪಥಮನ ಪದಕಮಲಕದ
ಧರಿಸುತಾಗಮವಚನನಿಚಯಸುರಚಿತಮಂಗಳವ
ಪರಮರಾಗದೊಳಂದು ಪಾಡುತ
ಪರಿಪರಿಯ ವರಗಳನು ಬೇಡುತ
ಗುರುಪದಾಂಬುಜತೀರ್ಥಕಾಗಳು ನೀಡಿದರು ಕಲವ ೧೩

ಜಯವು ಚೆನವೀರಾರ್ಯಶಿಷ್ಯಗೆ
ಜಯವು ಚೆನವೀರಾರ್ಯಗುರುವಿಗೆ
ಜಯವು ದುರಿತವಿದೂರ ಭಕ್ತರಪಾರಸಂಕುಲಕೆ
ಜಯವು ಪರತರ ಶೈವತತ್ತ್ವಕೆ
ಜಯವು ಲಿಂಗಾಂಗೈಕ್ಯಮಾರ್ಗಕೆ
ಜಯವು ಷಟ್ಸ್ಥಲವಿದ್ಯೆಗೆನುತಲಿ ಪೊಗಳಿದರು ಜನರು ೧೪

ಸೂಳಿನಲಿ ಕೈಕೊಂಡು ತೀರ್ಥವ
ಬಾಳಿದೆವು ನಾವೆಂದು ಮುದದಿಂ
ಪೇಳುತಲಿ ಶಿವಭಕ್ತನಾರಿಯರಂದು ಭಕ್ತಿಯಲಿ
ಬೀಳುವೀ ತನುವನ್ನು ನಂಬುತೆ
ಪಾಳುದೇಗುಲವಾಗುತಿರ್ದೆವು
ಭಾಳಲೋಚನದಯದಿ ಬದುಕಿದೆವೆಂದು ಪೊಗಳಿದರು ೧೫

ಕರೆದರಾಗಳು ಪುಷ್ಪವೃಷ್ಟಿಯು
ಮೆರೆದರಂದಾ ಜಯನಿನಾದದೆ
ತರತರದಿ ಕುಳ್ಳಿರ್ದು ಸವಿದರು ಮೃಷ್ಟಭೋಜನವ
ಪರಿಮಳದ ವರಗಂಧಲೇಪನ
ದುರುತರದ ತಾಂಬೂಲಪುಷ್ಪದಿ
ನಿರುತ ಹರ್ಷದಿ ಪಾಡಿ ಗುರುವನು ನುಡಿದರಾ ಜನರು ೧೬

ಇದುವೆ ಪರಶಿವಮಂತ್ರಸದನವಿ
ದಿದುವೆ ಶಂಕರತಂತ್ರಭೂಜವಿ
ದಿದುವೆ ಮುಕ್ತಿಗೆ ಮೂಲ ಭಯನಿರ್ಮೂಲದಾಸ್ಥಾನ
ಸದಮಲ ಜ್ಞಾನಾಂಬುರಾಶಿಯು
ವಿದಿತ ಲಿಂಗಾಂಗೈಕ್ಯಮಾರ್ಗವ
ದಿದುವಲಾ ಭವತಾಪನಾಶಕವೆಂದು ಪೇಳಿದರು ೧೭

ಎನುತೆ ವಿನಮಿಸಿ ನೆರೆದಜನವಂ
ದನಿತೆ ಗುರುವಾಶಿಷವನೊಂದುತೆ
ಘನತೆಯಿಂ ಬೋಧಿಸನೆ ನಲಿನಲಿದಾಡುತೊಲವಿನಲಿ
ಅನಿಬರಿಂಗರುಪಿದನು ಮೋಕ್ಷದ
ಘನವ ಮತತತ್ತ್ವದ ವಿಚಾರವ
ನನಘನಂದು ಮಹಾಂತಪತಿ ಪಶುಪಾಶವಿವರಣವ ೧೮

ಕರೆಯಿಸುತ ಸದ್ಭಕ್ತಜನಗಳ
ನಿರದೆ ತಾನೊಂದೊಂದುಭಾಗವ
ವಿರಚಿಪುದು ನೀವೆನುತನುಜ್ಞೆಯನೀಯೆ ಸರ್ವರಿಗೆ
ಗುರುವಿನನುಮತಿಯಿಂದ ಮಠವನು
ಭರದಿ ರಚಿಸಿದರಂದು ಭಕ್ತರು
ಪರಮಹರ್ಷದಿ ವರದ ಗುರುವಿನಕೃಪೆಯ ಬಯಸುತಲಿ ೧೯

ಗುರುವರನ ಗದ್ದುಗೆಯ ನೂತನ
ತರದಿ ರಚಿಸಿ ಕಾಡಮಠವೊಂ
ದಿರಲು ಜೀರ್ಣೋದ್ಧಾರಗೆಯ್ದುದನಾಧರಪ ಗುಣದಿ
ಮೆರೆಯುತಿರಲಂದೊಂದುದಿನ ಚರ
ವರನು ಶಿವರಾತ್ರೀಶ್ವರನು ನಿಜ
ಕರುಣದಿಂದ ಮಹಾಂತದೇವಂಗೊರೆದ ಕನಸಿನಲಿ ೨೦

ಪರತರದ ಶಾಖಾಮಠಂಗಳ
ವಿರಚಿಸುತಲುದ್ಧರಿಸುತವನಾ
ವರಣಪುರ ಪೀಠಾಧಿಪತಿ ಗುರುವರ ಮಹಾಂತಾರ್ಯ
ಪುರಪುರವನಾ ಗ್ರಾಮಗಳ ಸಂ
ಚರಿಸಿ ಸುಮತಾಚರಣೆಯನು ಮುಂ
ಬರಿಸಿ ಪರವಾದಿಗಳ ವಾದದಿ ಜಯಿಸುತೈತಂದ ೨೧

ಹಿಂದಿರುಗೆ ಸುತ್ತೂರಪೀಠಾ
ನಂದಿತನು ಗುರುವರ ಮಹಾಂತನು
ಚಂದದಿಂದೆಸಗುತಿಹ ಧರ್ಮವಿಚಾರವಧ ಕೇಳಿ
ಅಂದು ಕೇಳ್ ಸ್ವಾತಂತ್ರ್ಯವಿತ್ತನ
ಮಂದಗುಣಿ ಮುಮ್ಮಡಿಯ ಕೃಷ್ಣನ
ದೆಂದು ನಿರ್ವಿಘ್ನತೆಯಿನೆಸೆದನು ಮಾರ್ಗಮಾರ್ಗದಲಿ ೨೨

ಅನಿತರಲಿ ಯಮಿವರ್ಯ ತಾನಂ
ದನಘಭಕ್ತರ ಪೊರೆವ ಬಗೆಯಿಂದ
ನನುಸರಿಸಿ ಪೊರಮಟ್ಟ ಬಿರುದಾವಳಿಸಮೇತದಲಿ
ಜನಜನಿತ ಸದ್ವಾರ್ತೆ ಪರ್ಬಿದು
ದನುವಿನಿಂ ಗುರುದರ್ಶನಕೆ ನಿಜ
ಮನದಲಂದಾ ಭಕ್ತನಿಚಯುವದ್ಯದಿತಾದರದಿ ೨೩

ಎಲ್ಲಿ ನೋಡಿದೊಡಲ್ಲಿ ತೋರಣ
ವೆಲ್ಲಿ ನೋಡಿದೊಡಲ್ಲಿ ಚಪ್ಪರ
ವೆಲ್ಲಿ ನೋಡಿದೊಡಲ್ಲಿ ನೀರಿನ ಚಳಯ ತೋರಿದುದು
ಎಲ್ಲಿ ನೋಡಿದೊಡಲ್ಲಿ ಕೀರ್ತನ
ವೆಲ್ಲಿ ನೋಡಿದೊಡಲ್ಲಿ ಗಜಬಜ
ವೆಲ್ಲಿ ನೋಡಿದೊಡಲ್ಲಿ ವಾದ್ಯನಿನಾದದಬ್ಬರಣೆ ೨೪

ಪರಿಕರವನದವೆರಸಿ ಗುರುವರ
ನಿರದೆ ತಾ ಪೊರಮಟ್ಟು ಪುರಬಾ
ಹಿರದಲೈತರೆ ನಯುಭಯುದಲಾ ಭಕ್ತಪರಿವಾರ
ಬರುತಲಾ ಬಿರುದಿನ ಸಮೋಪದಿ
ಮೆರೆವ ನಂದೀಧ್ವಜದೊಡನೆ ಶಿವ
ಶರಣನನು ಕರೆತಂದರಂದಾ ವಾದ್ಯಘೋಷದಲಿ ೨೫

ಬರುತ ಗುರುವೈತಂದು ವರವುಂ
ದಿರದಲಿಳಿಯುತ ಬಂದ ನಿಜಭ
ಕ್ತರನು ಹರಸುತಲಂದು ಶಿವತತ್ತ್ವವನು ಬೋಧಿಸುತ
ಮೆರೆದು ಪುರಪುರದಂತರವ ತಾ
ನಿರದೆ ಹರಿಸದಿ ಪುಗುತಲಂದಾ
ವರಣಪುರಪತಿಯೆಸೆದನತಿಶಯ ಧರ್ಮಮಾರ್ಗದಲಿ ೨೬

ಒಂದುದಿನ ಸಭೆಯೊಳಗೆ ಭಕ್ತರ
ಗೊಂದಣಿಯು ಮೆರೆದಿರಲು ಪರಮಾ
ನಂದದಿಂ ಸೂಚಿಸುತೆ ವರಲಿಂಗಾಂಗಸಮರಸವ
ಚಂದದಿಂ ಗುರುವರನು ಜಂಗಮ
ವೃಂದವನು ಮುಂಕೊಂಡು ಶಿವಪದ
ದಂದವನು ನೆನೆಯುತ್ತ ಮುಂದಣ ಪಯಣಕನುವಾದ ೨೭

ಅನಿತರೊಳಗಂದೊಂದು ಪುರದೊಳು
ಚಿನುಮಯನ ರೂಪಾಂತ ಮಾಹೇ
ಶನನದೊರುವನು ಭಕ್ತನೀಕ್ಷಿಸಿ ಪೂರ್ಣಭಕ್ತಿಯುಲಿ
ವಿನಮಿಸುತಲೆನಗಿಂದು ತತ್ತ್ವವ
ನನುಗೊಳಿಸು ಯಮಿದೇವ ನೀನೆನ
ಲನುಪಮಿತಚಾರಿತ್ರನೊರೆದನು ಸಾರಸಂಗತಿಯ ೨೮

ಶಿವನನಾಮವ ಪಠಿಸುವಾತನು
ಶಿವನಭಜನೆಯ ಮಾಡುವಾತನು
ಶಿವನ ಕಾರ್ಯಾಸಕ್ತನೆನಿಸುತೆ ಮೆರೆಯುವವ ಮುದದಿ
ಶಿವನ ಪರಮಾಗಮವ ನಿರುಕಿಸಿ
ಶಿವನದೆನ್ನುತೆ ಸಕಲವಸ್ತುವ
ಬುವಿಯೊಳಿರುವವನವನೆ ಸುಕೃತಿಯು ಕೇಳು ನೀನೆಂದ ೨೯

ಪರಮ ಪರಶಿವಗಪ್ಪತನುಗಳು
ಮೆರೆದಿರಲ್ಕವ ಶಿವನರೂಪೆಂ
ದೊರೆಯುದವ ಮಾಹೇಶ್ವರಾಸ್ಥಾನದವನೆನಿಸುವನೆ
ಭರದೆ ಮೂವತ್ತಾರುತತ್ತ್ವಗ
ಳಿರುವ ನೆರೆ ತಿಳಿಯುತ್ತ ಜಾಡ್ಯವ
ಹರಿಸಿಕೊಳ್ಳುವುದು ವರದ ಚಿದ್ಘನ ಗುರುವಿನೆಡೆಯೊಳಗೆ ೩೦

ಇನಿತ ಭಕ್ತನಿಗೊರೆದು ಗುರುವರ
ನನಘ ಷಟ್ಸ್ಥಲದಿರುವ ಪೇಳುತ
ವಿನುತ ಲಿಂಗಾಂಗೈಕ್ಯತತ್ತ್ವವನೊಲಿದು ಬೋಧಿಸುತ
ಅನುವಿನಿಂ ತೆರಳುತ್ತ ಮುಂದಕೆ
ವನ ವನಾಂತರವನ್ನು ದಾಟುತ
ಅನುಪಮಾತ್ಮನು ಭಕ್ತಸಂಕುಲದೊಡನೆ ಕೂಡುತಲಿ ೩೧

ಬರುಬರುತಲಂದೂರಿನೂರಿನ
ಪರಮಭಕ್ತರ ಸೇವೆಯನು ತಾ
ನಿರದೆ ಕೈಕೊಳುತಂದು ಹರಸುತ ಸಾನುರಾಗದಲಿ
ಉರುತರದ ಸುತ್ತೂರಪೀಠೇ
ಶ್ವರ ಮಹೋತ್ಸವದಿಂದ ಪರಿಕರ
ವೆರೆದು ಬಿರುದಾವಳಿಯಿನೆಸೆಯುತ ಮಠವನೊಳಪೊಕ್ಕ ೩೨

ಚಾರುತರ ಸುತ್ತೂರ ಪೀಠದ
ಪಾರಮಹಿಮ ಮಹಾಂತಗುರು ಮಹಿ
ಶೂರ ಮುಮ್ಮಡಿ ಕೃಷ್ಣರಾಜಂಗೊರೆಯಲಭಿಮತವ
ಕೋರಿಕೆಯ ಪೂರಯಿಸೆ ಪರಮೋ
ದಾರಮತಿ ನರಪಾಲ ಹರಿಸದೆ
ಸಾರಸೇವಾಧನಕೆ ಸನ್ನದನಿತ್ತನೊಲವಿನಲಿ ೩೩

ಕೊಡಗು ಮಲೆಯಾಳಂಗಳಲಿ ನೆರೆ
ಯುಡಸಿರುವ ಬಹುತರದ ತೊಡಕನು
ತೊಡೆಯಲಿಚ್ಛಿಸಿ ಬಸವಲಿಂಗನ ಕರೆಯುತೊಲವಿನಲಿ
ಒಡನೆ ಪಟ್ಟವಕಟ್ಟಿ ನಡೆದನು
ಪೊಡವಿಯೊಡೆಯನು ಕೃಷ್ಣರಾಜನು
ಬಿಡದೆ ಬರೆಯಿಸುತಿತ್ತ ಸನ್ನದ ಬಸವಲಿಂಗನಿಗೆ ೩೪

ಬಸವಲಿಂಗಾಚಾರ್ಯ ಧರೆಯೊಳು
ಜಸದೆ ಮೆರೆದನು ವೀರಪೀಠದಿ
ಲಸಿತ ಶಿವಲಿಂಗಾಂಗವೆರಡರ ಸಂಗಸೌಖ್ಯದಲಿ
ಅಸಮನಯನನ ರೂಪನೀತನು
ವಸುಧೆಯೊಳಗೆ ಶಿವೈಕ್ಯವಾಗಲು
ಬೆಸನದಿಂದೈತಂದ ಮಠಕಾ ಗುರುಮಹಾಂತಾರ್ಯ ೩೫

ಇರುತಿರಲು ಸದ್ಧ್ಯಾನಮಹಿಮೆಯ
ನರಿದು ಮುಮ್ಮಡಿಕೃಷ್ಣಭೂವರ
ನಿರದೆ ತಾನಿಪ್ಪತ್ತುವರಹದ ಭೂಮಿಮಾನ್ಯವನು
ಚರವರಗೆ ತಾನಿತ್ತು ಸನ್ನದ
ಬರೆಯಿಸಿದನಂದಿನಲಿ ತಿರುಗಿಯು
ಪರಮಕೀರ್ತಿಯನೊಂದಿ ಮೆರೆದನು ಭೂಪಕುಲದೀಪ ೩೬

ವೀರಶೈವಾಚಾರ ಬೋಧೆಯ
ಧಾರಿಣಿಯಲುರೆ ಪಸರಿಸುತೆ ಸಂ
ಚಾರದಲಿ ಶಿಷ್ಯರಲಿ ಕಾಣ್ಕೆಯ ತೆಗೆವ ಸನ್ನದನು
ಧೀರ ಮುಮ್ಮಡಿ ಕೃಷ್ಣರಾಜ ವಿ
ಚಾರಪರ ತಾನಿತ್ತು ಮನ್ನಿಸಿ
ಸಾರಪಟ್ಟಸ್ಥಲ ಗುರುವ ಕಳುಹಿದನಾಗ ಮುದದಿಂದ ೩೭

ವೀರಮಂತ್ರಿಗಳವರೆ ಯೆಳೆಯಿಂ
ದೂರಿನಧಿಪರು ಶುಭಗುಣಾಢ್ಯರು
ಸಾರತರದಲಷಿಂಗ್ಟನಧಿಪನನಂತ ಹರ್ಷದಲಿ
ಮಾರಹರಸಮರೂಪನಾಗಿಹ
ವೀರಶೈವೋದ್ಧರಣಶೀಲಗೆ
ಸಾರಿ ಕೊಟ್ಟರು ಗಮನನಿರ್ವಿಘ್ನತೆಯಶಾಸನವ ೩೮

ಪರಮರಂಭಾಪುರಿಯ ಪೀಠದ
ಗುರುಗಳೀರ್ವರಿಗಂದು ಕಲಹವು
ಬರಲು ಕೇಳುತ ಕೃಷ್ಣರಾಜನು ಶುಭಗುಣಾಲಯನು
ಕರೆಯಿಸುತ ಯಮಿವರಮಹಾಂತನ
ಭರದೊಳಲ್ಲಿಗೆ ಪೋಗಿ ನೆರೆ ಪರಿ
ಹರಿಪುದೆನಲಾಚಾರ್ಯ ತಾನಂದಿರದೆ ಹೊರಹೊರಟ ೩೯

ಹರಿಸದಿಂದೆಡೆಯೂರಿನೊಳಗವ
ರಿರುವರಿರುತಿರಲಲ್ಲಿಗತ್ಯಾ
ದರವಲೈದುತ ಕುಶಲಗತಿಯದನರಿದು ಮಂಡಿಸುತ
ಬರಿಸಿ ಮಾಹೇಶ್ವರರ ಭಕ್ತರ
ನೆರವಿಯೊಳು ಪರಿಹರಿಸಿ ಕಲಹವ
ಬರೆದ ಸಮ್ಮತಿಪತ್ರದೊಡನೆಯೆ ಹೊರಟ ಯತಿವರ್ಯ ೪೦

ಹರಸುತಂದಾಪುರದ ಭಕ್ತರ
ಪರಿಕರವನೊಡವೆರಸಿ ತಾ ಮುಂ
ಬರಿಸಿ ಪಯಣವನಿರದೆ ಮುಮ್ಮಡಿಕೃಷ್ಣರಾಜನಿಹ
ಅರಮನೆಯನೊಳಪೊಕ್ಕು ತಾ ತಂ
ದಿರುವ ಪತ್ರವನೋದಿ ನೃಪನೊಳು
ತೆರಳಿದನು ಮರ್ಯಾದೆಯಲಿ ಸುತ್ತೂರ ವರಮಠಕೆ ೪೧

ಒಂದುದಿನದಿ ಮಹಾಂತದೇಶಿಕ
ಸಂದಯೋಗಾನಂದದಿಂದಿರೆ
ಬಂದಳಾ ಭ್ರಮರಾಂಬೆ ಜಗದಾಲಂಬೆ ಮುದದಿಂದ
ಮುಂದುವರಿಸುವುದೀಶಭಕ್ತರ
ನಿಂದೆನಲು ತಾ ಜಗ್ಗನೇಳುತ
ಮಂದಗುಣ ನೆರೆ ಮುಡುಕುದೊರೆಯಾ ಗಿರಿಗೆ ನಡೆತಂದ ೪೨

ವೀರಶೈವರ ಸಭೆಯು ತಾನದು
ಭೂರಿವೈಭವದಿಂದ ಕೂಡಿರೆ
ಸಾರತರ ಶಿವಯೋಗಿ ಮಧ್ಯದ ಮಂಡಿಸಿರುತಿರುತ
ಮಾರಹರ ಮತತತ್ತ್ವರೀತಿಯ
ಸಾರಿ ಬೋಧಿಸುತಂದು ಮೆರೆದನ
ಪಾರಗುಣಮಣಿಹಾರ ಸುತ್ತೂರೀಶನಂದಿನಲಿ ೪೩

ಲಾಲಿಸುತ ಗುರುವರನ ಬೋಧೆಯ
ಶೂಲಧರ ಸದ್ಭಕ್ತರೆಲ್ಲರು
ಶೀಲಮಾನಸರಾಗಿ ಹರ್ಷದಿ ಚರಗೆ ವಂದಿಸುತ
ಪಾಲಿಸೆಮ್ಮನು ಭವವಿದೂರನೆ
ನೀಲಕಂಧರರೂಪ ಶುಭಗುಣ
ಲೀಲೆಯಿಂದಲಿ ಕಾವುದೆನುತಲಿ ನಮಿಸಿ ನುತಿಸ್ಸಿದರು ೪೪

ನೆರೆದ ಸಭೆಯುನು ಹರ್ಷದಿಂದಲಿ
ಹರಸಿ ಯಾತ್ರೋತ್ಸವವ ನಿರುಕಿಸಿ
ಸರಿಪಡಿಸುತಲ್ಲಿನ ವಿಚಾರವ ಮೆರೆದು ಗುರುನಾಥ
ಪರಿಕರವನದ ಬೆರೆದು ತಾ ಪಿಂ
ದಿರುಗಿ ಬಿರುದಾವಳಿ ಸಮೇತದಿ
ಭರದಿ ಭಕ್ತರ ಜಯನಿನಾದದೆ ಗುರುವು ಹೊರಹೊರಟ ೪೫

ಬರುಬರುತಲಂದೂರಿನೂರಿನ
ಪರಮಭಕ್ತರ ನೆರವಿಯುನು ನೆರೆ
ಹರಸಿ ಮೆರವಣಿಗೆಯಲಿ ಬರುತಲಿ ಕಲಿತ ಹರ್ಷದಲಿ
ಇರದೆ ಕಾಣ್ಕೆಯ ಕೈಗೊಳುತಲಾ
ವರಣಪುರವರಪತಿ ಮಹಾಂತನು
ಹರಿಸದಿಂದೈತಂದ ಮಠಕಾನಂದಭರದಿಂದ ೪೬

ಒಂದುದಿನ ಮಾದೇಶ್ವರನ ಗಿರಿ
ಗಂದು ಪಯಣವನೆಸಗಿ ಪರಿಕರ
ದಿಂದಲಾ ಸುತ್ತೂರ ಪೀಠಾಧಿಪ ಮಹಾಂತಾರ್ಯ
ಬಂದು ಸೇರುತಲಲ್ಲಿ ಜಂಗಮ
ವೃಂದಮದನೊಡವೆರೆದು ಕಟ್ಟೆಯು
ದೊಂದ ವಿರಚಿಸಿ ಲಿಂಗಪೂಜಾನಂದದಿಂದೆಸೆದ ೪೭

ವಿರತಿಗುಣವದನಾಂತ ಮಾದೇ
ಶ್ವರನ ವರವನು ಪಡೆದು ತಾ ಪಿಂ
ದಿರುಗಿ ವೈಭವದಿಂದ ಹೊರಟನು ಗಿರಿಯ ಬಳಿಯಿಂದ
ಬರುತ ಗಿರಿ ವನ ನದಿ ತಟಾಕವ
ತರದಿ ದಾಂಟುತ ಬಂದನಂದಾ
ವರಣಪುರಕಾನಂದಮಯ ವರಗುರುಮಹಾಂತಾರ್ಯ ೪೮

ಬಂದುಪೊಕ್ಕನು ಮಠವ ನಿತ್ಯಾ
ನಂದಿ ಕರೆಯಿಸುತಿರದೆ ಶಿಷ್ಯನಿ
ಗಂದು ಶುಭಲಗ್ನದಲಿ ದೀಕ್ಷಾಕರ್ಮವದನೆಸಗಿ
ಅಂದು ಶಿರದಲಿ ಕರವನಿರಿಸುತ
ಚಂದದಿಂ ಮಂತ್ರವನು ಬೋಧಿಸು
ತೊಂದ ನುಡಿದನು ಲಿಂಗವನು ಕರಕಿತ್ತು ಗುರುನಾಥ ೪೯

ಪರಮ ಶಿವಲಿಂಗವನು ನೀನಾ
ದರದಿ ನಿತ್ಯವು ಬಿಡದೆ ಪೂಜಿಸು
ಹರನಸಂಗವನಾಂತ ಶರಣರ ಸಲಹು ನೀನೆನುತ
ಬೆರೆದು ಲಿಂಗಾನಂದವಿಭವದೊ
ಳಿರದೆ ಭಕ್ತೋದ್ಧಾರನೆನಿಸುತ
ಧರಣಿಯಲಿ ಶಿವಭಕ್ತಿಮಾರ್ಗವ ತೋರು ನೀನೆಂದ ೫೦

ಭರದಲಾಶೀರ್ವಾದಪತ್ರವ
ನಿರದೆ ತಾ ಬರೆಯಿಸುತೆ ಕಳುಹಿದೆ
ಪುರದ ಹಳ್ಳಿಯ ಭಕ್ತನಿಚಯಕೆ ಗುರುಮಹಾಂತಾರ್ಯ
ತರತರದಿನೊಲವಿಂದ ಬಂದರು
ಶರಣಶರಣೆಯರೊಂದುಗೂಡುತ
ಪರಮ ಮುಕ್ತಿಯ ಪದವ ಬಯಸುವ ಭಕ್ತರಂದಿನಲಿ ೫೧

ಪರದು ಭಕ್ತಮಹೇಶರೊಂದೆಡೆ
ಮೆರೆಯಲೊಂದೆಡೆಯಾ ಪ್ರಸಾದಿಗ
ಳಿರದೆ ಹರಣದ ಲಿಂಗಿಗಳು ನೆರೆ ಸೇರುತೆಸೆಯುತಿರೆ
ಶರಣರೈಕ್ಯರು ಬಂದು ಕೂಡಿರೆ
ಮೆರೆಯಿಸುತಲಾ ಲಿಂಗವೂರರ
ಪರಿಯ ರಾಜಿಸುತಿರ್ದುದಂದಾ ಸಭೆ ವಿನೋದದಲಿ ೫೨

ತರಣಿ ಮಾತೃಕೆ ವರ್ಗ ಧರಣಿಯ
ಬೆರೆದ ಸಂವತ್ಸರ ವಿಕಾರಿಯ
ದಿರಲು ನೆರೆದಾ ಸಭೆಯ ಮಧ್ಯದಿ ಭದ್ರಪೀಠದಲಿ
ಇರದೆ ಕುಳ್ಳಿರಿಸುತ್ತಪಟ್ಟವ
ವಿರಚಿಸುತಲಾ ಸಿದ್ಧಲಿಂಗಗೆ
ಮೆರೆವ ಯೋಗಾನಂದಭವನದಿ ಗುರುಮಹಾಂತಾರ್ಯ ೫೩

ಪರಮಲಿಂಗಾನಂದ ವೈಭವ
ದಿರುವ ತಾನನುಸರಿಸುತಾದಿಯ
ಗುರುವರನ ಗದ್ದುಗೆಯ ಬಳಿಯಿಹ ಯೋಗಭವನದಲಿ
ಮೆರೆಮ ಶರಣರಗೋಷ್ಠಿಯಿಂದಾ
ಪರದಿ ಕರೆಯುತೆ ಸಿದ್ಧಲಿಂಗನ
ಹೆರಸಿ ಹರನೊಳಗೈಕ್ಯನಾದನು ಗುರುಮಹಾಂತಾರ್ಯ ೫೪

ಸುರರ ಪೆಂಡಿರ ಕಬರಿಯೊಳಗಿಹ
ಪರಮಸುಮಗಳ ಗಂಧದಿಂದಲಿ
ಮೆರೆವ ಪಾದಪಯೋಜಯುಗಳೆಯೆ ಶಾಂತಿದಾಯಿನಿಯೆ
ಅರಿವ ಕರುಣಿಸಿ ಮುಕ್ತಿಪದವನು
ಬರಿಸಿ ಭಕ್ತರ ಪೊರೆದು ನಲಿಯುವ
ಗಿರಿಸುತೆಯೆ ಕುಡು ಶುಭವ ಚಾಮುಂಡಾಂಬೆ ಜಗದಂಬೆ ೫೫

# ಸಿದ್ಧಲಿಂಗ ಶಿವಾಚಾರ್ಯ ಕಥನಂ

ಹರಮತವನುದ್ಧರಿಸುವಲಿ ತಾ
ಪೊರೆದು ಬರದಲಿ ದೀನಜನಗಳ
ಮೆರೆದನಾ ಸುತ್ತೂರ ಪೀಠದಿ ಸಿಂದ್ಧಲಿಂಗಾರ್ಯ

ಶ್ರೀ ಜಟಾಧರ ನಾಗಭೂಷಣ
ರಾಜಧರ ಶಿಖಿನೇತ್ರಶೋಭಿತ
ಮೂಜಗದ ಮೊದಲೊಡೆಯ ಭವಭಯಹರಣ ಶರಣೇಶ
ರಾಜರಾಜನ ಪರಮಸಖ್ಯದೆ
ರಾಜಿಸುವ ಪರಮೇಶ ಯತಿಜನ
ರಾಜಿವಂದಿತ ಕುಡು ಶುಭವ ನೀಂ ಸೋಮನಾಥೇಶ ೧

ಮತವನುದ್ಧರಿಸುತ್ತ ಪೂಜಾ
ವ್ರತವನನುಸರಿಸುತ್ತ ತನ್ನಭಿ
ಮತವ ಮುಂಬರಿಸುತ್ತ ವಿರತಿಯ ಗುಣವನಾಂತವನ
ಹಿತದಲಾ ಗುರುಸಿದ್ಧಲಿಂಗನ
ಕತೆಯ ಲಾಲಿಸು ಸಿದ್ಧಲಿಂಗನೆ
ಗತಿಯು ನಿನಗಹುದೆಂದ ಶಿವರಾತ್ರೀಶ ಗುಣಕೋಶ ೨

ಗುರುವರೇಣ್ಯ ಮಹಾಂತದೇಶಿಕ
ನಿರಲು ಯೋಗಾನಂದಭವನದಿ
ಹರಿಷದಿಂದಾ ಸಿದ್ಧಲಿಂಗಯತೀಂದ್ರನೊಲವಿನಲಿ
ಬೆರೆದು ಲಿಂಗಾನಂದವಿಭವದಿ
ಶರಣಸಮುದಾಯದಲಿ ತಾನಂ
ದೊರೆದು ಬೋಧೆಯನಿರದೆ ಸುಕಥಾಲಾಪನೆಯೊಳಿರ್ದ ೩

ಆದಿಗುರು ಶಿವರಾತ್ರಿದೇವನ
ಪಾದವನು ಜಾನಿಸುತ ತಾನಂ
ದಾದರದಿ ಪೂಜಿಸುತ ನಿತ್ಯಾನಂದದಿಂದಿರುತ
ವೇದಸಾರವನೆಲ್ಲವರಿಯುತ
ವಾದಿಗಳನಿರದಂದು ಜಯಿಸುತ
ಮೇದಿನಿಯಲುಾರೆ ಮೆರೆದನಾ ಗುರುಸಿದ್ಧಲಿಂಗೇಶ ೪

ಮೂರುಕಾಲದಿ ಪರಮಪೂಜಾ
ಚಾರುಕರ್ಮದಿ ಬೆರೆದು ತಾನಾ
ಪೂರಪಂಚಾಮೃತದ ಸೇಕವನೆಸಗುತನುವಿನಲಿ
ಸಾರ ದೂರ್ವಾ ಬಿಲ್ವ ಶಮಿ ಕರ
ವೀರಕುಸುಮದ್ರೋಣಚಯದಲಿ
ಮಾರಹರವರಪಡಪ ಪೂಜಿಸುತೆಸೆದನೊಲವಿನಲಿ ೫

ಇರಲಿರಲು ಗುರುವರನು ಪರಿಕರ
ವೆರಸುತಂದಾ ಮುಡುಕದೊರೆಯಾ
ಗಿರಿಗೆ ಪೊರಮಡುತಂದೆ ಬಿರುದಾವಳಿಸಮೇತದಲಿ
ಬರುಬರುತಲಾ ಮುನಿಯುಗಸ್ತ್ಯನ
ಪರತರಾಶ್ರಮವಿರಲು ಪುಗುತದ
ಹರಿಷದಿಂ ಭ್ರಮರಾಂಬಿಕಾ ಶ್ರೀಗಿರಿಗೆ ನಡೆತಂದ ೬

ಮುಡುಕುದೊರೆಯಾ ಕ್ಷೇತ್ರದಲಿ ತಾ
ನೆಡೆಬಿಡದೆ ನಡೆದೈತರುವ ನೆರೆ
ನಡೆಯು ತಾನನುಸರಿಸಿ ದೇವರ ಸೇವೆಯನು ಮುದದಿ
ನಡೆಯಿಸುತಲಂದೊಂದು ಮಠವನು
ಬಿಡದೆ ವಿರಚಿಸಿ ನಾಡಮಠವೆಂ
ದಿಡುತೆ ಪೆಸರನು ಮೆರೆದನಂದಾ ಸಿದ್ಧಲಿಂಗಾರ್ಯ ೭

ನಿರುಕಿಸುತಲಂದಷ್ಟಬಂಧನ
ವಿರದಿಹುದ ನೂತನದ ತರದಲಿ
ವಿರಚಿಸುತಲರ್ಚನೆಯು ಮಾಡಿಸಿ ಶಾಸ್ತ್ರಮಾರ್ಗದಲಿ
ಮೆರೆಯಿಸುತಲುತ್ಸವದ ಮೂರ್ತಿಯ
ಶರಣರಾರಾಧನೆಯನೆಸಗುತೆ
ಮೆರೆದನಂದಾ ನಾಡಮಠದಲಿ ಸಿದ್ಧಲಿಂಗೇಶ ೮

ಅಲ್ಲಿರುತಲಾ ಗಿರಿಯಮಹಿಮೆಯ
ನೆಲ್ಲರಿಗೆ ಪೇಳುತ್ತ ಜಂಗಮ
ರಲ್ಲಿರಲು ಸದ್ಗೋಷ್ಠಿಯಲಿ ಬೆರೆದಂದು ಗುರುನಾಥ
ಸಲ್ಲಲಿತದಾ ಲಿಂಗಪೂಜೆಯ
ನಿಲ್ಲದೆಯೆ ತಾ ಮಾಡಿ ಭಕ್ತರ
ವಲ್ಲಭನು ಪುರಪುರವ ದಾಂಟುತ ಬಂದ ನಿಜಪುರಕೆ ೯

ಬಂದುದೊಂದು ರವಾವಿಲಾಸದ
ಮಂದರಾಜ್ಞಿಗೆ ಷಷ್ಟಿಪೂರ್ತಿಯೊ
ಚಂದದಿಂದಾ ಪರಮ ಕೃಷ್ಣಕ್ಷಿತಿಪನೊಲವಿನಲಿ
ಅಂದು ಬರಿಸಿದನಖಿಲವಿಬುಧರ
ವೃಂದವನು ಗುರುಗಳನು ಮಾನ್ಯರ
ಸಂದಣಿಯ ಮುದದಿಂದ ಬಹುವಿಧ ಸಂಭ್ರಮಾಶಯದಿ ೧೦

ಮೆರೆವ ಭೂವರವಂಶತಿಲಕನು
ಪರಮಗುಣಮಣಿ ಸಿದ್ಧಲಿಂಗನ
ಬರಿಸುತಲಿ ನಲವಿಂದ ಬಹುತರಭಕ್ತಿಭಾವದಲಿ
ಪರತರದ ಮನ್ನಣೆಯಿನುಪಚರಿ
ಸಿರದೆ ವಾಹನವಸ್ತು ಸಂಚಯ
ವೆರಸಿ ಕಳುಹಿದನಂದು ಸಮ್ಮುದದಿಂದ ಗುರುವರನ ೧೧

ರಾಜನನುಮತಿಯಿಂದ ತೆರಳುತ
ವಾಜಿಯನು ತಾನೇರಿ ವಿಬುಧರ
ರಾಜಿಯನು ಕೂಡುತ್ತ ಪರಿಕರದಿಂದ ಬಿರುದಿನಲಿ
ರಾಜಧರನಪರಾವತಾರನು
ತೇಜದಿಂದೈತಂದ ನತ ಸುರ
ಭೂಜನನುಪಮ ಸಿದ್ಧಲಿಂಗಯತೀಂದ್ರ ನಿಜಮಠಕೆ ೧೨

ಭೀತಿಗೊಳಿಸುತಲೀಶ್ವರಾಬ್ದದಿ
ಭೂತಲದಲಾ ಕ್ಷಾಮಭರದಿಂ
ದೈತರಲು ಪುರಪುರದಲಾ ಗ್ರಾಮಾಂತರದೆ ನೆಲಸೆ
ಸಾತಿಶಯದಿಂ ಪೆಣದ ರಾಶಿಯ
ಮಾತು ಹಬ್ಬಿತು ಜನರ ಬಾಯಲಿ
ಕಾತರಿಸಿ ತಪಿಸುತ್ತ ಮನುಜಳು ನೊಂದರಂದಿನಲಿ ೧೩

ಹೊಟ್ಟೆಗನ್ನವದಿಲ್ಲದಿರುತಿರೆ
ಬಟ್ಟೆ ತೊಡವನು ಮಾರಿ ತಿಂದರು
ಕಟ್ಟುಕಟ್ಟಳೆಯನ್ನು ಮೀರುತ ಸುತ್ತಿ ಬೇಡಿದರು
ತೊಟ್ಟಿಲಲಿ ಮಲಗಿರುವ ಮಗುವನು
ಗುಟ್ಟಿನಲಿ ಮಾರುತ್ತ ಹೊರೆದರು
ಕೆಟ್ಟದೇಹವನಾಗ ಕಷ್ಟವ ಪೇಳಲಸದಳವು ೧೪

ಘನತರದಲಾ ಕ್ಷಾಮಗಾಲವ
ಹನುಸರಿಸಿ ತಂದೂರಿನೂರಿನ
ಮನುಜರನು ಕೆಡಿಸುತಿರಲಾ ಸುತ್ತೂರ ಗುರುವರನು
ಮನದಲತಿಚಿಂತಿಸುತಲಭಯುವ
ನನುವಿನಿಂದೆಲ್ಲರಿಗೆ ಕೊಡುತಲಿ
ಕನಿಕರದೊಳಂದನ್ನ ದಾನವ ಮಾಡಿ ರಕ್ಷಿಸಿದ ೧೫

ಪರತರದ ಶಾಖಾಮತಂಗಳಿ
ಗೊರೆದು ಜನರನು ಕಾರ್ಯ್ಯರೀತಿಯು
ಭರದಿ ತರಿಸುತಲೂರಿನೂರಿನ ಧಾನ್ಯಸಂಚಯುವ
ಪೊರೆಯುತೆಲ್ಲರನಂದು ಪರಮಾ
ದರದಿ ಗುರುವರ ಸಿದ್ಧಲಿಂಗನು
ಮೆರೆದನಂದಾ ದಾನಧರ್ಮದ ಪುಣ್ಯಕಾರ್ಯಡಲಿ ೧೬

ದುರಿತದುಪಟಳದಿಂದ ಜಗದೊಳು
ನರರು ಮುಂಗಾಣದೆಯೆ ಕಲಹದೆ
ಬೆರೆದು ಜಾತಿಯು ಕುಲವ ಮತವನು ಹಳಿದು ಹಂಗಿಸುತ
ಪರಮಗತಿಯುನು ಮರೆದು ಕೋಪದಿ
ನಿರದೆ ಶಾಂತಿಯು ಕೆಡಿಸಿಕೊಳುತಲಿ
ತೊರೆದರಂದಾ ಭೋಗಮೋಕ್ಷದ ಮಾರ್ಗದಾಸೆಯನು ೧೭

ಮುತ್ತಿದರು ಪರಮತದ ಜನಗಳು
ಹತ್ತಿದರು ಬಹುವಿಧದ ಕಲಹದೊ
ಳೆತ್ತನೋಡಲು ಶೈವಧರ್ಮದ್ವೇಷ ಮುಸಗಿದುದು
ಒತ್ತಿದರು ತಮವನ್ನು ತರುತಲಿ
ಸುತ್ತಿದರು ಬಗೆಬಗೆಯು ಕತೆಯಲಿ
ಗೊತ್ತುಗುರಿಯನು ಮೀರಿಬಂದರು ದುರ್ಬಲಾಶಯರು ೧೮

ನಡೆನುಡಿಯು ಪಸರಿಸುತ ಮೂಜಗ
ದೊಡೆಯುನನು ತಿಳುಹುತ್ತ ಪೊರೆಯುವ
ಮೃಡನಮತವದು ಕೆಡಲು ಗತಿಯೇನೆನುತ ಸಜ್ಜನರು
ಅಡಿಗಡಿಗೆ ತಪಿಸುತ್ತ ಭಯದೊಳು
ನಡುಗಿ ದಿಗ್ಭ್ರಮೆಯಿಂದ ಬಂದರು ೧೯
ತಡವ ಮಾಡದೆ ವೀರಸಂಗನ ಬಳಿಗೆ ದುಃಖದಲಿ

ಮೊದಲೊಳೀತನು ಮಠವನ್ನೈದುತ
ತೊಡಗಿರುವ ಸಂಗತಿಯ ತಿಳುಹುತ
ಸದಯಮಾನಸದಿಂದ ಮೆರೆಯುವ ಸಿದ್ಧಲಿಂಗನೊಳು
ಮುದದೆ ಬಂದನು ತನ್ನ ನೆಲೆಗುರೆ
ಕದನವನು ಹರಿಸಲ್ಕೆ ಯತ್ನವ
ನದನು ಮಾಡಿದನಾತ ಶಾಸ್ತ್ರಜ್ಞಾನಬಲದಿಂದ ೨೦

ಧರೆಯೊಳೆಸೆಯುವ ಶೈವವಿಬುಧರು
ಬರುತ ಪೇಳಲ್ಕಂದು ಯತಿಯೊಳು
ಹರನ ಮತಕೊದಗಿರುವ ನಿಂದಾದೋಷಸಂಗತಿಯ
ಹೊರಟು ಶಾಖಾಮಠಮತಂಗಳ
ಲಿರುವ ಮತಸಿದ್ಧಾಂತಬೋಧಕ
ಪರಮಪುಸ್ತಕಜಾಲವನು ಸಂಗ್ರಹಿಸುತೈತಂದ ೨೧

ಮತದ ಸದ್ಗ್ರಂಥಗಳ ಕೂಡಿಸು
ತತಿಶಯದಿ ಮುದ್ರಣಕೆ ಧನವನು
ಹಿತದಿ ತಾನಂದಿತ್ತು ಕಳುಪುತೆ ವೀರಸಂಗನಿಗೆ
ಅತಿಭರದಿ ಮುದ್ರಣದ ಕಾರ್ಯವ
ನತಿಮುದದಿ ಮಾಡಿಸುವುದೆನುತಲಿ
ಯತಿಪತಿಯು ತಾ ಪೇಳಿ ಕಳುಪಿದನಂದು ಸಾದರದಿ ೨೨

ಪರರ ವಾದವ ಜಯಿಸಿ ಮೆರೆದನು
ಸುರಿದನಂದಾ ಬಹಳಧನವನು
ಬರಿದುಮಾಡಿದನಂದು ತನ್ನಯ ಸಕಲಸೌಖ್ಯವನು
ಹರಮತದ ಮೇಲಿರ್ದ ಮುಸುಕನು
ತೆರೆದು ಜಸದಿಂದೆಸದನೀತನು
ಧರೆಯೊಳೀತನ ಪೊಗಳಲಾರಿಗುಮರಿದು ಕೇಳೆಂದ ೨೩

ಪರಮಶಿವಕುಲದಲ್ಲಿ ಜನಿಸುತ
ಹರನಪೂಜಾಸಕ್ತನಾಗುತ
ಶರಣರೊಡನಾಟದಲಿ ಮೆರೆಯುತ ಶೈವಧರ್ಮವನು
ಪರಿಕಿಸುತೆ ಯಜಮಾನಪದವಿಯ
ತರದೊಳಗೆ ತಾನಾಂತು ಮೆರೆದಿಹ
ಗಿರಿಶ ತತ್ತ್ವಜ್ಞಾನಿಯೆಸೆದನು ವೀರಸಂಗಾರ್ಯ ೨೪

ಈತನಲ್ಲವೆ ಹರನ ಮತವನು
ಭೂತಲದೆ ಪಸರಿಸಿದ ಪುರುಷ
ಖ್ಯಾತನವ ತಾನೀತನಲ್ಲವೆ ಭಕ್ತಜನವಂದ್ಯ
ಈತನಲ್ಲವೆ ವಿನುತಶರಣನು
ನೂತನದ ಪರಮಾವತಾರಿಯು
ವೀತರಾಗನು ಶೈವಧರ್ಮೋದ್ಧರಣತತ್ಪರನು 	೨೫

ಮೆರೆಯೆ ಶರದಾಗಮವು ರಸೆಯೊಳು
ನೆರೆಯುಲಂದಾಶ್ವೀಜಬಹುಳವು
ತಿರೆಯುಲಾ ಮಾದೇಶಯಾತ್ರಾಕಾಲವೊದಗಿದುದು
ಪರಿಸೆ ಹೊರಟಿತು ಮಾರ್ಗಮಾರ್ಗದಿ
ಕರೆದನಂದಾ ಸಿದ್ಧಲಿಂಗನು
ಚರರನತಿಮುದದಿಂದ ಕೇಳಾ ಪಯಣಕನುವಾಗಿ 	೨೬

ನೆರೆದ ಬಿರುದಾವಳಿ ಸಮೇತದಿ
ಚರವರರನೊಡಗೂಡಿ ಗುರುವರ
ನಿರದೆ ತಾ ಪೊರಮಟ್ಟು ಮಾದೇಶ್ವರನ ಗಿರಿಯೆಡೆಗೆ
ಪರಮಭಕ್ತರು ಕೂಡಿ ಬಂದರು
ಚರರು ನಡೆದರು ಬಳಸುತಾತನ
ಗುರುವರಾಗ್ರಣಿ ಬಂದನಂದಾ ಭಕ್ತಿವೈಭವದಿ 	೨೭

ನಿಂದುದತಿಶಯದಿಂದ ಭಕ್ತರ
ಸಂದಣಿಯು ನೆಲೆನೆಲೆಯ ಮಾಡುತ
ಚಂದದಿಂದಲಿ ಪೂಜೆಯನು ತಾನೆಸಗಿ ಭಕ್ತಿಯಲಿ
ಅಂದು ಶಿವಪದಭಕ್ತಿಯುಕ್ತರು
ಬಂದು ವಿನಮಿಸಿ ಚರಗೆ ಬಹುವಿಧ
ದಿಂದ ಕೀರ್ತಿಸಿ ಪಾದಪೂಜೆಯ ಮಾಡಿದರು ಮುದದಿ 	೨೮

ಎರಡುಕಟ್ಟೆಯ ವರವಿಚಾರವ
ತೆರದೆಯುದ ಸರಿಪಡಿಸಿ ಮಾದೇ
ಶ್ವರನ ಸೇವಾಲೋಲನೆನಿಸುತ ಸಂಭ್ರಮದಲೆಸೆದು
ಶರಣಜನಗೋಷ್ಠಿಯನು ಬೆರಸುತ
ಲೊರೆವ ಲಿಂಗಾಂಗೈಕ್ಯಮಾರ್ಗವ
ನಿರದೆ ಪಿಂದಿರುಗಿದನು ಸುತ್ತೂರೀಶ ನತರೀಶ 	೨೯

ಪರಮಭಕ್ತರ ಪೊರೆದು ತಾನಾ
ವರಣಪುರಪತಿ ಸಿದ್ಧಲಿಂಗನು
ಹರಿಸದಿಂದಲ್ಲಿ ಮಠದ ಧರ್ಮವ ಮುಂದುವರಿಸುತಲಿ
ಹರಮತದಲನ್ಯಾಯಕಾರ್ಯಗ
ಳಿರಲು ಸರಿಪಡಿಸುತ್ತ ನಿತ್ಯದಿ
ಮೆರೆದುಬಂದನು ಭಕ್ತವತ್ಸಲನಾಗ ನಿಜಮಠಕೆ ೩೦

ಗುರುವರಗೆ ಬಿನ್ನಹದ ಪತ್ರವ
ಬರೆದುಕೊಳಲಾ ಮಲೆಯ ದೇಶದ
ಶರಣರತಿಮುದದಿಂದ ಬರುವುದಕಿತ್ತು ಭರವಸವ
ತೆರಳಿದನು ಗುರುನಾಥನಾಗಳೆ
ಪರಿಕರವನೊಡಗೊಂಡು ಮುದದಲಿ
ಬರುತಲಿರ್ದನು ಯಾನಗತಿಯಲಿ ವನದ ಮಧ್ಯದೊಳು ೩೧

ಆಲ ಬೇಲವು ಮಾವು ಮತ್ತಿಯು
ಸಾಲವರುಳಿಯು ಹಲಸು ಹೂಣಸೆಯು
ಜಾಲ ನಂದಿಯು ತೇಗ ಸುರಗಿಯು ಬೇವು ಗೋಣಿಗಳು
ಸಾಲುಸಾಲಲಿ ಗಂಧಚಂದನ
ಕಾಲತರುಗಳು ಹೊನ್ನೆಮರಗಳು
ಬಾಲವಲ್ಲಿಯು ಪುಷ್ಪಫಲದಲಿ ಕೂಡಿ ತೋರಿದವು ೩೨

ಮುಗಿಲುಗಳು ಮುಸಗಿದವು ದೆಸೆಯೊಳು
ಮಿಗಲು ಮಿಂಚಿನಕಾಂತಿ ಸಿಡಿಲದು
ಮೊಗಸಿತಂದಾ ಘೋರವೃಷ್ಟಿಯು ಭಯವನೊದವಿಸುತ
ಅಗಣಿತದ ಜಲರಾಶಿ ಪರಿದುದು
ಖಗಮೃಗಂಗಳು ನೊಂದು ಚೀರಲು
ಮೃಗಧರನ ನೆನೆಯುತ್ತ ಗುರುವರನಿರ್ದ ಗವಿಯೊಳಗೆ ೩೩

ಲಿಂಗಸೇಕದ ಸಮಯವೊದಗ
ಲ್ಕಂಗಜಾಂತಕರೂಪ ತಾ ನೆರೆ
ದಿಂಗಿತದಿ ಪರಮೇಶಸೇವಾಚಿತ್ತನಾಗುತಲಿ
ತುಂಗತರದಾ ಕ್ಷೀರವಿರದಿರೆ
ಮಂಗಳದ ಪಥವಲ್ಲವೆನುತಲಿ
ಭಂಗಬಂದುದೆ ಪೂಜೆಗೆನುತತಿಚಿಂತೆಗೊಳಗಾದ ೩೪

ಅನಿತರೊಳು ತುರು ಕರುಗಳೊಡನಿಹ
ಮನುಜನೊರ್ವನು ಪೋಗುತಿರುತಿರೆ
ಮನದ ಹರಿಷದೆ ಕಂಡು ಕರೆದರು ಗುರುವಿನನುಚರರು
ವಿನಯದಲಿ ತಿಳುಹಿದರು ಕಜ್ಜವ
ನನುನಯದೆ ಕರೆದಿತ್ತ ಪಾಲನು
ಘನಮಹಿಮಗರುಹುತ್ತ ಕೊಟ್ಟರು ಧನವನಾತನಿಗೆ ೩೫

ಗುರುವಿನುರೂತರ ಮಹಿಮೆಯನು ಕೇ
ಳಿರದೆ ಕೊಂಡಾಡುತಲಿ ಭಕ್ತರು
ಹರಿಸವೆರಸುತಲಿತ್ತರಂದಾ ಪಾಲ ಗುರುವರಗೆ
ಪರಮತೋಷದಲಿಷ್ಟಲಿಂಗ
ಕ್ಕೆರೆಯುತೊಲಿದಾ ಕ್ಷೀರವನು ತಾ
ಪರಮಶಿವನನು ಹಾಡಿ ಹರಸಿದನಂದು ಗುರುನಾಥ ೩೬

ಕೊಡಗು ಮಲೆಯಾಳಗಳ ಚರಿಸುತ
ಲೊಡನೆ ತಾವೈತಂದ ಭಕ್ತರ
ಸಡಗರದಿ ಹರಸುತ್ತ ಧರ್ಮದ ಗತಿಯ ತಿಳುಹುತಲಿ
ನಡೆನುಡಿಯ ಮರ್ಮವನು ಬೋಧಿಸು
ತೆಡೆಬಿಡದೆಯುದಸೊರೆದು ತತ್ತ್ವವ
ಮೃಡನರೂಪಿನ ಯತಿಯು ಮಠಕೈತಂದನೊಲವಿನಲಿ ೩೭

ವೀರಶೈವರ ವಟುಗಳಿಗೆ ಮತ
ಸಾರಸಮ್ಮತಿಯಿಂದ ದೀಕ್ಷೆಯ
ಧೀರಮತಿ ತಾನೆಸಗಿ ತತ್ತ್ವವನಂದು ಬೋಧಿಸುತೆ
ಪಾರಮಾರ್ಥಿಕರನ್ನು ಮಾಡಿ ವಿ
ಚಾರವಲ್ಲವನರುಪಿ ಬಹು ವಿ
ಸ್ತಾರಗೊಳಿಸಿದ ಶಿವನ ಮತವನು ಸಿದ್ಧಲಿಂಗಾರ್ಯ ೩೮

ವಿದಿತ ಸಿದ್ಧರಹಳ್ಳಿಯೊಳಗುರೆ
ಪದಪಿನಿಂದಿಹ ಗವಿಯ ಮಠದಲಿ
ಮುದದಲಾ ಶಿವರುದ್ರದೇಶಿಕ ಮತವನನುಸರಿಸಿ
ಒದಗಿದಾರಾಧನೆಯ ಕಾರ್ಯವ
ನದನು ಸಾಹಸದಿಂದ ನಡೆಸಿದ
ಸದಮಲಾಂಗನು ಸಿದ್ಧಲಿಂಗನು ಯತಿಜನಾಗ್ರಣಿಯು ೩೯

ಆಗಜೆಯರಸನ ಪಾದಭಕ್ತನು
ಮಿಗಿಲೆನಿಪ ಕೃಷ್ಣೇಂದ್ರಭೂಪನ
ಸೊಗಸಿನಾಸ್ಥಾನದಲಿ ರಾಜಿಸುತಿರ್ದ ವಿಬುಧೇಂದ್ರ
ಬಗೆಬಗೆಯ ಕವಿತಾತಿರೇಕದಿ
ಜಗದೊಳಗೆ ಜಸವಾಂತು ಮೆರೆದನು
ನಗಧರೆಯು ನಂಜುಂಡನಾಮನು ಶೈವತತ್ಪರನು ೪೦

ಪರಮಗುಣಮಣಿಹಾರನೀತನು
ಗುರುಪದಾಂಬುಜಭಕ್ತನೀತನು
ಪರಮಷಟ್ಸ್ಥಲಮಾರ್ಗವನಿತನು ತಿಳಿದ ಮಾನಿತನು
ಜರಿಯುತರಿಷಡ್ವರ್ಗವೆಲ್ಲವ
ಮೆರೆದು ತತ್ತ್ವಜ್ಞಾನಿಯೆನಿಸುತ
ತಿರೆಯೊಳಗೆ ಭಾಷಾದ್ವಯವ ಕವನದ ಬಲದೊಳೆಸೆದ ೪೧

ಅರಸುಗಳಿಗತಿವೀರರಸ ವಿಬು
ಧರ ಚಯಕೆ ಶೃಂಗಾರರಸ ನೆರೆ
ಪರಿಕಿಪಂಗದ್ಭುತವರಸ ಕರುಣಾರಸವು ಗುಣಿಗೆ
ಶರಣರಿಗೆ ಸದ್ಭಕ್ತಿರಸವಾ
ದುರಿತಮತಿಗಾ ಭೀತಿರಸವೆಂ
ದಿರದೆ ಮೆರೆದುದು ಕವಿತೆಯಾ ನಂಜುಂಡಶಾಸ್ತ್ರಿಯಲಿ ೪೨

ಈತ ಲೋಕಖ್ಯಾತಮಾದ ಸ
ನಾತನದ ಸುತ್ತೂರಪೀಠ ಪು
ನೀತ ಗುರುವರ ಸಿದ್ಧಲಿಂಗನ ಪಾದಪಂಕಜದ
ಸಾತಿಶಯಕರುಣವನು ತಾ ಪಡೆ
ದಾತನೆನಿಸುತ ಭವನನುಜ್ಞಾ
ರೀತಿಯಿಂದಾ ಸ್ತೋತ್ರರತ್ನಾಕರವ ವಿರಚಿಸಿದ ೪೩

ದುರಿತಸಂತತಿ ದೂರಕರಣನು
ಪರಮಪರಶಿವಶರಣಭಕ್ತನು
ಹರಣವನು ತೆತ್ತಾತನೀತನು ಲಿಂಗಜಂಗಮಕೆ
ವರಬುಧಾಗ್ರಣಿಯೆನಿಸಿ ಮೆರೆದನು
ಸರಸಗುಣಮಣಿಮಾಲನೆನಿಸುತ
ಮೆರೆದನಂದಾ ಜಸದಿ ನಂಜುಂಡಾಖ್ಯ ಕವಿತಿಲಕ ೪೪

ಕರೆಯಿಸಿದ ವಿಬುಧರನು ಗುರುವತ
ನೆರೆಯಿಸಿದನಾ ಸಭೆಯ ಮುದದಲಿ
ಪರಮತತ್ತ್ವವಿಚಾರವೆಸಗಿಸುತಿತ್ತು ಮನ್ನಣೆಯ
ಹರಿಸದಿಂದವರೊಡನೆ ತಾ ಸಂ
ಚರಿಸುತಂದಲ್ಲಲ್ಲಿ ಬೋಧಿಸಿ
ಮೆರೆಯಿಸಿದ ಶಿವಮತವನಂತಾಚಾರ್ಯನೊಲವಿನಲಿ ೪೫

ವರಮಹಾಂತನ ಯೋಗಭವನದ
ಸರಿಸದಲಿ ರಾರಾಜಿಸುತ ನೆರೆ
ಮೆರೆದು ಕಂಗೊಳಿಸಿರ್ದ ಗುರುವಿನ ಗದ್ದುಗೆಯ ಬಳಿಯೆ
ಶರಣರಾರಾಧನೆಯನೆಸಗಲು
ಚರವರನು ನೆನೆದಂದೆ ಪರಮಾ
ದರದಲಾ ಶ್ರೀಮುಖವ ಕಳುಹಿದ ಭಕ್ತಸಂಚಯಕೆ ೪೬

ಬಂದುದಂದಾ ಶಿಷ್ಯಮಂಡಲಿ
ವಂದಿಸುತ ಗುರುಸಿದ್ಧಲಿಂಗನ
ಪೊಂದುತ್ತಲಿ ವರಪಾಕಶಾಲೆಯ ಭಕ್ಷ್ಯಭೋಜ್ಯವನು
ಚಂದದಿಂ ಪಚಿಸುತ್ತ ರಾಶಿಯ
ನಂದು ಮಾಡಿದರೊಲ್ದು ಭರದಲಿ
ನಿಂದು ನೋಡಲುಬಹುದೆ ಗುರುವಿನ ದಾನವೈಭವವ ೪೭

ಇರದೆ ಬಯಲಲಿ ಪಾಕಗೆಯ್ದಾ
ದರದೆ ಭಕ್ಷ್ಯಪದಾರ್ಥವೆಲ್ಲವ
ಸುರಿದರನ್ನದರಾಶಿಯನು ಕಿರಿವೆಟ್ಟದಂದದಲಿ
ಪರಿಯ ಬಣ್ಣಿಸಲಾರು ಧರಣಿಯೊ
ಳಿರುವರೆನುತಾ ಶರಣಸಂತತಿ
ಶಿರವ ತೂಗಿತು ಪರಮಗುರುವಿನ ಮಹಿಮೆಯಿಂದೆನುತ ೪೮

ಅನಿತರೊಳು ದೆಸೆದೆಸೆಗೆ ಪಸರಿಸಿ
ಘನಚಯಾವಳಿ ಮುಚ್ಚಿಕೊಂಡಿತು
ದಿನದವನು ಕಯುಡೊಳಗೆ ಹಬ್ಬಿತು ಗಗನಮುಖದಿಂದ
ಮಿನುಗುತಿರ್ದುದು ಮಿಂಚು ಭರದೊಳ
ಗನುಪಮಿತ ಬಹುವೃಷ್ಟಿ ಸುರಿದುದು
ಜನರ ಸಂದಣಿ ಮುಳುಗಿತಾಗಳು ಭಯದ ಕಡಲೊಳಗೆ ೪೯

ಗುರುಕುಲಾಗ್ರಣಿ ಸಿದ್ಧಲಿಂಗನು
ನೆರೆದು ಬರುತಿಹ ಮೇಘಪಂತಿಯು
ನರಿದು ಪರಶಿವಪಾದಪಂಕಜದಲ್ಲಿ ಮನವಿಡುತ
ಪರಮಗುರು ಶಿವರಾತ್ರಿದೇವನ
ಚರಣಸೇವೆಯನೆಸಗಿ ಭರದೊಳು
ನೆರೆದಿರುವ ವರಭಕ್ತರಿದಿರೊಳು ಬೇಡಿದನು ಶುಭವ ೫೦

ಬಿರುಸಿನಲಿ ಬಲುಗಾಳಿ ಬೀಸಿತು
ತರುಚಯಂಗಳ ಮುರಿದುಬಿಟ್ಟಿತು
ಹರಿಸಿತಂಡಾ ಮೇಘಪಂತಿಯು ಗಗನಮಾರ್ಗದಲಿ
ಶರಣರೆಲ್ಲರು ಕೂಡಿ ನಲಿಯುತ
ಕರಗಳನು ಪೊಯ್ಪೊಯ್ದು ನಗುತಲಿ
ಹರಿಸಗಡಲೊಳು ಮುಳುಗುತೆದ್ದರು ಗುರುವ ಕೀರ್ತಿಸುತ ೫೧

ಅಂದು ಗುರುವಿನ ಘನವ ಪೊಗಳಿಯು
ಮಂದಗುಣಿ ಯತಿಸಿದ್ಧಲಿಂಗನು
ಚಂದದಿಂದಲಿ ಗಣದ ತೃಪ್ತಿಯ ಪೂರ್ತಿಗೊಳಿಸುತಲಿ
ಬಂದು ವಂದಿಸುತಿರುವ ಭಕ್ತರ
ಗೊಂದಣಿಯ ಕಳುಹುತ್ತ ನಿತ್ಯಾ
ನಂದಿ ಶರಣರವೆರಸಿ ಬಂದನು ತನ್ನ ಮಠದೆಡೆಗೆ ೫೨

ಶರಣಸಂಕುಲವಿನುತನೆನುತಲಿ
ಮೆರೆದ ಸದ್ಗುಣಿ ಕಂಬಳೇಶನು
ಪರಮಹರ್ಷದಿ ಬಂದನಂದಾವರಣಪುರಮಠಕೆ
ಮೆರೆವ ಗುರುವರ ಸಿದ್ಧಲಿಂಗನ
ಚರಣಕಭಿವಂದಿಸುತ ನಿಂದನು
ಹರನ ಪೂಜಾಕರ್ಮವೆಸಗುತ ಯೋಗಮಂದಿರದಿ ೫೩

ಪರಮನಿರ್ಮಲವಾದ ತಾಣವ
ನರಿದು ಪೇಳುವುದೆನುತ ಕೇಳಲು
ವರದ ಗುರುವರಸಿದ್ಧಲಿಂಗನು ಯೋಚಿಸುತ ಮನದಿ
ಮೆರೆವ ಮಲ್ಲನಮೂಲೆಯೊಳಗಿಹ
ಸುರುಚಿಮಠದೊಳಗಿರುವುದೆಂದಂ
ದೊರೆದು ಕಳುಹಿದ ಕಂಬಳೇಶನನಾಗ ಮುದದಿಂದ ೫೪

ಅರಿಗಳಾರನು ತರಿದು ಕೆಡಹುತ
ದುರಿತ ತರುವನು ಮುರಿದು ಬೀಳಿಸಿ
ಹರನ ಮತವನು ಜಗದಿ ಪಸರಿಸಿ ಮೆರೆದ ಗುರುವರನ
ಕರೆಯಿಸುತ ವರ ಕಂಬಳೇಶನು
ಶರಣಗಣ ಸಂತೃಪ್ತಿಮಾಡಿಸಿ
ಪರಮಹರ್ಷದಿ ಕಳುಹಿಕೊಟ್ಟನು ಚಕ್ರಪುರಮಠಕೆ ೫೫

ಧರಣಿ ಗಜ ನಭ ವೇದಶಕೆಯಿಂ
ಬೆರೆದು ತೋರುವ ಚಿತ್ರಭಾನುವು
ಮೆರೆಯಲಾ ಶಿವರಾತ್ರಿಮೂರ್ತಿಗೆ ಪಟ್ಟಗಟ್ಟುತಲಿ
ಶರಣಸದ್ಗೋಷ್ಠಿಯನು ಬೆರಸುತ
ಹರಕಥಾಲಾಪನೆಯ ನಡೆಸುತ
ಕರೆಯಿಸುತಲಾ ವಿಬುಧರನು ಮನ್ನಣೆಯನೆಸಗುತಲಿ ೫೬

ಒಂದುದಿನ ಶಿವಯೋಗಮಾರ್ಗದೊ
ಳಿಂದುಧರಸಮರೂಪನೀತನು
ಚಂದದಿಂದರಿಯುತ್ತ ತನ್ನಯ ಮೋಕ್ಷಸಂಗತಿಯ
ಕುಂದುಬಗೆಯನು ತೋರೆಪು ಹರಿಸದೆ
ಮುಂದುವರಿಸುತ ಶಿವನ ಧರ್ಮವ
ನಂದು ಸಜ್ಜನವೃಂದವೆರಸುತ ಮೆರೆದನಾ ಯತಿಯು ೫೭

ಕರೆಯಿಸುತಲವ ಮಠಮಠಂಗಳೆ
ಗುರುವರರ ಸದ್ಭಕ್ತನಿಚಯವ
ತರದಿ ಗಣಕುಲ ತೃಪ್ತಿಯೆಸಗುತ ತತ್ತ್ವಚಿಂತೆಯಲಿ
ನೆರೆದು ಸತ್ಕಥೆಯನ್ನು ನಡೆಯಿಸು
ತಿರುತ ಶಿವಲಿಂಗೈಕ್ಯನಾದನು
ಹರನ ಗಣವರ ಸಿದ್ಧಲಿಂಗಯತೀಂದ್ರ ಗುಣಸಾಂದ್ರ ೫೮

ಸಂದುಪೋದುದೆ ಜಗದ ಬೆಳಕದು
ಬಂದುದೇ ಬಗೆಯೊಳಗೆ ಕತ್ತಲೆ
ಇಂದು ಭಕ್ತರ ಮುಕ್ತಿಕೋಶವು ಸೂರೆಯಾದುದಲಾ
ತಂದುದೇ ದುರ್ವಿಧಿಯು ಚಿಂತೆಯ
ನೆಂದು ಶರಣರವೃಂದ ದುಃಖಿಸಿ
ಬೆಂದುದಂದಾ ಮಠದೊಳಾಗಲು ಮುಂದುಗಾಣದೆಯೆ ೫೯

ಒತ್ತಿಬರುತಲಿ ಸಕಲಕುಲಜರು
ಮುತ್ತಿದರು ವರಚಕ್ರಪುರವದ
ನೆತ್ತನೋಡಲು ವಾದ್ಯವೈಭವ ಮೀರಿ ಮೊಳೆಯುತಿರೆ
ತೆತ್ತಿಗರು ಸೆರೆಯುತ್ತ ಹರಿಸದೊ
ಳುತ್ತರದ ಕರ್ಮವನು ಮುಗಿಸಿದ
ರುತ್ತಮೋತ್ತಮ ಗುರುವ ಭಜಿಸುತ ಸಂಭ್ರಮೋತ್ಸವದಿ ೬೦

ಮಾನವರಸುರೆ ಪೊರೆದು ಜಗದೊಳು
ದೀನಭಾವದಲಿರುವ ಬಕುತರ
ಹಾನಿಹರಿಸುತೆ ಶುಭವನೀಯುವ ಸರ್ವಮಂಗಳೆಯೆ
ಮಾನಧನರಿಗೆ ಮುಕ್ತಿಪದವಿಯ
ಮಾನಿತರಿಗತಿಹಿತವ ಬಯಸುವ
ಮೇನಕಾತ್ಮಜೆ ಸಲಹು ಚಾಮುಂಡಾಂಬೆ ಜಗದಂಬೆ ೬೧

# ಶಿವರಾತ್ರಿದೇಶಿಕೇಂದ್ರಕಥನಂ

ಶಾಂತ ಶಿವರಾತ್ರೀಶ ದುರಿತ
ಧ್ವಾಂತಭಾಸ್ಕರ ಪರಮಮುಕ್ತಿಯ
ಕಾಂತರೂಪನು ಮೆರೆದನಾ ಸುತ್ತೂರ ಪೀಠದಲಿ

ಶ್ರೀನಿರಂಜನ ಪರಮಪಾವನ
ಮಾನಸೋದ್ಭವದಹನ ವಿಬುಧವಿ
ತಾನವಂದಿತಚರಣಸಾರಸ ಸರ್ವಲೋಕೇಶ
ಮೌನಿವೃಂದಾವರಣ ವರಸು
ಜ್ಞಾನಮಂದಿರ ಪಾವಕಾಂಬಕ
ಸಾನುರಾಗದಿ ಶುಭವ ಕುಡು ನೀಂ ಸೋಮನಾಥೇಶ ೧

ಪರಮಚರಿತನ ಪಾಪರಹಿತನ
ಶರಣಜನಮಂದಾರನೆನಿಪನ
ಗುರುವರನ ಶಿವರಾತ್ರಿದೇವನ ದಿವ್ಯಕಥನವನು
ಹರಿಸದಲಿ ಮನವೊಲಿದು ಲಾಲಿಸು
ದೊರೆಯುವುದು ಗತಿ ಸಿದ್ಧಲಿಂಗನೆ
ಸರಸದಿಂದಾನೊರೆವೆನೆಂದನಮಂದ ಗುರುನಾಥ ೨

ಪರಿಲಸಿತ ಗುರುಸಿದ್ಧಲಿಂಗನು
ಹರನಲೈಕ್ಯವನೊಂದಲತ್ತಲು
ಚರವರನು ತಾನಿತ್ತ ಶಿವರಾತ್ರೀಶನನವರತ
ಪರಮಪಂಚಾಕ್ಷರಿಯ ಮಹಿಮೆಯ
ನೊರೆಯುತಲಿ ಭಕ್ತರನು ಮುದದಲಿ
ಪೊರೆಯುತಿರ್ದನಪಾರಮಹಿಮಾಪೂರ ಗುಣಸಾರ ೩

ರೋಗವಡಸಿದ ಮನುಜರಿಗೆ ಭವ
ರೋಗವೈದ್ಯನ ಪೆಸರಿನಲಿ ತಾ
ನಾಗ ಭಸಿತವನಿತ್ತು ಸಲಹುತಲವರನತಿಶಯದಿ
ರಾಗದಿಂದಲಿ ಹರಸಿ ಕಳುಹುವ
ನಾಗುತೆಸೆಯುತಲವನಿಯಲಿ ವರ
ನಾಗಧರನಾರು ಸೇವೆಯಿಂದೆಸೆದಿರ್ದ ಗುರುನಾಥ ೪

ಊರಿನಲಿ ಬಗೆಬಗೆಯ ಕಲಹವಿ
ಚಾರವೈತರೆ ಬಳಿಗೆ ಶರಧಿಗ
ಭೀರನೆಲ್ಲರ ಕರೆಯಿಸುತೆ ಗುರುನಾಥ ಮಠದೆಡೆಗೆ
ಸಾರತರನೀತಿಯಲಿ ಸಹಜದ
ದಾರಿಗೆಳೆಯಲು ನೆನೆದು ಕರುಣಾ
ಪೂರ ಬೋಧಿಸಲೆಣಿಸಿದನು ಭಕ್ತೇಷ್ಟದಾಯಕನು ೫

ಹಿತವು ಸಿರಿಯನು ತಂದುಕೊಡುವುದು
ಹಿತವು ದುರಿತವ ದೂರಗೊಳಿಪುದು
ಹಿತವು ಜಸವನು ಕೊಡುತ ಪೊರೆವುದು ಸಕಲಮಾನವರ
ಹಿತದಿ ನರಪರು ಮೆಚ್ಚುತಿರುವರು
ಹಿತವೆ ಮಾರ್ಗವು ನಿಮ್ಮ ಮುಕ್ತಿಗೆ
ಹಿತವೆ ನಿಮ್ಮಯ ಜೀವದಾಶ್ರಯವೆಂದ ಗುರುನಾಥ ೬

ಒಡೆದು ಪೋಗಲು ಮೈತ್ರಿ ಜನರೊಳು
ತೊಡಕು ಬರುವುದು ಬಾಳ್ವ ಜನರಿಗೆ
ಕೆಡುವುದಲ್ಲವೆ ಶಾಂತಿ ಮನದೊಳು ದೂರ ಯೋಚಿಸಲು
ಬಿಡುವುದಾಗಳು ರಾಗಕೋಪವ
ನಡೆದು ಬದುಕುತ ಸೊಗದೊಳಿರುವುದು
ನುಡಿದು ಸಕಲರ ಹರ್ಷಗೊಳಿಪುದು ಕೇಳಿರೆಂದೊರೆದ ೭

ಕೊನೆಯು ಮುಟ್ಟದ ಕೆಟ್ಟ ಕಜ್ಜವ
ಮನಕೆ ಹರಿಸವ ಕೊಡದ ಮಾತನು
ಘನವ ಕೆಡಿಸುವ ಜನರ ಸಂಗವ ತೊರೆಯಬೇಕೆಂದ
ಕನಸಿನಂದದ ಜಗದ ಸಿರಿಯನು
ವನಿತೆಯರ ವ್ಯೆಯಾರದಾಸೆಯ
ಕನವರಿಸಿ ಕೆಡಬೇಡಿರೆನುತಲಿ ಪೇಳಿದನು ಗುರುವು ೮

ಸಿರಿಯೊಳಗೆ ಪೊರೆಯುವುದು ಸುಜನರ
ಬರಿಸುತಲಿ ಬುಧರನ್ನು ಕೊಡುವುದು
ಸರಿಸದಲಿ ಬಂಧುಗಳ ಕಾಯ್ವುದು ಸೊಗವ ಬದುಸುತಲಿ
ಬರಲು ಚಿಂತೆಯು ಧೈರ್ಯಗೊಳುವುದು
ತೊರೆದು ಬಿಡುವುದು ಪಾಪಕಾರ್ಯವ
ನಿರದೆ ಶಂಭುವ ಭಜಿಸುತಿರುವುದು ಕೇಳಿರೆಂದೊರೆದ ೯

ಅಂದು ಪುರಜನವೃಂದವನು ತಾ
ನೊಂದುಗೂಡಿಸಿ ಹರಸುತದನಾ
ನಂದದಿಂ ಕಳುಪುತ್ತ ಲಿಂಗಾನಂದವೈಭವದಿ
ಚಂದದಿಂದಿರುತಿರ್ದು ವಿದ್ಯಾ
ಮಂದಿರನ ವರಕಾರ್ಯವಿಭುವನ
ಮಂದಗುಣೆಯನು ಕರೆಯಿಸಿದ ಶಿವರಾತ್ರಿಗುರುನಾಥ ೧೦

ಬಂದ ಗುರುವನು ಭಯದ ಭಕ್ತಿಯೊ
ಳೊಂದಿಸುತ ಕುಶಲವನು ಕೇಳಿದ
ನಂದೊಲಿದು ತೋರುತಲಿ ವಟುವಿನ ಜನ್ಮಪತ್ರಿಕೆಯ
ಇಂದು ನೀನದ ನೋಡಿ ತಿಳಿಯುತ
ಸಂದೆಗವ ಬಿಡಿಸೆಂದು ಪೇಳುತ
ಮುಂದೆ ನಡೆಯುವ ಫಲವನರುಹೆಂದೊರೆದ ಗುರುನಾಥ ೧೧

ನಿರುಕಿಸುತ ಜಾತಕವನಾ ಪ್ರಭು
ವರನು ನುಡಿದನು ಮುಂದೆ ಗುರುತೆಗೆ
ಬರುವನೀತನು ಧರ್ಮಮಾರ್ಗವನಿರದೆಯನುಸರಿಸಿ
ಹರಮತದ ತತ್ತ್ವವನು ಜಗದೊಳು
ಹರಡುತಲಿ ಜಸದಿಂದ ಜನರನು
ಪೊರೆಯುವನು ನಡೆನುಡಿಯ ಬೋಧಿಸಿ ಮೆರೆವನೆಂದೆನಲು ೧೨

ಅಂದು ಯೋಚಿಸಿ ಶುಭದಿನವನಾ
ನಂದದಲಿ ಮಠಮಠಕೆ ಪತ್ರವ
ಚಂದದಿಂ ಕಳುಪುತ್ತಲಾದರದಿಂದ ಮಂಟಪವ
ಅಂದದಿಂದೆಸಗಿಸುತ ವರಗುಣ
ಮಂದಿರನು ಶಿವರಾತ್ರಿದೇವನ
ಮಂದಮತಿ ಕರೆಯಿಸಿದ ದೀಕ್ಷೆಗೆ ವಟುನಿಕಾಯವನು ೧೩

ಬಂದುದಲ್ಲಿಗೆ ಜಂಗಮಾಗ್ರಣಿ
ವೃಂದ ಪರಿಕರವೆರಸಿ ಮಹದಾ
ನಂದದಿಂದತಿಶಯದ ವಾದ್ಯನಿನಾದ ಮೊರೆಯುತಿರೆ
ಅಂದು ಪುರಪುರದಿಂದ ಭಕ್ತರ
ಸಂದಣಿಯು ನಡೆತಂದುದಾಗಳೆ
ಚಂದದಿಂ ಫಲಪುಷ್ಪಸಂಚಯದಿಂದ ವಂದಿಸಿತು ೧೪

ಬಾ ಮದೀಯ ಮನಃ ಪ್ರಸಾದನೆ
ಬಾ ಮಹಾಗುರು ಸಿದ್ಧಲಿಂಗನೆ
ಪ್ರೇಮದಾಯಕ ದಾನಧರ್ಮೋಲ್ಲಾಸಮಾನಸನೆ
ಸೋಮನಿಂದಲಿ ಗುರುವರೇಣ್ಯನ
ನಾಮದಿಂದಸೆದಿರುವೆ ಸುಜನ
ಸ್ತೋಮವಂದಿತ ಬರುವುದೆನುತಲಿ ಕರೆದ ಗುರುನಾಥ ೧೫

ಸರಸಿಜಾರಿ ಗಜಾಕ್ಷಿ ಗಗನದ
ಲಿರುವ ಶಕೆಯು ವಿಳಂಬಿವತ್ಸರ
ನೆರೆಯಲಾ ಸಜ್ಯೇಷ್ಠಶುದ್ಧದ ಷಷ್ಠಿ ಸದ್ದಿನದಿ
ಮೆರೆಯಲಾ ಗುರುವಾರ ದೀಕ್ಷೆಯ
ನಿರದೆ ನೆರವೇರಿಸುತ ಬೋಧೆಯ
ತಠದೊಳೆಸಗುತಲೆಮಗೆ ಶಿವರಾತ್ರೀಶನೆಸೆದಿರ್ದ ೧೬

ನಿರುಕಿಸುತಲವನೆನ್ನ ಕಾರ್ಯದ
ಗುರುವೆನಿಸಿದಾ ಪ್ರಭುವರನು ತಾ
ನಿರದೆ ಕರೆದೊಯ್ದುತುಲವಿದ್ಯೆಯ ಕಲಿಸುತೊಲವಿನಲಿ
ಕಿರಿಯತನದೊಳಗರುಹಕೊಟ್ಟೆನು
ಕಿರಿಯಜಾನದ ಮರ್ಮವರಿಸುತ
ಕಿರಿದು ಹಿರಿದಿನ ಭೇದವೆರಡನು ತಿಳಿಸಿ ಬಿಡಿಸಿದನು ೧೭

ಅವನಲಾ ವ್ಯಾಕರಣಪಂಡಿತ
ನವನಲಾ ಮೀಮಾಂಸಿ ತಾರ್ಕಿಕ
ನವನಲಾ ಲಿಂಗಾಂಗಸಮರಸಭಾವಕೋವಿದನು
ಅವನಲಾ ಸದ್ಭಕ್ತಲೋಕವ
ನವನಿಯಲಿ ಪರಿಪೋಷಿಸುತ್ತಿಹ
ನವನಲಾ ಷಟ್ಸ್ಥಲದ ತತ್ತ್ವವನರಿದ ಸದ್ಗುರುವು ೧೮

ಗುರುವರಗೆ ಶಿವರಾತ್ರಿದೇವಗೆ
ಪರಮವಿರತಿಯಭಾವವೊದಗಲು
ಕರೆಯಿಸಿದ ಗುರುಚರರ ವಿದ್ವಜ್ಜನರನಂದಿನಲಿ
ನೆರೆವ ಸಭೆಯೊಳು ಪಟ್ಟಗಟ್ಟುತ
ಲೊರೆದು ತತ್ತ್ವದ ಮರ್ಮವೆಲ್ಲವ
ಮೆರೆವನಂದಾದರದಿ ಸಂತರ್ಪಣದ ವೈಭವದಿ ೧೯

ಇರುತಿರುತ ತರದಿಂದ ಕಾಲವು
ಸರಿದುಪೋಗಲು ಪೂರ್ವಪದ್ಧತಿ
ಯರಿದು ದೀಕ್ಷೆಯಮಾಡಿ ವಿದ್ಯಾಭ್ಯಾಸವೆಸಗಿಸುತ
ಮೆರೆವ ತತ್ತ್ವಜ್ಞಾನವರಿಸುತ
ದುರಿತಪುಣ್ಯವ ತಿಳಿಸಿ ಸಲಹಿದ
ವರವಟುವು ತಾನೆಸೆದನಾ ಶಿವರಾತ್ರಿರಾಜೇಂದ್ರ ೨೦

ಸೋಮ ಗಜ ಯುಗ ನಿಧಿಯ ಶಕೆಯಲಿ
ನೇಮದಿಂದಾ ಪ್ರಭವ ಪರತರ
ನಾಮಸಂವತ್ಸರದ ಫಾಲ್ಗುಣ ಶುದ್ಧ ಬಿದಿಗೆಯಲಿ
ರಾಮಣೀಯಕ ಶುಕ್ರವಾರದೊ
ಳಾಮನೋಜ್ಞಗೆ ಪಟ್ಟಗಟ್ಟಿದೆ
ವೀಮಹೀಯೊಳು ಮೆರೆವನಾ ಶಿವರಾತ್ರಿರಾಜೇಂದ್ರ ೨೧

ಈ ತರದಲಿಪ್ಪತ್ತುಮೂವರ
ಸಾತಿಶಯ ಗುರುವರರ ಚರಿತೆಯ
ರೀತಿಯಿಂದಲಿ ಪೇಳಿಮುಗಿಸಿದೆವಿಂತು ಮುದದಿಂದ
ಭೂತಲದಿ ನೀನೀಗ ಜನ್ಮವ
ಪೂತಗೊಳಿಸಿದ ಪುಣ್ಯಪುರುಷನು
ಮಾತಿನಿಂದೇನಹುದು ನೀನೇ ಮುಕ್ತನಾಗಿರುವೆ ೨೨

ನಿನ್ನ ತಂದೆಯು ಮಾನ್ಯನಾದನು
ನಿನ್ನ ಜನನಿಯು ಧನ್ಯಳಾದಳು
ನಿನ್ನ ಬಂಧುಗಳವರು ಬಾಂಧವರೆಲ್ಲ ಬದುಕಿದರು
ನಿನ್ನ ಕಾರ್ಯಕೆ ವಿಘ್ನ ತೊಲಗಲಿ
ನಿನ್ನ ಬಯಕೆಯು ಸಫಲವಾಗಲಿ
ನಿನ್ನ ಜಸವದು ನೆಲಸಿ ಮೆರೆಯಲಿ ಕಾಲಮೂರರಲಿ ೨೩

ಪರಮ ರೇಣುಕ ಕೊಡಲಿ ಶುಭವನು
ಗುರುವು ಶಿವರಾತ್ರೀಶ ಹರಸಲಿ
ಚರಕುಲವು ನಿನಗಿತ್ತು ಸಲಹಲಿ ಮೋಕ್ಷಸಂಪದವ
ಧರೆಯೊಳಗೆ ನಿರ್ದೋಷಕಾರ್ಯವ
ನರಿದು ಮಾಡುವ ತರದಿ ತಿಳಿವನು
ಕರುಣಿಸುತ ಪರಮೇಶ ಪೊರೆಯಲಿ ನಿನ್ನನಾದರದಿ ೨೪

ನೀನೆ ಧನ್ಯನು ಜಗದಿ ಪರಿಕಿಸೆ
ನೀನೆ ಮಾನ್ಯನು ಜಸವ ನಿರುಕಿಸೆ
ನೀನೆ ಶರಣಾಗ್ರಣಿಯು ಪೂತನು ಭಕ್ತಪುಂಗವನು
ನೀನೆ ಶಾಂತನು ನೀನೆ ದಾಂತನು
ನೀನೆ ಕೇಳರಿವರ್ಗದೂರನು
ನೀನೆ ಸುಕೃತಿಯು ಗುಣಿಯು ಪರಸಿದ್ಧಾಂತ ತತ್ಪರನು ೨೫

ನೀನೆ ಶಿವಲಿಂಗಾಂಗವಾಗಿಹೆ
ನೀನೆ ಜಂಗಮಪಾದಪೂಜಕ
ನೀನೆ ಗುರುವಿನ ಮಹಿಮೆಯರಿದವ ತತ್ತ್ವತತ್ಪರನು
ನೀನೆ ಪಂಚಾಚಾರನಿರತನು
ನೀನೆ ಕೇಳಷ್ಟಾವರಣರತ
ನೀನೆ ಷಟ್ಸ್ಥಲಮಾರ್ಗಚಿಂತಕ ನೀನೆ ಧನ್ಯನಲ ೨೬

ನಿನ್ನ ಪೆಸರಿನ ಪಾಠಶಾಲೆಯು
ದುನ್ನತಿಯ ತಾನಾಂತು ಮೆರೆಯಲಿ
ನಿನ್ನ ಭಾಗ್ಯವು ಸುಕೃತಕಾರ್ಯಕೆ ತವರಿನಾ ನೆಲೆಯುಂ
ನಿನ್ನ ಕೀರ್ತಿಯನಿರದೆ ಜನಗಳು
ಮುನ್ನ ದಶದಿಕ್ಕಿನಲಿ ಹರಡಲಿ
ಪನ್ನಗೇಂದ್ರಾಭರಣಭಕ್ತನೆ ಸುಖದಿ ಬಾಳುವುದು ೨೭

ಜಯವು ಶಿವನಿಗೆ ಜಯವು ಹರನಿಗೆ
ಜಯವು ಸುಮಶರಗರ್ವಹರನಿಗೆ
ಜಯವು ಯಮಮದಪಾಪಹಾರಿಗೆ ಜಯವು ಗಿರಿಶನಿಗೆ
ಜಯವು ತ್ರಿಪುರಧ್ವಂಸಕಾರಿಗೆ
ಜಯವು ಯಮಿವರಸೇವ್ಯಪಾದಗೆ
ಜಯವು ಭವತಾಪಾಪಹಾರಿಗೆ ಜಯವು ಪಶುಪತಿಗೆ ೨೮

ಹರವದನಸಂಜಾತ ಜಯಜಯ
ಹರಮತೋದ್ಧರಪೂತ ಜಯಜಯ
ದುರಿತವನದಾವಾನಲನೆ ಜಯ ಯತಿಲಲಾಮಜಯ
ಪರಮರೇಣುಕಯೋಗಿ ಜಯಜಯ
ಪರಿಣತಾಂತಃಕರಣ ಜಯಜಯ
ಗುರುವೆ ಶಿವರಾತ್ರೀಶವರದನೆ ಜಯ ಚಿದಂಗ ಜಯಂ ೨೯

ಗುರುವೆ ಜಯುಜಯು ಭಕ್ತವರ ಸುರ
ತರುವೆ ಜಯುಜಯು ಮುಕ್ತಿಸಂಪದ
ದಿರವೆ ಜಯು ಸುತ್ತೂರರೆರೆಯು ಜಯು ಪಾವನಾಂಗ ಜಯು
ಅರಿವೆ ಜಯು ಸುಜ್ಞಾನವರಮಂ
ದಿರವೆ ಜಯು ಸಿದ್ಧಾಂತಚಯುಸಾ
ಗರವೆ ಜಯು ಶಿವರಾತ್ರಿದೇವನೆ ನಿನಗೆ ಜಯುವಿರಲಿ ೩೦

ಪರತರೇಶಾನೇಶನಾದಿಯು
ತರದಲ್ಲೈತರುತಂದು ರಾಜಿಸಿ
ಧರಣಿಯಲಿ ಸುತ್ತೂರ ಸಿಂಹಾಸನದಿ ಶೋಭಿಸಿದ
ಗುರುಪರಂಪರೆಯುದಕೆ ಜಯುಜಯು
ವಿರತಿಜನಮಂದಾರರಿಗೆ ಜಯು
ಶರಣಸಂಕುಲವಂದ್ಯ ಪಾದಾಬ್ಜರಿಗೆ ಜಯುಜಯುವು ೩೧

ಪರಮ ವಿದ್ಯಾಗುರುವರಗೆ ಜಯು
ಮೆರೆವ ಷಟ್ಸ್ಥಲಪರಿಣತಗೆ ಜಯು
ಹರನ ಮತಸಿದ್ಧಾಂತಶಾಸ್ತ್ರೋದ್ಧರಣಗುರೆ ಜಯುವು
ನಿರುಪಮಗೆ ನಿರ್ಲೇಪನಿಗೆ ಜಯು
ನಿರಘಮೂರ್ತಿ ನಿರಂಜನಗೆ ಜಯು
ಧರೆಯು ಕಾರ್ಯದಮಠದಲೆಸೆದಾ ಪ್ರಭುಗೆ ಜಯುಜಯುವು ೩೨

ನರಪನಾಳಲಿ ನೀತಿಯಿಂದಲಿ
ನರರು ದುರಿತಕೆ ದೂರರಾಗಲಿ
ಧರಣಿ ಮಳೆಬೆಳೆಯಿಂದ ಮೆರೆಯಲಿ ಮೂರುಕಾಲದಲಿ
ಹರನ ಭಕ್ತಿಯುು ಜಗದಿ ಹರಡಲಿ
ಪರಮಷಟ್ಸ್ಥಲಮಾರ್ಗ ಬೆಳಗಲಿ
ಸುರುಚಿಲಿಂಗಾಂಗೈಕ್ಯಪದ್ಧತಿಯಿರದೆ ಶೋಭಿಸಲಿ ೩೩

ವರಮಹಾಬಲ ವಾಮದೇಹಿನಿ
ಸರಸಸಮ್ಯಜ್ಞಾನದಾಯಿನಿ
ನಿರುಪಮಾನಂದಾಬ್ಧಿ ಚಂದ್ರಿಕೆ ಮುಕ್ತಿವರದಾತ್ರಿ
ಚರಣಭಕ್ತಭವಾಪಹಾರಿಣಿ
ತರದಿ ಕೊಡುವುದು ಸಕಲ ಶುಭವನು
ಪರಮಶರಣಾಲಂಬೆ ಚಾಮುಂಡಾಂಬೆ ಜಗದಂಬೆ ೩೪

ತಂದೆ ತಾಂ ಚಂದ್ರಾರ್ಯ ತಾಯಿಯು
ಮಂದಮತಿ ಪೊನ್ನಾಂಬೆಯೆಂಬರ
ಸುವನನು ತಾನೆನಿಸಿ ಕವಿ ಸಂಗಾರ್ಯನೆಸೆಯುತಲಿ
ಚುದದಿಂದೀಕೃತಿಯ ರಚಿಸುತ
ಲಂದದಿಂ ಮನವಲಿದು ಹರಿಸದೊ
ಳಿಂದು ಗುರುಶಿವರಾತ್ರಿದೇವನ ಚರಣಕರ್ಪಿಸಿದ ೩೫

ಅರಿತವನು ನಾನಲ್ಲ ಶಾಸ್ತ್ರವ
ನಿರದೆ ಕಲಿತವನಲ್ಲ ವೇದವ
ಪರಿಸರಿಯ ವಿದ್ಯೆಗಳನವ ತಾ ಬಲ್ಲಕವಿಯಲ್ಲ
ಗುರುವರರ ಬುಧಜನರ ದಯದೊಳು
ಹರನನುಗ್ರಹದಿಂದ ಚರಿತೆಯ
ಬರೆದು ಪೂರಯಿಸಿದೆನು ವಾಣಿಯ ಕರುಣೆಯೊದಗಿರಲು ೩೬

ಅರಿತರಿದ ಬಗೆಗೊಂಡು ಪಠಿಸಲಿ
ಹಿರಿಯರಿದರರ್ಥವನೆ ತಿಳಿಯಲಿ
ಪರಿಣತರು ತಾವಿದರ ದೋಷವ ತಿದ್ದಿ ಮೆರೆಯಿಸಲಿ
ಹರಭಜಕರಿದನೊಲಿದು ಮೆಚ್ಚಲಿ
ಗುರುಪರಂಪರೆಯಿದನು ಹರಸಲಿ
ಪರಮಶಿವ ಗುರುವರರು ಮೆರೆಯಲಿ ದಶದಿಗಂತದಲಿ ೩೭

ಸಾರವೀಣಾಹಸ್ತ ಶೋಭಿತೆ
ಭೂರಿಕರುಣಾಪಾರವಾರಿಧಿ
ಹಾರಕೇಯೂರಾದಿ ಸುರುಚಿರಭೂಷಣಾನ್ವಿತೆಯೆ
ಚಾರುತರಸುಜ್ಞಾನದಾಯಿನಿ
ಧಿ ರಮುದಿತಪಾದಪಂಕಜೆ
ಶಾರದಾಂಬೆಯು ಕುಡುವುದೊಲಿದೀ ಕೃತಿಗೆ ಮಂಗಲವ ೩೮



ಮಂತ್ರಮಹರ್ಷಿ

ಜಗದ್ಗುರು

ಶ್ರೀ ಶಿವಯೋಗಿ ಶಿವರಾತ್ರೀಶ್ವರ ಮಹಾಸ್ವಾಮಿಗಳವರು

# ಮಂತ್ರಮಹರ್ಷಿಕಥನಂ

ಸೂಚನೆ : ಮಂತ್ರಕೋಟ್ಯಂತರವ ಲಿಖಿಸಿ ಸು
ಮಂತ್ರಿಶಿವರಾತ್ರೀಶ ಯೋಜಿತ
ತಂತ್ರದಿಂ ಸಂಕಲ್ಪರುಪೀಠವನೆತ್ತಿದರು ನಭಕೆ

ಶ್ರೀ ಗಿರೀಶ ಪರೇಶ ಶಂಕರ
ಭೋಗಿಭೂಷಣ ರುಚಿರಭಾಷಣ
ಯೋಗಿಹೃದಯಾಂಭೋಜಭಾಸ್ಕರ ದುರಿತಸಂಹಾರ
ಆಗಮೋಕ್ತವಿಚಾರ ಮಹಿಮನೆ
ಬಾಗಿ ಭಜಿಸುವ ಭಕ್ತಜನರನು
ಬೇಗ ಭವದಿಂ ಪಾರುಗಾಣಿಸು ಶಿವಮಹಾದೇವ ೧

ಶ್ರೀ ನಿರಂಜನಲಿಂಗಜಂಗಮ
ನೀನೆ ರಕ್ಷಕ ನಂಬಿದವರಿಗೆ
ದಾನಿ ಲೋಕದೊಳಿರುವ ಜಂತುಗಳನ್ನು ಪೊರೆಯುವವ
ಭಾನುಚಂದ್ರಾಗ್ನಿತ್ರಿನೇತ್ರನೆ
ಮಾನವರನುದ್ಧರಿಸೆ ಭಕ್ತಿ
ಜ್ಞಾನಯೋಗವನಿತ್ತು ರಕ್ಷಿಸು ಸತತ ಸೋಮೇಶ ೨

ರಿಂಗಣಿತಮಂಗಲಗಲದುರೂ
ತ್ತುಂಗಭಂಗದಭಂಗಸಂಗತಿ
ಸಂಗಳಿಸಿ ಗಂಗಾತರಂಗಿಣಿಯಂತೆ ಸೊಗಮಡೆದು
ಕಂಗಳಿಗೆ ಪರಹಾಸದಂತೆ ಸಿ
ತಾಂಗಸಂಪದವೀವ ಫೇನಚ
ಯಂಗಳಿಂ ಸಿಂಗರಿಸಿಕೊಂಡೆಸೆದಿಹುದು ನದಿಕಬಿಲೆ ೩

ಆ ವಿಮಲವಿಶದಾಪಗೆಯ ತಟ
ಸೀವಿರಲು ತರುಗುಲ್ಮಕುಟಜಲ
ತಾವಿತಾನಗಳಿಂ ಪ್ರಸೂನಫಲಪ್ರಸೂತಿಗಳಿಂ
ಭಾವುಕರ ಭಕ್ತರ ಶರಣರಂ
ಭಾವಿತರ ಸಂಜೀವಿನಿಯೆನಲು
ಭೂವಲಯಕೈಲಾಸದೊಲು ಸುತ್ತೂರ್ರಾಜಿಸಿಹುದು ೪

ವೀರಸಿಂಹಾಸನಜಗದ್ಗುರು
ಕಾರಣಿಕರವತಾರದಿಂ ಸು
ತ್ತೂರು ದಿವ್ಯಕ್ಷೇತ್ರವಾಗುತೆ ಕಲ್ಪತರುವಾಯ್ತು
ವೀರಶೈವಾಚಾರದರ್ಶನ
ಸಾರಸತ್ವವ ಜನಕೆ ಬೋಧಿಪ
ಪಾರಮಾರ್ಥಿಕ ಮೋಕ್ಷದಾಡುಂಬೊಲವೊಯೆನ್ನಿಸಿತು ೬

ಬಸವಸಮಕಾಲೀನಶರಣರು
ಮುಸುಡಿಚೌಡಯ್ಯಾದಿ ಗಣ್ಯರು
ಒಸೆದು ಧಾವಿಸಿ ಬಂದರೈ ಸುತ್ತೂರುಮಠವರಸಿ
ಅಸಮಕಾಯಕಗೈದ ಮಹಿಮಾ
ಪ್ರಸರಸಭವಾಂಶಾವತಾರದೊ
ಳೆಸೆದ ಮಾದೇಶ್ವರರು ಸೇವೆಯ ಸಲ್ಲಿಸಿದರಿಲ್ಲಿ ೭

ಶರಣುಶರಣೆನ್ನುತ್ತಲಿಲ್ಲಿಗೆ
ಬರುವ ಭಕುತರು ಭವವ ಬೇಗೆಯ
ಪರಿಹರಿಸುವಧ್ಯಾತ್ಮಶಕ್ತಿಯ ಸಿರಿಯ ಗಳಿಸುವರು
ಬರೆದು ತಣಿಯರು ಮಠದ ಲೋಕೋ
ತ್ತರಚರಿತ್ರೆಯ ವರಕವೀಂದ್ರರು
ಒರೆವುವಿಲ್ಲಿನ ತಾಮ್ರಶಾಸನ ಶಿಲೆಯ ಬರಹಗಳು ೭

ಓದಿದರು ಪಂಡಿತರು ಶಾಸನ
ದೋದುಗಳನರ್ಥೈಸಿದರು ಅವ
ನಾದರದಿ ವಿವರಿಸುತ ಇದರಿತಿಹಾಸವನ್ನೆಲ್ಲ
ಮೋದದಿಂ ಶ್ರೀಮಠದ ಭಕ್ತರು
ಸಾದರದಿ ಮನಗಂಡು ನಲಿದರು
ಪಾದವೇಂ ಪ್ರಾಚೀನತೆಯನದ ಮುದದಿ ಸವಿದುಂಡು ೮

ಪರಮಮಂತ್ರಮಹರ್ಷಿಯೆನ್ನುವ
ಬಿರುದನಾಂತಿಹ ಗುರುಚರಿತ್ರಾ
ಸುರತರುವಿನಿಂದೊಗೆದ ಪರಿಮಳ ಧರೆಯನಾವರಿಸೆ
ಒರೆವೆ ನಾ ಗುರುವಿತ್ತ ಮತಿಯಲಿ
ಕರುಣೆಶಿವರಾತ್ರೀಶ್ವರನ ಶುಭ
ತರದ ವಿಖ್ಯಾತದ ಸುಕೀರ್ತಿಯ ಶಿವವಿಲಾಸವನು ೯

ಜನಿಸಿದರು ವರಶಾಲಿವಾಹನ
ಘನದಿಗಂಬರ ದಿಗ್ಧರಾತಪು
ವಿನಮಿತ ವ್ಯಯನಾಮಸಂವತ್ಸರವಸಂತದೊಳು
ಮುನಿವರರು ವೈಶಾಖ ಬಹುಳದೊ
ಳನುಪರಿತ ಚೌತಿಯ ತಿಥಿಯೊಳು
ನ್ಮನದಿ ಲೋಕವು ನಲಿಯೆ ಭಾರ್ಗವವಾಸರಾದಿಯೊಳು ೧೦

ದಂತಿದಂತನಿಕೃಂತನ ಪಟೂ
ದಂತಚಿಂತನರೂಪಣೈಕದಿ
ಗಂತಭೇದನ ಭೀಮಗರ್ಜನ ಸಿಂಹಶಾಬನೊಲು
ಸ್ವಾಂತರಂಗದಿ ವೈರಿಷಟ್ಕ
ಧ್ವಾಂತಪರಣಕೆ ತರಣಿಯಂತೆ ಸು
ಶಾಂತರೆನಿಸಿದರು ಬಾಲ್ಯದೊಳೆ ಭವಿತವ್ಯಕುಚಿತವೆನೆ ೧೧

ಸಿದ್ಧಲಿಂಗಯತೀಂದ್ರಪದವಲಿ
ಬಿದ್ಧಮಾನಸರಾದ ಗುರುಗಳು
ಶುದ್ಧಮತಿ ಕಾರ್ಯಪ್ರಭುಸ್ವಾಮಿಗಳ ಕೃಪೆಯಿಂದ
ಬುದ್ಧಿವಡೆಯುತೆ ವಿವಿಧಶಾಸ್ತ್ರವಿ
ಶುದ್ಧತತ್ತ್ವವನರಿತು ತತ್ತ್ವ
ಸಿದ್ಧಿ ಪಡೆದರು ನಿಜಗುರುವನೇ ಮೆಚ್ಚಿಸುತೆ ಪದಪಿಂ ೧೨

ಕೇವಲಾತ್ಮವಿಭಾವನಾಚಿ
ದ್ಭಾವದಲಿ ಮುಳುಗಿದ್ದ ಗುರುಗಳು
ತೀವಿಬರಲನುಭವಸಮನ್ವಿತ ಸರ್ವವಿದ್ಯೆಗಳು
ಪಾವಕಪ್ರತಿಮಾನರೆನಲಸು
ಭಾವಯೋಗಿಗಳಾಗಿ ಮೆರೆದರು
ಶೈವತತ್ತ್ವವಸಂತದೊಲು ಶರಣಾಪ್ರುವನದಲ್ಲಿ ೧೩

ವೀರಸಿಂಹಾಸನವ ಶ್ರುತಿಭುಜ
ಚಾರುದಿಗ್ಧರಣೀತಮಮಹೋ
ದಾರತರಶೋಭಕೃತುಸಂವತ್ಸರವಸಂತದೊಳು
ಧೀರಮತಿ ವೈಶಾಖಶುಕ್ಲದ
ವಾರಣೈಕಾದಶಿಯ ಪೂಷಣ
ವಾರದೊಳು ತಾವೇರಿದರು ಸದ್ಧರ್ಮಸಾಧನೆಗೆ ೧೪

ಗುರುವು ದೇಶಿಕವರ್ಯ ಕೃಪೆಯಿಂ
ಪರಮಸಾಹಸದಿಂದ ಪೀಠದ
ಕೊರತೆಯೆಲ್ಲವ ನೀಗಲುಜ್ಜುಗಿಸಿದರು ಕಾಯಕದಿ
ಭರದಿ ಯತಿಕುಲದಧಿಪರಾರ್ಥಿಕ
ದುರವಣೆಯು ಕಳೆಯಲ್ಕೆ ಯೋಜಿತ
ತೆರದಿ ಗೈದರು ಹಲವು ಸಾರ್ಥಕಕಾರ್ಯಗಳ ಮುದದಿ ೧೫

ಅತಿಶಯದ ಶಮದಮಗಳಿಂದಲಿ
ಯತಿವರರು ಶಿವಲಿಂಗಪೂಜಾ-
ವ್ರತನೆನಿಸಿ ಸದ್ಭಕ್ತಜನರಾದರ್ಶಮೂರುತಿಯು
ಮತಿಗೆ ಮಂಗಳವೀವ ಮಠದ
ಪ್ರಧ್ಧತಿಯ ಬೆಳಗುತಧೀನಮಠಗಳ
ಜತನದಲಿ ಬಲಪಡಿಸಿ ಕರುಣಿಸಿದವಗೆ ಸಮರಾರು ೧೬

ಅಲ್ಲಿ ಸಲ್ಲುವ ಬಗೆಯ ತಿಳಿಯಲು
ಇಲ್ಲಿ ಸಲ್ಲಲು ಮೊದಲು ನಡೆಯಿರಿ
ಸೊಲ್ಲುಸೊಲ್ಲಿಗು ಶರಣರಿದನೇ ಬೋಧೆಗೈದಿಹರು
ಎಲ್ಲರೀ ಸಂದೇಶವರಿತರೆ
ಎಲ್ಲಿರುವುದಜ್ಞಾನವೆನ್ನುತೆ
ಎಲ್ಲ ಬಲ್ಲರ ಮುಲ್ಲ ಕಾರಣನಾದ ಸಾಧನೆಗೆ ೧೭

ಚೋಳರಾಜರು ನಿರ್ಮಿಸಿದ ಸಿರಿ
ಭಾಳಲೋಚನ ಸೋಮನಾಥನ
ಆಲಯವು ಶೈಥಿಲ್ಯ ಹೊಂದಿರಲಂದು ಗುರುವರ್ಯ
ಕಾಲಕಾಲಕೆ ಕಲ್ಲುಗೆಲಸದ
ಆಳುಗಳ ಕಲೆಹಾಕಿ ನಿರುತವು
ಕಾಲಸಂಹರನಾಲಯವ ಪೊಸತೆನಿಸೆ ಸೃಜಿಸಿದರು ೧೮

ಹಗೆಯ ಹೊಗೆಯಾಡಿಸುತ ಮಠಗಳು
ಬಗೆಬಗೆವಿವಾದಗಳನೆಸಗುತ
ಜಗಳವಾಡುತ ಶಾಂತಿಸತ್ತ್ವವ ನೀಗಿಕೊಂಡಿರಲು
ಬಗೆಯು ಕದಡುವ ತಪ್ಪಿವಾದವ
ಬಗೆಹರಿಸಿ ಶಿವರಾತ್ರಿಗುರು ತ
ಮ್ಮಗ್ರಗಣಿತದ ಮಹಿಮೆಯನು ಮೆರೆದರು ಯುಕ್ತಿಶಕ್ತಿಯಲಿ ೧೯

ಶ್ರೀಮಂತಂಗಳ ನಡುವೆ ಹುಟ್ಟಿದ
ತಾಮಸಪ ಸಂಹರಿಸಿ ವಿಜಯುವ
ನೇಮದಿಂದಲಿ ಪಡೆದು ಲೋಕದ ಗುರುವು ತಾವಿರಲು
ಆ ಮಹಾಗುರುಮಠಗಳೊಡೆಯರು
ಭೂಮಿಪಾಲರುದಾತ್ತರೆಲ್ಲರು
ಪ್ರೇಮದಿ ಪಾಡಿದರುಘೇ ಎಂದವರ ಗುಣಗಣವು ೨೦

ವಿದ್ಯೆಯಿಂದಲೆ ಜೀವನದ ಗುರಿ
ಸಿದ್ಧಿಸುವುದೈ ನೀತಿಧರ್ಮದ
ವೃದ್ಧಿಯಾಗಲು ನರನು ಹರನಾಗುವನು ಮತ್ರ್ಯದಲಿ
ಬುದ್ಧಿ ಬಳೆಯುವುದಾತ್ಮಚೇತನ
ವೆದ್ದು ಮೆರೆವುದು ಮಲಿನಮಾನವ
ಶುದ್ಧನಪ್ಪನು ಎಂಬ ತತ್ತ್ವವನರಿತ ಯತಿವರರು ೨೧

ಸಕ್ಕದದ ಭಾಷೆಯನು ಕಲಿಸಲು
ತಕ್ಕ ಶಾಲೆಯ ನಿರ್ಮಿಸಲು ಮೇ
ಣಕ್ಕರದ ವಿದ್ಯೆಯನು ಪಸರಿಸೆ ಯೋಚಿಸಿದರಾಗ
ಉಕ್ಕಿಬರಲುತ್ಸಾಹಶೀಲತೆ
ಮುಕ್ಕುಳಿಸೆ ಮುದ ಹಣದ ವೆಚ್ಚವ
ಲೆಕ್ಕಿಸದೆ ರಚಿಸಿದನು ಸಿದ್ಧಣ ಪಾಠಶಾಲೆಯನು ೨೨

ಆಗ ಶಿವರಾತ್ರೀಶ ಪೇಳಿದ
ರೀಗ ಕೇಳಿರಿ ಭಕ್ತಜನಗಳೆ
ಯಾಗವಿದುವೇ ಜ್ಞಾನ ಪಸರಿಪ ಶಾಲೆ ನಡೆಸುವುದು
ಶ್ರೀಗುರುವು ಕರುಣಿಸಲಿ ಭಕ್ತಿಯ
ಬೇಗ ನೀವೀ ಮಾರ್ಗವಿಡಿಯುವು
ದೇಗಳುಂ ಜ್ಞಾನದೊಳು ಮಾನವಸಿದ್ಧಿಯಿರುತಿಹುದು ೨೩

ದ್ವಾದಶಾಬ್ದದೊಳೀ ಮುನಿವರರು
ಮೋದದಿಂ ರಾಜೇಂದ್ರರಿಗೆ ಸಂ
ಪಾದಿಸಿಕೊಡಲ್ಕಾಶ್ರಮೋಚಿತಸಿದ್ಧಿಗಳನೆಲ್ಲ
ಸಾದರದಿ ಪೀಠದೊಳು ನೇಮಿಸು
ತಾದಿಮಪರಂಪರೆಯ ತಾವ-
ಚ್ಛೋದಮಾನಸರಾಗಿ ಮುಂದಕೆ ಸಾಗಿಸಿದರಾಗ ೨೪

ಇದುವೆ ಬೀಜವು ಮುಂದಣದ್ಭುತ
ಪದವಿ ಗಳಿಸುವ ಸಾಧನೆಗೆ ವಿಧ
ವಿಧದ ವಿದ್ಯಾನಿಲಯ ರಚನೆಗೆ ನಾಡಿನಾದ್ಯಂತ
ಪದಕಿನಿಂ ಮುಕ್ತಿಪ್ರಸೋದುತ
ಸದನವಿದರೊಳು ವಾಸಮಾಡುವ
ಸದಯಸುಹೃದಯಹ್ಲಾದಕರ ಶಿವರಾತ್ರಿರಾಜೇಂದ್ರ ೨೫

ನನ್ನ ಕರಸಂಜಾತನೀತನು
ಅನ್ನ ಮೋಕ್ಷಜ್ಞಾನಾದಿ ದಾನವ
ನನ್ನಿಯಿಂ ಮಾಡುತಲಿ ಜಗದುಪಕೃತಿಯನೆಸಗುವನು
ಇನ್ನಿತರ ಕಾರ್ಯಗಳ ಗೈಯುತೆ
ಮನ್ನಣೆಯ ಗಳಿಸುವನು ಪೀಠಸ
ಮುನ್ನತಿಕೆಯುದು ರಾಜಗೌರವದಿಂದ ಶೋಭಿಪುದು ೨೬

ಇಂತು ನುಡಿಯುತೆ ಭಕ್ತರೆಲ್ಲರ
ನಂತು ಹರಸಿ ಸುವೀರಶೈವದ
ನಂತಸಂಗತಿ ತಿಳಿಸಿ ತತ್ತ್ವದ ಲಕ್ಷ್ಯ ತೋರಿದರು
ಕಂತುಹರ ಬೇರಿಲ್ಲ ಶಿಷ್ಯರೆ
ಅಂತರಂಗದೊಳಿರುವ ಚೇತನ
ವಂತದನು ಚಿಂತಿಸುತಲಿರಿ ನೀವೆಂದು ಬೆಸಸಿದರು ೨೭

ಎಂಟು ಆವರಣಗಳೆ ಅಂಗವ
ದುಂಟು ಪಂಚಾಚಾರ ಹರಣವು
ದಾಂಟಿ ಷಟ್ಸ್ಥಲಗಳನು ಮೆಲ್ಲನೆ ಐಕ್ಯ ಸಾಧಿಪುದು
ಕಂಟಕವು ಭವರೋಗವದ ಕಳೆ
ದೀಂಟಿ ವೇದಾಂತಾಮೃತವ ಮಿಗೆ
ನೆಂಟರಾಗಿರಿ ಸಂತರಿಗೆ ನೀವ್ ಮುಕ್ತಿಗಳಿಸುವಿರಿ ೨೮

ಜಾತಿಯಲ್ಲವು ಮುಖ್ಯ ಧರ್ಮಕೆ
ನೀತಿ ಸೋದರಭಾವ ತಾಳಿಂ
ಕಾತುರತೆಯಿರಲಲ್ಲ ಜೀವಾವಳಿಗೆ ಲೇಸಾಗೆ
ಪ್ರೀತಿಸಿರಿ ನೀವಿಡಿಯ ವಿಶ್ವವ
ಘಾತ ಬೇಡಿರಿಯೆಂದು ಪೇಳ್ದರು
ನೀತಿಕೋವಿದ ಸಿದ್ಧಪುರುಷರು ಜಗದ ಗುರುಗಳಲಾ ೨೯

ವಾರಣಾಸಿಗೆ ಶೈವವಿದ್ಯಾ
ಸಾರಸರ್ವಸ್ವವನು ತಿಳಿಯಲು
ಸಾರಪತಿ ರಾಜೇಂದ್ರ ಧಾವಿಸೆ ಪೂಜ್ಯಗುರುವರನು
ಚಾರುಶಿಷ್ಯವಿಯೋಗವಪ್ಪುವಿ
ಚಾರವನು ಮಿಗೆತಾಳಲಾರದೆ
ಪೂರಿತಪ್ರೇಮದಲಿ ಹಿಂದಕೆ ಕರೆದು ತಂದರಲಾ ೩೦

ಅರಮನೆಯು ಗವಿಮಠದ ಮಾನಿತ
ಗುರುವು ಗೌರೀಶಂಕರರು ತಾವ್
ತೆರಳಿ ಕಾಶಿಗೆ ವಿದ್ಯೆಗಳಿಸುತ ಕೀರ್ತಿ ಹೊಂದಿದರು
ಮರಳಿದರು ಮೈಸೂರ್ಗೆ ತಮ್ಮಯ
ಅರಮನೆಯು ಗವಿಮಠದಿ ಮುದದಿಂ
ದಿರಲು ಸಂತಸವಾಯ್ತು ಪಂಡಿತಪಾಮರರಿಗೆಲ್ಲ ೩೧

ಕಾಶಿಯಲಿ ಸಂಸ್ಕೃತದ ವಿದ್ಯಾ
ಭ್ಯಾಸಗೈಯುತ ತತ್ತ್ವಸಂಪ
ದ್ರಾಶಿಯನು ಸಂಗ್ರಹಿಸಿ ವೇದಾನ್ತದ ರಹಸ್ಯವನು
ಈಸುಬಿಡದಲೆ ತಿಳಿದು ಭಾಸ್ವ
ಚ್ಛ್ರೀಶಿವಾದ್ವೈತಪ್ರವಾಹದೊ
ಳೀಸಿ ಮೆರೆದರು ಯತಿಕುಲಾಂಬುಧಿಚಂದ್ರ ಹರುಷದಲಿ ೩೨

ಆರುರಿಪುವರ್ಗದೊಳು ಪಂಚಕ
ದೂರವಾದರು ಮಠದ ಪರಿಸರ
ತೀರ ಕಿರಿಕಿರಿಯಾಗೆ ಲೋಭವು ಗುರುವನಡರಿರಲು
ಮಾರವೈರಿಯ ಸಗುಣರೂಪರಾ
ಚಾರುಕೀರ್ತಿಯು ಗಳಿಸಿ ಮೆರೆದಾ
ಗೌರಿಶಂಕರಗುರುವು ಚಿತ್ತವನಿತ್ತು ಮಂಸಿವರು ೩೩

ಕಾಯಕೆ ಶ್ರಮದಾಯಿಯೆನಿಸಿದ
ಪಾಯಕಾರಿ ಶ್ವಾಸಕೋಶದ
ನೋಯುವೇದನೆಯಂತೆಯೇ ಶಿವಮಂತ್ರಭೇಷಜಕೆ
ಮಾಯವಾದುದು ಮಾಯೆಯೋ ಮಿಗೆ
ಪಾಯವಿಲ್ಲದೆ ಕಳಚಿಕೊಳ್ಳಲು
ಮಾಯಿಕಜಗದ್ಬಂಧಗಳಿಗಿನ್ನಲ್ಲಿ ಹೊಲಬೆಲ್ಲಿ ೩೪

ಕಾಮುಮಠದೊಳು ಗದ್ದುಗೆಯ ನೀವ್
ನೋಡಿ ನಿಮ್ಮನೆ ಆಶ್ಲಿಗರ್ಪಿಸಿ
ಕೂಡಿ ಸಾಕೀ ಲೌಕಿಕವ ನೀವ್ತೊರೆದು ಮೇಲೇಳಿ
ನೂಡಿ ಧನರಕ್ಷಣೆಯ ಲೋಭವ
ನೋಡಿ ಪಂಚಾಕ್ಷರಿಯ ಸತ್ಯವ
ನಾಡೆ ನೀವಧ್ಯಾತ್ಮಭಾವವ ಲಿಖಿಸಿ ಶಿವಮಂತ್ರ ೩೫

ಕಳೆದು ಹೋಯಿತು ಲೋಕಮಾಯೆಯು
ಬೆಳಕ ಕಂಡಿತು ತಮ್ಮ ಬಗೆಗಣ್
ಒಳಿತನುಸುರುವ ಗೌರಿಶಂಕರರಡಿಗೆ ವಂದಿಸುತೆ
ಸರಿದು ಬಿಸುಟರು ಲೌಕಿಕವ ತಾವ್
ತಿಳಿದು ನಡೆದರು ತಮ್ಮನರ್ಪಿಸಿ
ಕೊಳಲಿಕಾದಿಮಗುರುವರನ ಗದ್ದುಗೆಯಾದಿಹ ಮಠಕೆ ೩೬

ಗವಿಮಠದ ಗುರುಕೃಪೆಯದಚ್ಚರಿ
ಶಿವನ ಮಂತ್ರವ ಲಿಖಿಸತೊಡಗಿದ
ತಪಸಿಗಳು ಮಹಿಮಾತಿಶಯದಿಂ ವ್ರತವ ಹಿಡಿದಂತೆ
ಅವನಿ ಮರೆತರು, ಎಲ್ಲ ಬಿಟ್ಟರು
ಶಿವನ ಪೂಜೆಯ ಜೊತೆಗೆ ಬರೆಯುತೆ
ಕವಿಗಳಾದರುಯೆನಿತೊ ಪುಣ್ಯದ ಫಲವು ಒಟ್ಟೈಸೆ ೩೭

ಗುರುವರರು ನಿಜತಪದ ಫಲವನು
ಪರಮವಿದ್ಯಾಶಾಸ್ತ್ರಬಲವನು
ಚಿರಕೃತಿಯ ರೂಪಿಂದೆ ಸಾಕ್ಷಾತ್ಕರಿಸೆ ನಿಶ್ಚೈಸಿ
ಪರಮಪಾವನಮಂತ್ರಮಹಿಮ
ಸ್ಮರಣನಾಮಗ್ರಂಥರಾಜವ
ನಿರವಿಸಿದರಖಿಲಾತ್ಮಸಾಧಕತತಿಗೆ ಬೆಳಕಾಗಿ ೩೮

ರಾಜಧಾನಿಯಲಿದ್ದ ಸಿರಿಗುರು
ರಾಜ ಸತತವು ಬಡವರ ಪರಿಗೆ
ಸಾಜವಾಗಿಯೆ ಮರುಗುತಿದ್ದರು ವಿದ್ಯೆ ಕಲಿಯುತಲೆ
ತೇಜದಿಂ ಕಂಗೊಳಿಸುತಿದ್ದು
ವ್ಯಾಜವೊಂದಕೆ ಕಾಯುತಿದ್ದರು
ಓಜೆಯಿಂ ಕಂಡರಿದರೈ ಕೈಲಿದ್ದ ಕಸವರವ ೩೯

ವಿಕ್ರಯಿಸಿ ಕಾಂಚನವೆನವರಿಗೆ
ಸಕ್ರಮಂದೊಳಸನಾದಿಗಳ ತಾವ್
ವಿಕ್ರಮಂದೊಳೀಯುತ್ತೆ ರಕ್ಷಿಪ ಗುರುವು ರಾಜೇಂದ್ರರ್
ಸಕ್ರಿಯಕೆ ವಸತಿಯನು ಮಾಡಲು
ಪಕ್ರಮಿಸಿ ಗುರ್ವಾಜ್ಞೆ ನಿರುಕಿಸೆ
ಸಕ್ರಿಯವ ಗೈಯುತಲಿ ಗುರುಗಳು ಅಭಯ ನೀಡಿದರು ೪೦

ಅಮಲವಿದ್ಯೆಯು ನರರ ಚಿತ್ತದ
ತಮವ ಕಳೆವ ದಿನೇಶನೆನ್ನುತ
ಸುಮತಿ ಸದ್ಗುರು ತೆರೆಸಿದರು ತಾವೆನಿತೊ ನಿಲಯಗಳ
ಕ್ರಮವನರಿತವನಿಹಪರದ ಸುಖ
ಸಮನಿಸುವ ವಿದ್ಯೆಗಳನಾಶಿಸು
ವಮಿತವಿದ್ಯಾರ್ಥಿಗಳಿಗನುಕೂಲತೆಯನೊದವಿಸುತೆ ೪೧

ವೀರಸಿಂಹಾಸನದ ಹೊಣೆಯನು
ಧೀರರಾಜೇಂದ್ರರಿಗೆ ವಹಿಸುತೆ
ಪಾರಮಾರ್ಥಿಕಮಾರ್ಗದಲಿ ಮುನ್ನಡೆವ ಸಾಧನೆಯ
ಗೌರವಿಸಿ ಜಯಚಾಮರಾಜರು
ಮೀರುಹೋದರು ಯತಿಯ ನಿಷ್ಠೆಗೆ
ಚಾರುಭಕ್ತಿಯ ಬೆಳೆಸಿಕೊಂಡರು ಮುದದಿ ಕೊನೆತನಕ ೪೨

ಭಾರತಾಧ್ಯಕ್ಷರುಗಳಿಬ್ಬರು
ಸಾರಮತಿ ರಾಜೇಂದ್ರರುಂ ವಿ
ಸ್ತಾರಕೀರ್ತಿಯನಾಂತ ರಾಧಾಕೃಷ್ಣರುಂ ಬಂದು
ಗೌರವಾರ್ಹಕೃತಿಲಿಖಿತವನು
ದಾರಭಾವದಿ ಕಂಡು ಸದ್ಗುರು
ಮೇರುಸಿದ್ಧಿಗೆ ಚಾಮರಾಜರ ಸಹಿತ ನಮಿಸಿದರು ೪೩

ಶ್ರೀ ಗುರುಗಳುರುಮಂತ್ರಲೇಖೋ
ದ್ಯೋಗಮಂ ಭವಬಂಧಲುಂಠನ
ದಾಗಮಪ್ರಖ್ಯವನು ಕಂಡರು ಸರ್ವಯತಿವರರು
ರಾಗಿಭೋಗಿವಿರಾಗಿಯೆನ್ನದೆ
ಸಾಗಿಬಂದಖಿಲಪ್ರಜಾವಳಿ
ಯಾಗ ಕಂಡು ಕೃತಾರ್ಥವಾಯಿತು ಮಂತ್ರಮಖದಿವನು ೪೪

ಶ್ರೀಮಠದ ಗುರುಪರಂಪರೆಯ
ದ್ಧಾಮಮಹಿಮೆಯ ಬರೆಸಲೆಳಸಿದ
ರಾ ಮಹಾಪ್ತರು ಮುಖ್ಯಶಿಷ್ಯರು ಬೇಡಿದರು ಗುರುವ
ನೇಮದಾ ಸಂಗಪ್ಪಶಾಸ್ತ್ರಿಸು
ನಾಮರಿಂ ಬರೆಸಿದರು ಗುರುಗಳು
ಭಾಮಿನೀಷಟ್ಪದಿಯ ರೂಪದಿ ಗುರುಚರಿತ್ರೆಯನು ೪೫

ಹಿರಿಯ ಭಕ್ತರ ಕಿರಿಯ ಶಿಷ್ಯರ
ಪರಮಪಂಡಿತ ಕವಿವರೇಣ್ಯರ
ಶರಣಸಾಹಿತಿವರರ ನೆರವಿನ ಕಾಣಿಕೆಯ ಪಡೆದು
ಪರಮಮಠವನುರುತರದ ಚರಿತೆಯ
ಪರಶಿವನ ವರಮಾತ್ರಮಹಿಮೆಯ
ನೊರೆವ ಸತ್ಕೃತಿಯನ್ನು ಬರೆಸಿದರವರು ಜಗದ ಗುರು ೪೬

ಈ ಮೊದಲ ಗುರುವಿರಚಿತಕೃತಿಗ
ಳಾ ಮಹಾಕಾವ್ಯಗಳ ಮೇಣ್ ಸ
ದ್ಭೂಮಿಪಾಲರು ಕೊಟ್ಟ ಸನ್ನದು ದತ್ತಿ ಶಾಸನವ
ಶ್ರೀಮಹಾಗುರು ಒದಗಿಸಲು ಕವಿ
ತಾ ಮುದದೊಳಗೆ ಗುರುವಿಗೆರಗುತ
ಲಾ ಮಹಾಕೃತಿರಚಿಸಲುಜ್ಜುಗಿಸಿದರು ಭಕ್ತಿಯಲಿ ೪೭

ಅವುಗಳಂ ಶೋಧಿಸುತೆ ಪ್ರಕಟಿಪ
ತವಕದಿಂ ಪರಿಚರ್ಯೆಗೈಯುವ
ಕವಿಹೃದಯಿಗಳ ಮೇಳವಸಿ ಸಂಪದಿಸಿದರು ಜವದಿ
ರವಿಯು ಕಂಡರಿಯದನು ಕಾಣುವ
ಕವಿವರರು ಬಂದೊದಗಿದರು ಸಲೆ
ಭವರುಜೆಯ ನಿರ್ಮೂಲ ಮಾಡುವ ಗುರುಪದದೊಳಾಗ ೪೮

ಮೊಳೆತುದೋ ಸಂಕಲ್ಪಬೀಜವು
ಹೊಳೆದುದೋ ಗುರುಭಕ್ತಿತೇಜವು
ಕಳೆಯಿತೋ ಚಿತ್ತದಲಿ ಜಡತೆಯು ಕಾವ್ಯರತಿಯುದಿಸೆ
ಫಲಿಸಿತೋ ಛಂದಸ್ಸುಯತಿಗಣ
ಬಳಸಿತೋ ರಸಶಕ್ತಿಯನು ಎನೆ
ಗಳಿಸಿಕೊಟ್ಟಿತು ವಿಜಯವನು ಸಂಗಪ್ಪಕವಿವರಗೆ ೪೯

ನದಿಸಮೂಹದಿ ಗಂಗೆಯೋ ತಾ
ನಿಮ ಪದವಿಗಳೊಳುನ್ನಮುಕ್ತಿಯೊ
ಪದವೊ ಪಕ್ಷಿಗಳೊಳಗೆ ಶಿಖಿಯೋ ಹೇಳಲಿನ್ನೇನು
ವಿಧುವೊ ಬಹುತಾರೆಗಳ ಗಡಣದಿ
ಮಧುವೊ ರುಚಿಕರಪೇಯಗಳಲಿನ್ನೆ
ಸದಭಿಮಾನದ ಕೃತಿಸಮೂಹದಿ ಕಾವ್ಯ ರಂಜಿಪುದು ೫೦

ಸಿದ್ಧಗಂಗೆಯ ಶಿವಕುಮಾರರು
ಸಿದ್ಧಿಪಡೆದುದ್ದಾನಶಿಷ್ಯರು
ಸಿದ್ಧ ಸಿರಿಶಿವರಾತ್ರಿರಾಜೇಂದ್ರಂಗೆ ಆಪ್ತರಲಾ
ಮುದ್ದುವಾಗ್ಮಿಯು ಗೌರಿಶಂಕರ
ರಿದ್ದು ಇವರಿಬ್ಬರನು ಹೃದಯದ
ಸಿದ್ಧಿಯಲಿ ಮುಂಬರಿವ ತೆರದೊಳು ಕೃಪೆಯ ತೋರಿದರು ೫೧

ಗೌರಿಶಂಕರಗುರುವರರು ವಿ
ಸ್ತಾರಿತಾಖಿಲಪಾಂಡಿತೀಧರ
ಚಾರುಗೌರೀಧವಸಮಾನರು ಸಿದ್ಧಿಪಡೆಯುತಲಿ
ಸೇರಿದರು ಕೈಲಾಸವನು ಸುರ
ಮೇರುಸದೃಶರು ಮಂತ್ರಮುನಿಗಳು
ಪಾರಚಿತ್ತರು ಬಳಿಕ ಬರಲು ಸ್ವಾಗತಿಸಲೆಂದು ೫೨

ವರಪರಾಭವ ವಿಕ್ರಯಧರಾ
ವರುಷದೊಳು ಹೇಮಂತ ಪುಷ್ಯದಿ
ಮೆರೆಯುವುತ್ತರಪಥದಿ ಭಾನುವು ಚರಿಸುತಿರಲಾಗ
ಸ್ಫುರಿತಶುಕ್ಲೈಕಾದಶೀ ವಿ
ಸ್ತರದ ರವಿವಾಸರದಿ ಭವದಿಂ
ಗುರುವರರು ತಾವಭವನಂ ಸೇರಿದರು ತಪದಿಂದ ೫೩

ದುರಿತಹರ ಭವಬಂಧಲುಂತನ
ಪರಮತ್ರೈಪಷಡಕ್ಷರೀಗುರು
ಕರುಣಮಂತ್ರದ ನಿತ್ಯಲೇಖನದೀಕ್ಷೆಯಲಿ ಮುಳುಗಿ
ಪುರಹರನ ಚರಣಾರವಿಂದ
ಸ್ಫುರಿತಜೀವನ ಮಧುಪರಾಗಿಯೆ
ತಿರೆಯ ತಂತುವ ಕಡಿದುಕೊಂಡರು ಮುಕ್ತಿಪದಕೇರಿ ೫೪

ಕವಿದುದೆಲ್ಲೆಡೆ ಕಾರುಗತ್ತಲು
ರವಿಶಶಾಂಕರು ಕಳಚಿಬಿದ್ದರು
ಭುವಿಯು ಮೇಲ್ವಾಯ್ದಿತ್ತು ಸಾಗರಸಲಿಲವಾರಿಜವು
ಭವಿತನವ ಬೀಳ್ಕೊಟ್ಟು ಬಾಳಿಗೆ
ಶಿವನ ಕಾಣಿಪ ಸಾಧಕರು ಬಲು
ನವೆದರೀ ಗುರುದೇವಲಿಂಗೈಕ್ಯದುರುಶೋಕದಲಿ ೫೫

ಕಿರಿಯ ಗುರುರಾಜೇಂದ್ರಯತಿಗಳು
ಧರೆಯೆ ಕಂಪಿಸಿದಂತೆ ಕಳವಳ
ವಿರಲು ಕಂಬನಿವಿಡಿದು ಕರಗಿದರಾಗ ಶೋಕದಲಿ
ಚರಿಪ ಶಂಕರನಂತೆ ನಿಶ್ಚಲ
ತರಮತಿಗಳೇ ಮರುಗಿರಲು ಪಾ
ಮರರ ಪಾಡಿನ್ನೇನು ಲೋಕಯತೀಶರಗಲಿರಲು ೫೬

ಪಾತಕವ ಕಳೆವಲ್ಲ ಸಮಯದಿ
ಕೇತನಪುರದ 'ಈಶ-ಪ್ರಭು' ಗುರು
ಚೇತನವು ಮೂಕಜ್ಜಗೈಯುತೆ ಧನ್ಯವಾಗಿಹುದು
ಚೂತವನದಧಿಚೈತ್ರರಂದದಿ
ಜಾತವೇದರ ಶಿಷ್ಯರಂದದಿ
ಪೂತಮತಿ ಶಿವರಾತ್ರಿದೇಶಿಕವರ್ಯ ಶೋಭಿಪರು ೫೭

ವೀರಸಿಂಹಾಸನಪರಂಪರೆ
ಗಾರುತಾನೇ ಮಣಿಯದಿರ್ಪರು
ದಾರಚರಿತರು ಯತಿಗಳಾದರ್ಶದ ನಿದರ್ಶನರು
ಮಾರವೈರಿಪದಾಂಕರೆನೆ ಸು
ತ್ತೂರುಮಠದ ಪ್ರತ್ನಭಾವಿಸು
ಮೇರುಸನ್ನಿಭಗುರುಗಳೆಲ್ಲರು ಧೀರತಾಪಸರು ೫೮

ಗುರುವು ಕಣ್ಣಿಗೆ ಕಾಣಿಸುವ ಶಂ
ಕರನು ಪರರೂಪವನು ಕಣ್ಣಲಿ
ಬರೆದು ತೋರುವ ಕಾಯಕವ ಧರಿಸಿರುವ ಗುರುವರರು
ಅರಿವೆ ಮೂರ್ತೀಭವಿಸಿ ನಿಂದಿಹ
ಧರೆಗೆ ಬಂದಿಳಿದಿರುವ ಸರ್ವೇ
ಶ್ವರನ ಶಿಲ್ಪವ ಕಂಡರಿಸಿ ಶಿವಲಿಂಗ ತಣಿದಿಹನು ೫೯

ಬೆಂಗಳೂರಿನ ಕೋಟೆಯೊಳಗಣ
ಅಂಗಡಿಯ ಶಿವಪಾರ್ಯಪಂಶದ
ಹೆಂಗರುಳ ಸೆಂಚ್ವೀರಣಾರ್ಯರ ಮಗಳ ಮಗ ಸುಶಿವ-
ಲಿಂಗಕವಿ 'ಪ್ರುಲಿಕೇಶಿ' ನಾಮದಿ
ವಿಂಗಡಿಸಿ ರಚಿಸಿದನು ಕಾವ್ಯವ
'ಜಂಗಮಕೆ ಅಳಿವಿಲ್ಲ'ವೆಂಬಾದೇಶ ನಿಜವಾಗ ೬೦

— ಮಂಗಳ —

ಮಂಗಲಂ ಹೃದಯಸ್ಥದರಿವಿಗೆ
ಮಂಗಲಂ ಶಿವಮಂತ್ರಗುರುವಿಗೆ
ಮಂಗಲಂ ಶಿವರಾತ್ರಿರಾಜೇಂದ್ರರಿಗೆ ಮಹಿಮರಿಗೆ
ಮಂಗಲಂ ಗುರುದೇಶಿಕೇಂದ್ರಗೆ
ಮಂಗಲಂ ಶಿವಜೀವರೈಕ್ಯಕೆ
ಮಂಗಲಂ ಸಂಗಪ್ಪ ಮೋಣ್ ಶಿವಕವಿಗಳೆಲ್ಲರಿಗೆ

॥ ಶಿವಂ ಭೂಯಾತ್ ॥

# ಶಿವರಾತ್ರಿರಾಜೇಂದ್ರಕಥನಂ

**ಸೂಚನೆ :** ನಿಗಮ ಮಂತ್ರಮಹರ್ಷಿ ಬೆಳೆಸಿದ
ಸೊಗದ ಸುಶಾಸ್ತ್ರಮಾರ್ಗದ ಕೀರ್ತಿಯ
ಗಗನಕೊಯ್ದ ಶ್ರೀ ಪರಮಗುರು ಶಿವರಾತ್ರಿ ರಾಜೇಂದ್ರ

ಶ್ರೀ ಗುರುವೆ ತವಪುಣ್ಯಚರಿತೆಯ
ಯೋಗಿ ನಿಜಗುಣನಮಿತದಯೆಯಿಂ
ರಾಗರಸದಿಂದೊರೆವೆ ಭಕ್ತರು ತೋಷದಿಂ ಪಠಿಸೆ
ಪೋಗೊಡಿಸು ಸಕಲೆಂಟು ವಿಘ್ನವ
ರಾಗದಿಂ ತವಪಾದಪದ್ಮಕೆ
ಬಾಗಿ ಮಣಿವೆ ಯತೀಂದ್ರ ಶ್ರೀ ಶಿವರಾತ್ರಿರಾಜೇಂದ್ರ ೧

ಗಿರಿಸುತಾಪ್ರಿಯಕುವರನನುಜನ
ಪರಮವೈರಿಯ ಗುರುಸುತಾಪ್ರಿಯ
ಕರನ ತಾತನ ಶಿಷ್ಯನಣುಗನ ಸುತನ ಮಾತುಳನ
ಅರಿಯ ಕುಲಜನ ಹಗೆಯ ಪುತ್ರನ
ಸುರುಹಿ ತವಘನಮತದ ಮುಂಗಡೆ
ಮೆರೆದು ಶೋಭಿಪ ಸೋಮನಾಥನು ಮಾಳ್ಕೆ ಮಂಗಳವ ೨

ನಿರಘ ನಿರ್ಮಲ ನಿತ್ಯ ನಿರ್ಭಯ
ನಿರತಿಶಯ ನಿಷ್ಕಾಮ ನಿಷ್ಕಳ
ನಿರವಧಿಕ ನಿಶ್ಚಿಂತ ನಿರಹಂಕಾರಿ ನಿರ್ಮೋಹಿ
ನಿರಭಿಮಾನಿ ನಿರೀಹ ನಿರ್ಗುಣ
ನಿರವಯನ ನಿಜರೂಪನೆನಿಸಿಹ
ನಿರುಪಮಜ್ಞಾನಿನಿಜಗುಣ ನಿರ್ವಿಘ್ನತೆಯನೀಗೆ ೩

ಆರ ವಚನಾಗಮದ ಮಹತಿಗೆ
ಸಾರತರಸೌಂದರ್ಯಭಾವಕೆ
ಮಾರುಹೋಗತಿಶಯದಿ ಸಲೆಸಂಪಾದಿಸುತ ಗುರುವೆ
ಭೂರಿಗೌರವದಿಂದ ಪ್ರಕಟಿಸಿ
ಧಾರಿಣಿಗೆ ಸಲಿದಿತ್ತೆಯೋ ಆ
ಚಾರುಘನಲಿಂಗಾರ್ಯ ದಯದಿಂ ಪರಸಲೀ ಕೃತಿಯ ೪

ಚೋಳಗಂಗರು ವಿಜಯನಗರದ
ಪಾಲಕರು ಮೈಸೂರುರಾಜ್ಯನೃ
ಪಾಲರನಿಬರು ಭಕ್ತಿಗೌರವ ಸಲಿಸಿ ಪೂಜಿಸಿದ
ಮೇಲೆನಿಪ ತವಮಠದ ಪ್ರಮುಖರ
ಲೀಲೆಯಿಂದದಿ ಶೋಭಿಸುವವೋ
ಲ್ಕಾಲವಳಿಸದ ತೆರದಿ ಬರೆಯಿಸು ನಿನ್ನ ಸತ್ಕೃತಿಯ ೬

ಸಿರಿಗೆ ಕೀರ್ತಿಗೆ ಬಿರುದುಬಿಂಕಕೆ
ಒರೆಯಲಿಲ್ಲಿದನಶುಭನಾಶಕೆ
ಒರೆಯಲಿಲ್ಲಿದ ಬೋಧೆಗೈಯಲು ಯಾರಿಗುಂ ಜಗದಿ
ಒರೆದೆನಿದನಾನಾತ್ಮಸೌಖ್ಯಕೆ
ಚರಣಕರ್ಪಿತವಾಯ್ತೆನುತ ನೀಂ
ಪರಸುತಾಶೀರ್ವದಿಸೆ ನಾಂ ಕೃತಕೃತ್ಯನೈ ಗುರುವೆ ೭

ಪಸುಳೆತೊದಲೋಲೊಲಿದ ನಲ್ಲೆಯ
ಪಿಸುಗುಡುವ ದನಿಯೋಲ್ಜಸನಿ ತಾ
ನೊಸೆದು ಪಾಡುವ ಜೋಗುಳದವೋಲ್ಕಾರ್ತಿಕದ ಶಶಿಯೋಲ್
ಎಸೆವ ಕನ್ಯೆಯ ಪ್ರಥಮಚುಂಬನ
ದೆಸಕದೋಲ್ರಸಚೂತಫಲದೋ
ಲ್ರಸಿಕಮಾನಸಕೀವುದತಿಸಂತಸವನೀ ಕೃತಿಯು ೮

ಅಕ್ಷರಕೆ ಲಕ್ಷಂಗೊಡುವ ಭೂ
ರಕ್ಷರೀಗುಳಿದಿಲ್ಲ ಮನೆಮಠ
ಭಕ್ಷ್ಯಭೋಜ್ಯವನಿತ್ತು ಪೋಷಿಪರಾರು ಬದುಕಿಲ್ಲ
ದಕ್ಷಕವಿಯೋರ್ವಂಗೆ ಮಿಕ್ಕನ
ರಕ್ಷಣೆಯು ಬೇಕಿಲ್ಲ ಕಾವ್ಯವ
ನೀಕ್ಷಿಸೊಲಿದೆರಡು ಸುಖಬಾಷ್ಪವನೀಯೆ ಸಾಕಲ್ಲ ೯

ಭಾಮೆಗಾಶಿಸಿ ಕಾದಿ ನಶಿಸಿದ
ಕಾಮಿ ದನುಜನ ಕತೆಯಿದಲ್ತೈ
ಭೂಮಿಹೇಮಕೆ ಹೋರಿದನುಜಾಗ್ರಜರ ಕತೆಯುಲ್ತು
ಪ್ರೇಮದಿಂ ತನ್ನೆಲ್ಲ ಸೌಖ್ಯವ
ಹೋಮಗೈದನವರತ ಲೋಕ
ಕ್ಷೇಮಕಾಗಿಯೆ ಬಾಳ್ದ ಸ್ವಾಮಿಯ ಭೂಮಕಥನವಿದು

ಹಿಂದಣಧ್ಯಾಯದೊಳು ಪೇಳಿದ
ಸಂದ ಮಂತ್ರಮಹರ್ಷಿಗಳು ತಾ
ವಂದು ಮಠಪತಿಯಾಗಹರ್ನಿಶಿ ಪಿಂತೆ ಪೇಳ್ದಂತೆ
ಚೆಂದದಿಂಮಠ ವೃದ್ಧಿಗೊಳಿಸುತ
ಲಿಂದುಧರಮಠವೆಂಬ ಕೀರ್ತಿಯ
ಪೊಂದಿ ಮಠಮುಜ್ವಲಪರಂಪರೆಯನ್ನು ಬೆಳಗುತಿರೆ ೧೦

ಸಲ್ಲಲಿತಕೀರ್ತಿವಡೆದವರಿಂ
ತಲ್ಲಿ ದಕ್ಷಾಡಳಿತ ನಡೆಸಿರ
ಲೆಲ್ಲ ಕಾರ್ಯಂಗಳಲಿ ಸಹಕರಿಸುತ್ತಲವರೊಡನೆ
ಚೆಲ್ವಿಸೆವ ಶ್ರೀ ಮಠವು ಮುಂಬರ
ಲೆಲ್ಲ ವಿಧ ಬಲಿದಾನವೆಸಗಿದ
ಮಲ್ಲಿಕಾರ್ಜುನದೇವರಾ ಮಠದೊಡೆಯರೊಡಹುಟ್ಟು ೧೧

ಜಾವಮೊದಲೊಳು ಮಲ್ಲಿಕಾರ್ಜುನ
ದೇವರೇಳುತ ಕಪಿಲೆಗೈತಂ
ದಾವ ಕೆರದೊಳು ಕಾಲಕಳೆಯದೆ ಬಳಿಯೊಳಿರುತಿರ್ಪ
ಮಾವುತೆಂಗಿನ ತೋಟದಿಡುಕಿನ
ತಾವಿನೊಳು ಕುಳಿತೇಕಚಿತ್ತದಿ
ದೇವದೇವನ ನೆನೆದು ಕಾಯಕಕೆರಗುತಿರ್ದರಲಾ ೧೨

ಶರಿರವನು ಗುರುಸೇವೆಯಲ್ಲಿಯೆ
ಕರಗಿಸುತ ಕರದಿಷ್ಟಲಿಂಗದೊ
ಳಿರಿಸಿ ಮನವನು ಭಾಗ್ಯವೆಲ್ಲವ ಜಂಗಮಕೆ ಸಲಿಸಿ
ಶರಣವಾಙ್ಮಯದಲ್ಲಿ ಬೆರೆಯುತ
ದೊರೆತ ಕಾಯಕದೊಳೊಡಲ ಸವೆಸುತ
ಧರಣಿ ಮೇಲಾ ದೇವರಿರ್ದುಮಿರದವೊಲಿರ್ದರಲಾ ೧೩

ಜನರ ಮೆಚ್ಚುಗೆ ಗಳಿಸಿ ಬಹುತರ
ಘನತೆವೆತ್ತಾ ಶರಣರಂಗನೆ
ಘನಮರಮ್ಮಣ್ಣಿ ಯೆನಿಸುವ ನಿಜಶಂಕರಮ್ಮನಲಾ
ಇನಿಯನಾಣತಿ ಹೊತ್ತು ಶಿರದೆಳೂ
ವಿನಯದಿಂ ನಡೆಸುತ್ತಲಾತನ
ಮನದ ಮರ್ಮವನರಿದು ನಡೆವಾದರ್ಶಸತಿ ನೋಡೆ ೧೪

ಇಂತು ಸಕಲೆಂಟಿತುಳಸಂಪದ
ವಾಂತು ನಾನಾಬಂಧುಸಖಹಿತ
ಚಿಂತಕರ ಜೊತೆಗೂಡಿ ಗುರುಜಂಗಮರ ಸೇವಿಸುತ
ಕಂತುರತಿಯೋಲೆಸೆವ ಜೋಡಿಯು
ಸಂತಸದಿ ಪಲವರುಷ ಕಳೆದಿರೆ
ಚಿಂತೆ ಬಾಧಾವರಿಸಿತಾಕೆಗೆ ಮಕ್ಕಳಿಲ್ಲದಿರೆ ೧೫

ಭಸಿತಪ್ರೂಸವ ಬಸವಭಕ್ತನ
ನೊಸಲು ಸರಸಿಜವಿರದ ಸರಸಿಯು
ಸಸಿಯು ಬೆಳಗದ ಗಗನ ಸುರತರುವಿರದ ನಂದನ ವೋ
ರಸವನೊಸರದ ಕಾವ್ಯಕಥೆಯೋ
ಲ್ಲ ಸುಳಿಯದೆ ಸುವ ಹೆಣ್ಣು ತಾನೆಂ
ತನೆನು ಶೋಭಿಪಳೆನ್ನುತಾ ಸತಿ ರೋದಿಸುತ್ತಿರಲು ೧೬

ಪಗಲಿರುಳು ರೋದಿಪ ಪದಿಬದೆಯು
ಮಿಗೆಯುಳಲ ಕಂಡಾ ಮಠಾಧಿಪ
ಮಗಳೆ ನೀನಳಬೇಡವೆನ್ನುತ ಗದ್ದುಗೆಗೆ ಹೋಗಿ
ಸೊಗದೊಳರ್ಚಿಸಿ ಸುಪ್ರಸಾದವ
ಮಿಗೆಕರುಣೆಯಿಂದಿತ್ತು ಹರಸುತ
ಮುಗುದೆ ನೀನಾದಿಗುರುವುವಂ ಬೇಡಿವನು ಭುಜಿಸೆಂದ ೧೭

ಬಂಜೆಬಂಜೆಯು ಬಂಜೆಯೆಂಬುವ
ಗಂಜನಕ್ಕೊಳಗಾಗಿ ಕೊರಗುವೆ
ಕುಂಜರಾಸ್ಯನ ಕಂಜಬಾಣನ ಬುದ್ಧಿರೂಪಗಳ
ಭಂಜಿಸುವ ವರಪುತ್ರನೆನ್ನಯ
ಕಂಜರದಿ ಜನಿಪಂತೆ ಹರಸೆಂ
ದಂಜಲಿಯು ಮುಗಿಯುತ್ತ ಬೇಡಿ ಪ್ರಸಾದ ಭುಂಜಿಸಿದಳ್ ೧೮

ಬುದ್ಧಿರೂಪವು ಮಾತ್ರವಿದ್ದೊಡೆ
ಸಿದ್ಧಿಸದು ಮುಂದೆನ್ನ ಕಾರ್ಯವು
ಸಿದ್ಧಗೊಳಿಸುವೆನೀಗಲೆಂದಾ ಗುರುವದರ ಜೊತೆಗೆ
ಸಿದ್ಧರಾಮನ ಕರ್ಮನಿಷ್ಠೆಯು
ಬುದ್ಧದೇವನ ದಯೆಯು ಬಸವನ
ಶುದ್ಧಭಕ್ತಿಯು ಪ್ರಭುವರನ ವೈರಾಗ್ಯ ಕರುಣಿಸಿದ ೧೯

ಗುರುವು ನೀಡಿದ ಶೇಷವಾಕೆಯು
ಸಿರಿಪ್ರೌಡೆಯು ಸೇರುತ್ತೆ ಬೆಳದಿರೆ
ಗುರುಪಯೋಧರಕಮುದ ತುಂಬನ್ನರ್ಥವಾಗುತಿರೆ
ಸರಸಿಜಾಕ್ಷಿಯು ಬಸಿರಿನಣುಗನ
ಕರಮೆಸೆವ ವೈಕಾಂತಿಯಾಕೆಯು
ಪೊರವೊಳಗ ಬೆಳಗುತ್ತ ಮೊಗದೊಳ್ಮಾರ್ಪೊಳೆಯುತಿತ್ತು ೨೦

ಆದಿಶಿವರಾತ್ರೀಶ ಘನಲಿಂ
ಗ್ಯಾದಿ ಸದ್ಗುರುವೃಂದ ಮಿಗೆಸಂ
ಪಾದಿಸಿದ ಜಪತಪದ ಸಿದ್ಧಿಯು ಪುಣ್ಯಫಲಪುಂಜ
ಮೋದದಿಂದಾ ಸತಿಯು ಗರ್ಭವ
ಸಾಧುರೂಪದಿ ಪೊಕ್ಕು ಬೆಳೆಯುತ
ಮೇದಿನಿಯು ಮೇಲವತರಿಸೆ ನವಮಾಸ ಕಾಯ್ದಿತ್ತು ೨೧

ಆ ಮಹಂತನು ಶಾಲಿವಾಹನ
ಭೂಮಿಶಕ ಗಜ ತ್ರಿ ಮದ ವಿಧು ನಳ
ನಾಮಸಂವತ್ಸರ ಭಾದ್ರಪದದೊಳು ಶುಕ್ಲಪಾಡ್ಯಮಿಯು
ಭೌಮವಾಸರ ಶುಭಮುಹೂರ್ತದಿ
ಭೂಮಿಗೈದಲು ಮಠದ ಮುಂದಿನ
ಸೋಮನಾಥನ ಭೇರಿ ಮೊಳಗಿತು ಮಂಗಳವ್ವ ಪಾಡೆ ೨೨

ಪುಟ್ಟಕಂದಗೆ ಹಾಕಿ ನೀರನು
ದಿಟ್ಟಿಬೊಟ್ಟನ್ನಿಟ್ಟು ಗುರುಕರ
ಕಿಟ್ಟು ಹನ್ನೆರಡನೆಯ ದಿನದೊಳ್ನಾಮವಿಡಿರೆನಲೀ
ಪುಟ್ಟನೇ ತಮ್ಮಯ ಘನಮಠಕೆ
ಶ್ರೇಷ್ಠನಹ ಸ್ವಾಮಿಯೆನಿಪನದಕೆ
ಪುಟ್ಟ ಸ್ವಾಮಿಯೆನುವ ಸುನಾಮವನಿಟ್ಟು ಕರೆದರು ೨೩

ಮಲ್ಲಿಕಾರ್ಜುನದೇವ ಸೊಗಡ
ಲಲ್ಲಿ ತೇಲುತ ಸುತ್ತಮುತ್ತಲ
ಹಳ್ಳಿಜನರೆಲ್ಲರನು ಕರೆಸೌತಣವನೇರ್ಪಡಿಸಿ
ಎಲ್ಲರೀತಿಯೊಳುಪಚರಿಸಿ ತ
ನ್ನೆಲ್ಲಧನಧಾನ್ಯವನು ಭಕ್ತಿಯೆ
ಳಲ್ಲಿಗಾಗಮಿಸಿದ್ದ ಗುರುಜಂಗಮಕೆ ನೀಡಿದರು ೨೪

ಕರುಣೆ ಸತ್ಕಲೆ ಶಾಸ್ತ್ರಪರಿಣತೆ
ವರನಿರಾಶೆಯು ಸುಗುಣ ಮಿಗೆಸೌಂ
ದರತೆ ಪೇಣ್ಬುಜ್ಞಾನ ಸುಪುಖತ್ವಮೆನೆ ಗುರುವರಗೆ
ಇರಲೆ ಬೇಕಾದೀ ಗುಣಂಗಳ
ಧರಿಸಿ ಬಂದಿಹನೀತ ಲೋಕದಿ
ವರಜಗದ್ಗುರುವೆನಿಪನೆಂಬುದ ಕಂಡರಾ ಗುರುವು ೨೫

ಅದಕೆ ಆ ಕಾರಣಿಕಶಿಶುವಂ
ಮುದದಿ ಶ್ರೀಮಠಕಿತ್ತು ಮುಂದದು
ಸದಮಲೋನ್ನತಿವಡೆದು ಲೋಕೋದ್ಧಾರವನ್ನೆಸಗೆ
ಒದಗಬೇಕೆಂದರುಹಿ ನೀತಿಯು
ಸೊದೆಯನುಣ್ಣಿಸಿ ಸರ್ವಲೋಗರ
ಹೃದಯ ಮಿಡಿಸುವ ತೆರದಿ ಬೆಳೆಯಿಸಿಕೊಡಲು ಪೇಳಿದರು ೨೬

ಜಾತಿಭೇದವನಳಿಸು ಸರ್ವರ
ಪ್ರೀತಿಸುತ ಕಾಣ್ಬರವನವರೊಳು
ಓತು ವಿದ್ಯಾದಾನಗೈಯುಚಿತಾನ್ನವನ್ನಿತ್ತು
ಜ್ಯೋತಿರೂಪನ ಬೆರೆವ ಮಾರ್ಗವ
ರೀತಿಯಿಂ ಕಲಿಸೆನ್ನುತೆರೆವ
ಳ್ನೀತಿಸುಧೆಯಂ ಕಿವಿಗೆ ಪಾಲೆರೆಯುತ್ತವನ ಬಾಯ್ಗೆ ೨೭

ತೇಜಬೀರುತ ಶುಕ್ಲಪಕ್ಷದ
ರಾಜನೋಲ್ದಿನದಿನಕೆ ಬೆಳೆವನ
ನೈಜಸುಭಗತೆ ನೋಡಿ ನಿಜಗುರು ರಾಜನೋಲ್ಪೆಳೆಸೆ
ವ್ಯಾಜವಿಲ್ಲದೆ ಸಾಜದೊಲವಿಂ
ದಾ ಜಗದ್ಗುರು ಮಗುವ ಪೊರೆವುದು
ಸೋಜಿಗವಿದಲ್ತೆನುತ ಪುರಜನ ಗೊಣಗುತಿರ್ದರಲಾ ೨೮

ಏನು ಕೊಟ್ಟರು ತಾನು ತಿನ್ನದೆ
ದೀನಜನರ್ಗೈತರಲು ಪೂರ್ಣವ
ಸಾನುರಾಗದೊಳಿತ್ತು ನಲಿವಂ ತಿನ್ನುತಿರಲವರು
ನಾನುನನ್ನದುಯೆಂಬ ಸ್ವಾರ್ಥವ
ಕಾಣಿಮಾತ್ರವನಿಟ್ಟುಕೊಳ್ಳದೆ
ಕ್ಷೋಣಿಹಿತಕೆಯೆ ಬಾಳ್ವುದಾತಗೆ ಹುಟ್ಟುಗುಣವೇನೋ ೨೯

ಉಳಿದ ಮಕ್ಕಳು ಗೋಲಿಗೆಜ್ಜುಗ
ಗಳಲಿ ಮೈಮರೆತಾಡಿಪಾಡುತ
ಕಳೆಯುತಿರೆ ತಮ್ಮೆಲ್ಲ ಕಾಲವನೀತನೋ ಮಠದಿ
ಸುಳಿತು ಮೌನದಿ ಶರಣವಾಙ್ಮಯ
ದೊಳಗೆ ಮುಳುಗಿಹನಿಲ್ಲವಾದೊಡೆ
ಚಲಿಪ ಮನವನು ನಿಲ್ಲಿಸೊಕ್ಕಡೆ ಧ್ಯಾನಿಸುತ್ತಿರ್ದಂ ೨೦

ಒಮ್ಮೆ ಪೋಗಿವ ಕಾಡುಮಂಠದೊಳು
ಒಮ್ಮನೊಕ್ಕಡೆ ಧ್ಯಾನದಲ್ಲಿರೆ
ತಮ್ಮಣಾಗಸಿರುಳಾದೊಡಂ ಬರಲಿಲ್ಲವನೆ ಗುರುವು
ಕಮ್ಮನಟ್ಟಲು ಹುಡುಕೆಯೊಳ್ಗಳು
ತಮ್ಮ ಗುರುಗಳ ತಪದ ಫಲವೃಂ
ಜೊಮ್ಮಗೆಯು ಮೈದಾಳಿ ಪೊಳೆವಂಥವನ ನೋಡಿದರು ೨೧

ಚಾರರೈತಂದೊರೆದ ವಾರ್ತೆಯ
ಚಾರುಗುರುವರ ಕೇಳಿ ಮನದೊಳ
ಪಾರಸಂತಸವಾಂತು ಮುಂದಿನ ಮಠದ ಕೀರ್ತಿಯನು
ಮೇರುಶಿಖರಕ್ಕೊಯ್ಯೆ ಬಂದಿಪ
ಕಾರಣಿಕನಿವನೆಂದು ಬಗೆಯುತ
ಸಾರವಿದ್ಯೆಯನಿತ್ತು ಮೂರ್ತಿಯ ಕಡೆಯೆ ಬಯಸಿದರು ೨೨

ನರರ ದುಷ್ಕೃತ ದೂರದೂಡುತ
ಪರದ ಮಾರ್ಗದೊಳವರ ನಡೆಸುತ
ಧರೆಯ ಯೋಗಕ್ಷೇಮಕಾಗಿಯೆ ದುಡಿದ ಘನಮಠದ
ಮೆರೆವ ಕೀರ್ತಿಯ ಜೇಸೆ ನೂರ್ಮಡಿ
ಗುರುವಿಗಿರಬೇಕಾದ ಬಿಜ್ಜೆಯ
ದೊರಕಿಸಲ್ಕನೆ ಭವ್ಯಮೈಸೂರ್ಗೊಡನೆ ಕಳುಹಿದರು ೨೩

ನಗರದೊಳು ತನಿಮನೆಯ ಮಾಡುತ
ಬಗೆಗೆ ಹಿಡಿಸುವ ರೀತಿ ಬೋಧಿಪ
ಮಿಗೆಪೆಸರ್ವಡೆದಂಥ ಪಲವಿದ್ವಾಂಸರಂ ಕರೆಸಿ
ಸುಗಮಮಾರ್ಗದಿ ಸಾರನಿಗಮಾ
ದಿಗಳ ಬೋಧಿಸಿರೆನುತ ನೇಮಿಸಿ
ಸೊಗದೊಳಿರೆ ಬೇಕಾದನಿತನುಂ ಕೊಡುತಲಿರ್ದರಲಾ ೨೪

ಬರಿದೆ ನೆನೆದಾಕ್ಷಣಕೆ ಕಾರ್ಯವ
ಕರಗತಂಗೊಳಿಸೀತನೆಂಬುವ
ಸರಿತು ಶಿವರಾತ್ರೀಶಸದ್ಗುರು ನೆಚ್ಚಿನಣುಗನಿಗೆ
ಬರಿಸ ಪನ್ನೆರಡಾಗದಿರ್ದರು
ಪೊರಲು ತಪ್ಮಯು ಪಂಠದ ಭಾರವ
ಪರಪುಸೀತವನಿತ್ತು ವಿರಮಿಸಲಿಚ್ಛಿಸಿದರೊಡನೆ ೩೩

ಭರದಿ ಕರೆಯಿಸಿ ಗ್ರಾಮಮುಖ್ಯರ
ಗುರುಚರಂತರ ಶಾಲಿವಾಹನ
ವರಶಕದ ಗ್ರಹವೇದಗಜವಿಧು ಪ್ರಭವವತ್ಸರದ
ಪರಮಫಾಲ್ಗುಣ ಶುಕ್ಲಪಕ್ಷದ
ಮೆರೆವ ತದಿಗೆಯು ಶುಕ್ರವಾರದಿ
ಗುರುವು ಪಟ್ಟಸ್ಥಲಮುತ್ರ ಬೋಧಿಸಿ ದೀಕ್ಷೆಯಿತ್ತಾಗಲಾ ೩೭

ಆದಿಶಿವರಾತ್ರೀಶರೋಲಿವ
ಮೇದಿನಿಗೆ ವರಪಾರಪೂರ್ಥವ
ಬೋಧಿಸುತ ಸದ್ಭಕ್ತ ರಾಜೇಂದ್ರನೊಲು ಭೂಓತವ
ಸಾಧಿಸುವನೆಂದರಿದುಭಯಮಓ
ಮೋದಯುರ ನಾಮಂಗಳ ಕೂಡಿಸಿ
ಮೋದದಿಂ ಶಿವರಾತ್ರಿರಾಜೇಂದ್ರರೆಸ ವರಸಿದರು ೩೭

ಶ್ರೀಭವಾನಿಥವನ ಸಮನೋ
ಲ್ಲೋಭಿಸುತ ಶಿವರಾತ್ರಿರಾಜೇಂ
ದ್ರಾಭಿಧಾನು ಪಡೆದು ಸಿಂಹಾಸನವನೇರೆ ವಟು
ಶೋಭನವ ಪಾಡುತಲುಘೆಯೆನುತ
ಶೋಭೆ ತಂದಾ ಸಭೆಯೊಳಂಗು
ಲ್ಯಾಭರಣಮಕುಟವನಿರಿಸಿ ಗುರು ಪಟ್ಟಗಟ್ಟಿದರು ೩೮

ಕಟ್ಟಿ ಪಟ್ಟವನಟ್ಟಹಾಸದಿ
ಶ್ರೇಷ್ಠರಜತಾಂದೋಲನದಿ ನವ
ಪಟ್ಟಚಿಹ್ನದ ಬಟ್ಟಮಕುಟವನಿಟ್ಟು ಬಟ್ಟೆಯೊಳು
ಕೊಟ್ಟುತಲಿ ಪಲಸೇರಿಜಾಗಟೆ
ತಟ್ಟುತಲಿ ಕಂಸಾಳೆತಮ್ಮಟೆ
ನೆಟ್ಟನವರನು ಮೆರೆಸಿ ಜನ ಸಂತುಷ್ಟಗೊಂಡರಲಾ ೩೯

ಬಂದ ಸಾವಿರಗಟ್ಟಲೆಯು ಜನ
ಸಂದಣಿಗೆ ಮೃಷ್ಟಾನ್ನಭೋಜನ
ದಿಂದ ತಣಿಯಿಸಿ ಮೇಣ್ಬೆಜಯಿಸಿದ ಗುರುಚರಂತರಿಗೆ
ಸಂದಿಸಿತ್ತತಿಭೂರಿದಕ್ಷಿಣೆ
ಬಂಧುರದಿ ಗೌರವಿಸಿ ಬೀಳ್ಕೊಡು
ತೆಂದು ಸರ್ವರು ಕೀರ್ತಿಯುತನಾಗೆಂದು ಹರಸಿದರು ೪೦

ಕೆಲದಿನಂಗಳ ಕಳೆದ ಶಿಷ್ಯನ
ಬಲುವು ಜಾಣ್ಮೆಯನೋಡಿ ಹಿಗ್ಗುತ
ಉಳಿದ ಬಿಜ್ಜೆಯು ಕಲಿಯಲವರನು ಮತ್ತೆ ಮೈಸೂರ್ಗೆ
ಕಳುಹಿ ತಮ್ಮಯ ಶಿಷ್ಯ ಸೊಗದಿಂ
ನೆಲಸಿ ನಗರದಿ ಸಕಲವಿದ್ಯೆಯ
ಕಲಿಯೆ ಬೇಕಾದನಿತನುಂ ಕಳುಹಿಸುತಲಿರ್ದರಲಾ ೪೧

ಇಂತು ಕಳುಹಿದ ಪರಿಕರಂಗಳ
ಸಂತಸದಿ ತಾವೋರ್ವರುಣ್ಣದೆ
ಚಿಂತೆಯಿಂ ಪರಿತಪಿಪ ಬಡವಿದ್ಯಾರ್ಥಿಗಳಿಗಿತ್ತು
ಕಂತುಹರನಿಹ ಹೆದರದಿರಿ ನಿ
ಶ್ಚಿಂತೆಯಿಂ ನಮ್ಮೊಡನೆ ನೆಲೆಸುತ
ಶಾಂತಿಯಿಂದಭ್ಯಸಿಸೆನುತವರ ಪೊರೆದರೊಲುಮೆಯೊಳು ೪೨

ಪಾರಮಾರ್ಥದ ತಿರುಳನೊರೆಯುವ
ಸಾರಸಂಸ್ಕೃತವಿಷಯದೊಂದಿಗೆ
ಬೇರೆ ವಿಜ್ಞಾನಾಂಗ್ಲವಿಷಯಾದಿಗಳನುಂ ಬಿಡದೆ
ಗೌರವಾದರದಿಂದ ಕಲಿಯುತ
ಧಾರುಣಿಯು ನಡೆಯುರಿದು ಲೌಕಿಕ
ಪಾರಮಾರ್ಥವ ಕೂಡಿ ನಡೆಸಿದ ಜಾಣರ್ಮೈಯುಹರು ೪೩

ಪರಮಪಾಕ್ಕೋವಿದರುಮಾಗಮ
ಪರಿಣತರುಮಾಚಾರಸಂಪ
ನ್ನರುಮುಪಮಶಿವಾನುಭವಿಗಳುಮಖಿಳವಿದ್ಯೆಯೊಳು
ಸರಸತಿಯ ವರಪುತ್ರರುಮೆನಿಸಿ
ಮೆರೆದ ಗೌರೀಶಂಕರಮಹಾ
ಗುರುಗಳಿರ್ದರು ಕಾಶಿಯೊಳ್ಬಹುಕೀರ್ತಿ ಗಳಿಸಂದು ೪೪

ಅವರ ಕೀರ್ತಿಯು ಕೇಳಿ ಹರುಷದೊ
ಳವರ ಬಳಿಯೊಳಿ ಬಿಜ್ಜೆಗಲಿಯುವ
ತವಕ ಪೆರ್ಚಲು ಹಿರಿಯ ಗುರುಗಳ ಕೇಳ ಸಮ್ಮತಿಯ
ತವೆಕೊಡುವರೋಯಿಲ್ಲವೋಯೆನೆ
ಅವರ ಗಮನಕೆ ತಾರವಲೆ ನಿಲ
ಯುವನು ತೊರೆದಾ ಗುರುವ ಸೇರಲು ಕಾಶಿಗೈದಿದರು ೪೫

ಎಳೆಗರುವ ಕಂಡೊಡನೆ ಸಂತಸ
ಗೊಳುವ ಪಶುವೋಲ್ಮುದ್ದುಗುವರನು
ಬಳಿಸುಳಿಯೆ ತೋಷಿಪ ಜನನಿಯೊಲ್ವಿರಹವೇದನೆಯೊಳ್
ಸುಳಿದ ಪತಿಯಂ ನೋಡಿ ಹರ್ಷಿಪ
ಎಳೆಯಳೋಲ್ಸುತ್ತೂರು ಕಿರಿಗುರು
ಗಳನು ದರ್ಶಿಸಿದಾ ಮಹಂತರು ಮೋದಗೊಂಡರಲಾ ೪೬

ಇಂತು ತಮ್ಮೆಡೆಗೈದಿದವರನು
ಸಂತಸದಿ ಬರಮಾಡಿಕೊಳ್ಳುತ
ಲೆಂತಿಹರು ಹಿರಿಗುರುಗಳೆಂದು ವಿಚಾರಿಸುತ ಬೇಗ
ಶ್ರಾಂತಿ ಕಳೆಯಿರಿ ಮೈದೊಳೆದು ನಿ
ಶ್ಚಿಂತೆಯಿಂ ಪೂಜಾಪ್ರಸಾದವ
ನಾಂತು ಸೊಗದಿಂದಿರಿಯೆನುತ್ತುಪಚಾರವೆಸಗಿದರು ೪೭

ಇತ್ತ ಹಿರಿಗುರು ತಮ್ಮ ಪ್ರಿಯಶಿ
ಷ್ಯೋತ್ತಮನ ಕಾಣದೆ ಕಡುಕೊರಗು
ತೆತ್ತ ಪೋದರೊ ಏನೊಯೆನ್ನುತ ತಳಮಳಿಸುತಿರಲು
ಉತ್ತರದ ಕಾಶಿಗೆ ತೆರಳಿದರೆ
ನುತ್ತರಿದವರನರಸಿ ಕರೆತರ
ಲತ್ತ ಹೊರಟರು ತಮ್ಮ ಕಾರ್ಯವನೆಲ್ಲ ಬದಿಗೊತ್ತಿ ೪೮

ತಳಮಳಿಸುತ್ತೈತಂದ ಗುರುಗಳ
ಕಳವಳವ ಕಂಡೊಡನೆ ಕಿರಿಗುರು
ಗಳನು ಪಕ್ಕಕೆ ಕರೆದವರ ಬಹುವಾಗಿ ಸಂತೈಸಿ
ಬಳಲುತಿಲ್ಲಿಯವರೆಗೆ ಬಂದಿಹ
ತಿಳಿಮನದ ಸದ್ಗುರುವ ನೋಯಿಸ
ದಲೆ ಮರಳಿರೆನ್ನುತ ಹಿತವಚನ ಪೇಳ್ದರೀ ತೆರದಿ ೪೯

ಕಾಶಿವಿದ್ಯೆಯ ಕಲಿತು ಕ್ಷಿತಿಯೊಳು
ಘೋಷನಿಸಿಕೊಂಬುವರ ಬವಲಿಗೆ
ದೇಶಿಗರ ಸರ್ವಾರ್ಥವೃದ್ಧಿಗೆ ಶ್ರಮಿಸೆ ಸಾರ್ಥಕವು
ಬೇಸರಿಸದದಕಾಗಿ ನೀವತಿ
ತೋಷದಿಂ ಮೈಸೂರ್ಗೆ ತೆರಳುತೆ
ಲೇಸೆಸಗಿ ಗ್ರಾಮೀಣರಿಗೆ ವಿದ್ಯಾನ್ನವನ್ನಿತ್ತು ೫೦

ಹಿಂದಿರುಗಿ ಮೈಸೂರ ಸೇರುತೆ
ಮುಂದುವರಿಸುತಲಿರಲು ವಿದ್ಯೆಯ
ನೊಂದುದಿನ ಕ್ಯಾತ್ಸಳ್ಳಿನಿಲಯದ ಮುಂದೆ ವಟುವೋರ್ವ
ಬೆಂದು ಬಡತನದಿಂದ ಬಿಜ್ಜೆಯ
ಮುಂದುವರಿಸಲು ಸಾಧ್ಯವಿಲ್ಲದೆ
ಕಂದಿ ಜ್ವರದಿಂ ಕುಂದಿ ಕೆಡೆದಿಹುದನ್ನು ನೋಡಿದರು ೫೧

ಕರುಣೆದಾಳುತ ನಿಲಯಕವನನು
ಕರೆಸಿ ಮಲಗಿಸಿ ಜವದಿ ವೈದ್ಯರ
ಬರಿಸಿಯಾತಗೆ ಮದ್ದು ಪಥ್ಯವ ಕೊಡಿಸಿ ಸಂತೈಸಿ
ಗುರುವು ಕಾಶಿಯೊಳುಸುರ್ದ ಮಾತನು
ಸ್ಮರಿಸುತಂದೇ ಹಳ್ಳಿಬಡಹುಡು
ಗರಿಗೆ ಪುರದೊಳಗೊಂದು ನಿಲಯವ ತೆರೆಯೆ ಬಯಸಿದರು ೫೨

ಗಳದ ರುದ್ರಾಕ್ಷಗಳ ಮೇಲಿಹ
ಹೊಳೆವ ಚಿನ್ನವ ತೆಗೆಸಿ ಮೇಣ್ಬೆರ
ಳೊಳಗೆ ರಾಜಿಸುತಿರ್ದ ರತ್ನಾಂಗುಲಿಯೆ ವಿಕ್ರಮಿಸಿ
ಕೆಲದ ಮನೆಯಂ ಬಾಡಿಗೆಗೆ ಪಡೆ
ಕೊಳುತ ಪರಿಕರಗಳನು ತಂದಾ
ಗಳೆಯೆ ವಿದ್ಯಾರ್ಥಿನಿಲಯವ ತೆರೆಸಿದರು ಕಿರಿದಾಗಿ ೫೩

ದಿಟ್ಟತನದಿಂ ನಡೆಸಿ ನಿಲಯವ
ಕಷ್ಟವೆಷ್ಟೇ ಬಂದೊಡಂ ಸಹ
ಪಟ್ಟುಬಿಡದಲೆ ಬಂದಪಣಗಳನು ಮೆಟ್ಟಿ ಮುಂದರಿದು
ಶ್ರೇಷ್ಠರೀತಿಯ ವಸತಿಪೋದನ
ಕೊಟ್ಟು ಮಕ್ಕಳ ಸಾಕಿಸಲಹುತ
ನೆಟ್ಟರೈ ನಿಲಯಗಳ ನರಸೀಪುರ ನಗರದೊಳಗುಂ ೫೪

ಈ ತೆರದ ಸರ್ವಾನುಕೂಲವ
ನೋತು ನೀಡುತ ಶಾಂತಿಯಿಂದಿಹ
ಖ್ಯಾತನಿಲಯವು ನಗರದಲ್ಲಿನೆಯೆಂದು ತಿಳಿದೊಡನೆ
ಆತುರದಿ ನೂರಾರುಮಕ್ಕಳು
ಜೋತುಬೀಳಲು ಬಿಕ್ಷೆಯಾರ್ಜಿಸೆ
ಪ್ರೀತಿಯೊಂದಲ್ಲರ್ಗೆ ಶ್ರೀಗುರು ಸ್ಥಳವ ನೀಡಿದರು ೫೫

ಅಧಿಕವಾಗಲು ಸಂಖ್ಯೆ ನಿಲಯದೊ
ಳದಕೆ ತಕ್ಕಂತಿಲ್ಲದಿರೆ ಸ್ಥಳ
ವದಗೆಡುವುದೆಂದರಿತ ಕಿರಿಗುರು ಹಿರಿಯರಿಗೆ ತಿಳಿಸೆ
ಮುದದಿ ಹಿರಿಗುರು ಕೊಡಿಸಿಕೊಟ್ಟರು
ಪವಪೆಸೆವ ಸುವಿಶಾಲ ಗೃಹವ
ನ್ನದರ ಜೊತೆ ಮಂಡಕಳ್ಳಿ ಜಹಗೀರ್ ದತ್ತಿ ಬಿಟ್ಟರಲಾ ೫೬

ಅಂದು ಹೊಂದಿದ ದೊಡ್ಡ ಕಟ್ಟಡ
ವಿಂದು ಮೆರೆದಿದೆ ನಗರಮಧ್ಯದಿ
ಚೆಂದದಿಂ ಜನರದನು ಮಾಮನೆಯೆಂದು ಕರೆಯುವರು
ಮುಂದೆ ದೇಶಕೆ ಹಲವು ಗಣ್ಯರ
ಕುಂದುವಡೆಯದ ಮಂತ್ರಿಮಾನ್ಯರ
ತಂದು ವಿದ್ಯಾರ್ಥಿನಿಲಯಂಗಳ ಮಕುಟವೆನಿಸಿಹುದೈ ೫೭

ಘನತೆವೆತ್ತುಪಕುಲಪತಿಗಳಂ
ಜನಮನವ ಗೆದ್ದಂಥ ಮಂತ್ರಿಗ
ಳನನುಪಮಕವಿವರ್ಯರಂ ಹಲವಾರುಶಾಸ್ತ್ರಗಳ
ಘನಪರಿಣತರನತಿಪೆಸರ್ವಡೆ
ದನುನಯದ ವೈದ್ಯನಿಪುಣರನತಿ
ವಿನಯಸಂಪನ್ನಾಭಿಯಂತ್ರರನಿತ್ತ ನಿಲಯವದು ೫೮

ಭರದಿ ಪೆರ್ಚುತಲಿರ್ದ ಮಕ್ಕಳ
ಪೊರೆಯೆ ತಮ್ಮಯ ಸರಕು ಸಾಲದೆ
ಪರಿತಪಿಸಿ ಸಂಕಷ್ಟಕೊಳಗಾಗೊಂದುದಿನ ತಮ್ಮ
ಕೊರಳ ಚಿನ್ನದ ಕರಡಿಗೆಯನುಂ
ಗಿರವಿಗಿಡಬೇಕಾಗಿ ಬಂದರು
ಮರುಗದಲೆ ಮಕ್ಕಳ ಪೊರೆದ ಶ್ರೀಗುರುವನೇವೇಳ್ವೆಂ ೫೯

ಬವಣೆಪಟ್ಟೀ ತೆರದಿ ಮೊದಲೊಳು
ಶಿವಳುತಾನಂತರದಿ ಜವದೊಳು
ತವೆಬೆಳೆದ ವಿದ್ಯಾರ್ಥಿನಿಲಯಗಳೆಷ್ಟೆನುತ ಪೇಳ್ವೆಂ
ಜವದೊಳೀತೆರ ಬೆಳೆದರುಂ ಸಹ
ಸವೆಯುತಿರೆ ಶಿವಶರಣಸಂಸ್ಕೃತಿ
ಭವನ ಧರ್ಮವನುಳಿಸಿ ಬೆಳೆಸುವ ಬಟ್ಟೆಗರಸಿದರು ೬೦

ಇದಕೆ ನಮ್ಮಯ ಧರ್ಮಸಂಸ್ಕೃತಿ
ಮುದದಿ ಬೋಧಿಸುವಂಥ ವಿದ್ಯಾ
ಸದನಗಳ ತೆರೆಯುವುದೆ ಶೀಘ್ರೋಪಾಯವೆಂದರಿದ
ಸದಮಲಾಂತಃಕರಣ ಸದುಹೃದ
ಯದಮಿತದಯಾಘನರ ಶ್ರಮದಿಂ
ವಿದಿತಶಿವರಾತ್ರೀಶವಿದ್ಯಾಪೀಠವುದಯಿಸಿತು ೬೧

ಪೀಠದಾಶ್ರಯದಲ್ಲಿ ಹತ್ತಾ
ಕೋಟಿಗಟ್ಟಲೆ ವ್ಯಯಿಸಿ ರಾಜ್ಯದಿ
ಸಾಟಿಗಾಣದನೇಕವಿದ್ಯಾಸದನಗಳ ಕಟ್ಟಿ
ತೇಟುಬಿಜ್ಜೆಯ ಕಲಿಸುವಂತಹ
ಪಾಠಶಾಲೆಗಳಂ ತೆರೆದು ಕ
ರ್ನಾಟಕದಿ ಪರಮೋಜ್ವಲಯಶಃಕೀರ್ತಿ ಗಳಿಸಿದರು ೬೨

ಸ್ವಸ್ವರೂಪವನರಿದ ಬಳಿಕೀ
ವಿಶ್ವಕಲ್ಯಾಣಕ್ಕೆ ಫಲಸ
ರ್ವಸ್ವವರ್ಪಿಸಿ ಶರ್ವನೊಡವೆರದಾದಿಗುರುವರರ
ಭಾಸ್ವದುಜ್ವಲಕೀರ್ತಿ ಪೆರ್ಚಿಸಿ
ವಿಶ್ವದಾದ್ಯಂತವನು ಪಸರಿಸಿ
ಶಾಶ್ವತಂಗೊಳಿಸಲು ಜಯಂತಿಯ ಗೈಯುತೊಡಗಿದರು ೬೩

ಬಳಿಕ ತಾಂತ್ರಿಕವಿದ್ಯೆಯೊಳು ಹಿಂ
ದುಳಿದ ಮೈಸೂರ್ಜಿಲ್ಲೆಯೊಳು ಭೂ
ತಳದಿ ಸುಶ್ರೇಷ್ಠವಹ ತಾಂತ್ರಿಕವಿದ್ಯೆ ಬೋಧಿಸುವ
ಕೆಲದ ರಾಜ್ಯದ ಪಟುಗಳಂ ಸಹ
ಸೆಳೆಯುವಂತಹ ಖ್ಯಾತವಿದ್ಯಾ
ನಿಲಯವನು ರಾಜರ ಹೆಸರಿನಲಿ ಕಟ್ಟಿ ಮೆರೆಸಿದರು ೬೪

ಗುರುವರರ ದಾಸೋಹದೊಲವಂ
ಗುರುತರದ ಕಾಯಕಸುನಿಷ್ಠೆಯಾ
ನುರೆಪರೀಕ್ಷಿಸಿ ಮೆಚ್ಚಿ ಶ್ರೀಜಯಚಾಮರಾಜನೃಪ
ಕರಮುಗಿದೊಲಿದು ರಾಜಗುರುತಿಲ
ಕರೆನೆ ಭಕ್ತಿಸಮರ್ಪಣೆಯ ಘನ
ತರದ ಸನ್ನದ್ದಿತ್ತು ಮನ್ನಿಸಿ ತೋಷಮಾಂತರಲಾ ೬೫

ಬೆಳೆದ ಮಕ್ಕಳ ವಿದ್ಯೆಬುದ್ಧಿಯ
ಬೆಳೆಸಿ ತೃಪ್ತಿಯ ತಂದುಕೊಳ್ಳದೆ
ಎಳೆಯ ಮಕ್ಕಳ ಸರ್ವತೋಮುಖ ಬೆಳವಣಿಗೆಗಾಗಿ
ಕಳಕಳಿಯ ತೋರೆಲ್ಲರೀತಿಯ
ಸಲಕರಣೆಸಾಮಗ್ರಿ ಹೊಂದಿಹ
ಪಲವು ಬಾಲಜಗತ್ತುಗಳ ನಿರ್ಮಿಸಿದರ್ ಭರದಿ ೬೬

ಜಗದಿ ಸ್ವಾಸ್ಥ್ಯವ ಕಾಯೆ ಪ್ರಥಮತ
ನಿಗದಿ ಧರ್ಮವ ಕಾಯಬೇಕೆನೆ
ಬಗೆದು ಧರ್ಮಕೆ ಪೋರಿಕಾದುವ ಮತದ ಮಟುಗಳನು
ಮಿಗೆತಯಾರಿಪ ಧರ್ಮಕೇಂದ್ರವ
ಸೊಗದಿ ನಿರ್ಮಿಸೆ ಬಯಸಿ ಮೈಸೂ
ರ್ನಗರದೊಳಗತಿಶೋಭಿಸುವ ಗುರುಕುಲವ ತೆರೆಸಿದರು ೬೭

ಬಳಿಕ ಮಕ್ಕಳ ನೆತ್ತಿಯೊಂದನೆ
ಬೆಳೆಪ ಸದನಂಗಳನೆ ಮಾತ್ರವೆ
ಬೆಳೆಸಲೇಂ ಸುಖಮೆಂದು ಭಾವಿಸುತೊಡನೆ ಹದನರಿದು
ಒಳಿತು ರೀತಿಯೊಳೊಡಲ ದಾರ್ಢ್ಯವ
ನೊಲಿದು ಕಾಯುವ ತೆರನ ಬೋಧಿಪ
ಸಲೆಶರೀರಿಕ ಶಿಕ್ಷಣದ ಕಾಲೇಜು ಕಟ್ಟಿದರು ೬೮

ಒಡಲು ರೋಗದಿ ಕೆಡಲು ಬೇಗನೆ
ತಡೆಯೆ ಮಾರಣ ದುಃಖಹಾನಿಯು
ಕೊಡಲವಶ್ಯಕಮಾದ ಮದ್ದು ತಯಾರಿ ತರಬೇತಿ
ಕೊಡುವ ಕಾಲೇಜೆರಡ ನಿರ್ಮಿಸ
ಲೆಡೆಬಿಡದೆ ತೊಡರಡರಿಸಿದೊಡಂ
ಬಿಡದೆ ಮೈಸೂರೂಟಿಯೊಳು ನಿರ್ಮಿಸಿದರ್ ಜವದಿ ೬೯

ಚಿಕ್ಕವಯಸಿನ ಮಕ್ಕಳಿಗೆ ಬಲು
ಚೊಕ್ಕರೀತಿಯೊಳಕ್ಕರಿಂದಲಿ
ಮಿಕ್ಕಬಿಜ್ಜೆಯ ಬೋಧಿಸುವ ಶಿಕ್ಷಣವ ಕೊಡುವಂಥ
ದಕ್ಷಕಾಲೇಜೆರಡು ನಗರಕೆ
ತಕ್ಷಣಕೆ ಬೇಕೆಂದು ಮೊರೆಯಿ
ಟ್ಪ್ರಾಕ್ಷಣವೆ ತೆರೆದರು ಜಗದ್ಗುರು ಕಷ್ಟಲೆಕ್ಕಿಸದೆ ೭೦

ಹೆಣ್ಣುಮಕ್ಕಳು ಬಿದ್ದು ಮೌಢ್ಯದಿ
ಮಣ್ಣುಮುಕ್ಕುತ ಬಾಳದೊಡದೆ
ಹೊನ್ನಜೀವನ ನಡೆಸಿ ಸಹಕರಿಪಂಥ ವಿಜ್ಞಾನ
ಗಣ್ಯತೆಯ ಗಳಿಸೆಲ್ಲರಿಂ ಬಹು
ಮಾನ್ಯತೆಯ ಪಡೆವಂಥ ಸತ್ಕಲೆ
ಯನ್ನು ಬೋಧಿಪ ಮಹಿಳೆಯರ ಕಾಲೇಜು ಕಟ್ಟಿದರು ೭೧

ಇಂದು ಪರದೇಶೀಯವೆಣ್ಗಳು
ಮುಂದುವರಿದಿರೆ ತಾಂತ್ರಿಕತೆಯೊಳು
ಹಿಂದೆ ಬಿದ್ದಿರಲೆಮ್ಮವೆಣ್ಗಳು ಮರುಗಿ ಎಚ್ಚೆತ್ತು
ಮುಂದೆ ಬಹ ತೊಡರೆಡರನೆಣಿಸದೆ
ಚೆಂದದಿಂ ತನಿಯಾಗಿ ಕಲಿಯಲು
ಸುಂದರಾಂಗನೆಯರಿಗೆ ತಾಂತ್ರಿಕಶಾಲೆ ತೆರೆಸಿದರು ೭೨

ಬರಿದೆ ಪದವಿಯ ಗಳಿಸಿಯುದರಿಂ
ಹೊರೆಯಲಾರದೆ ಹೊಟ್ಟೆಯಂ ಬಲು
ಪರಿತಪಿಪ ನೂರಾರುಮಕ್ಕಳ ಕಂಡು ಮರುಮರುಗಿ
ಅರಿತ ಬಿಜ್ಜೆಯ ಬಲದಿ ತಮ್ಮಯ
ಚರಣಗಳ ಮೇಲಾತು ನಿಲ್ಲುವ
ಪರಮತಾಂತ್ರಿಕತೆಗಲಿಸುವ ಸದನಗಳನೆತ್ತಿದರು ೭೩

ತನುಮನಂಗಳ ವ್ಯಾಧಿಯಾಧಿಗ
ಳನು ತೊಲಗಿಪ ತೆರನ ಕಾಣದೆ
ಮನದಿ ನೋಯುತ ನರಳಿ ಸಾಯುವ ಜನಗಳಿಗೆ ಮರುಗಿ
ತನಿ ಸುಸಜ್ಜಿತಕೋಣೆ ಮೇಣಾ
ಧುನಿಕಯಂತ್ರೋಪಕರಣದೊಡಂ
ಘನನಿಪುಣಸದ್ವೈದ್ಯರಿಪ್ಪಾಸ್ಪತ್ರೆ ಕಟ್ಟಿದರು ೭೪

ಚಿಂತಿಸುವ ಪ್ರತಿರೋಗಿಯೊಳು ತ
ನ್ನಂತರಂಗದ ದೈವ ಕಾಣುತ
ಶಾಂತಭಾವದಿ ಸೇವೆಯೆಸಗುವ ಕಾಯಕವ ಕಂಡು
ಕಂತುಹರ ತಾ ಮೆಚ್ಚಿಯುಪುದೆಂ
ಬಂಥ ವೈದ್ಯರನೀಯುವತಿಪೆಸ
ರಾಂತ ಘನತರವೈದ್ಯವಿದ್ಯಾಸಂಸ್ಥೆ ನೀಡಿದರು ೭೫

ಜನರು ತಮ್ಮಯ ಪಲ್ಲುನೋವ
ನ್ನನುಭವಿಸಲಾರದೆಯೆ ಸಂತತ
ಮನದಿ ನೋಯುತಲಿದ್ದುದಂ ಕಂಡವರು ಬಲುಮರುಗಿ
ಅನುನಯದಿ ಪರಿಹಾರ ನೀಡುವ
ವಿನಯಸಂಪನ್ನರ ತಯಾರಿಪ
ಘನತರಮಹಾವಂತವಿದ್ಯಾಸಂಸ್ಥೆ ತೆರೆಸಿದರು ೭೬

ಹಿಟ್ಟುಬಟ್ಟೆಯು ವಸತಿವಾಹನ
ನೆಟ್ಟಗಿದ್ದರೆ ಸಾಕುಯೆನ್ನುವ
ಕೆಟ್ಟಭಾವನೆಯಳಿಸಿ ಜನರೊಳು ಸಂಸ್ಕೃತಿಯು ಬೆಳೆಪ
ನಿಟ್ಟಿನೊಳು ಸಹಕರಿಸುವಂತಹ
ಶ್ರೇಷ್ಠತರಸಂಗೀತಸಭೆಯಂ
ಕಟ್ಟಿ ಜನತೆಗೆ ನಾದಯೋಗದ ಮಾರ್ಗ ತೋರಿದರು ೭೭

ಭಾರತೀಯಪರಂಪರಾಗತ
ಸಾರತರಸಾಹಿತ್ಯಸಂಸ್ಕೃತಿ
ವಾರಿಧಿಯನೊಳಗೊಂಡ ಸಂಸ್ಕೃತಭಾಷೆಗಲಿಯಲ್ಕೆ
ದಾರಿಗಾಣದೆ ಪರಿತಪಿಪ ನೂ
ರಾರು ವಿದ್ಯಾರ್ಥಿಗಳಿಗೆನೆ ಹ
ತ್ತಾರು ಸಂಸ್ಕೃತಶಾಲೆಗಳ ತೆರೆದಾಂತರ್ಕೆ ತೃಪ್ತಿ ೭೮

ಆದಿಶಿವರಾತ್ರೀಶ ಮೊದಲೊಳು
ಮೋದದಿಂ ಶಿವಯೋಗ ಸಾಧನೆ
ಗೈದು ಕಡೆಗೆ ಸಮಾಧಿಗೊಂಡಿಹ ಕಾಡುಮಠ ಬಹಳ
ತೇದುಹೋಗಿರೆ ಕಿಡುಹಿ ವಿಸ್ತರ
ವಾದ ತಳಹದಿ ಮೇಲೆ ಸುಂದರ
ಸೌಧ ನಿರ್ಮಿಸಿ ಮಠದ ಜೀರ್ಣೋದ್ಧಾರಮಾಡಿದರು ೭೯

ಕಾಡುಮಠ ಬಹುಬೇಗ ಜನರೊಳು
ಬೇಡಿದಿಷ್ಟಾರ್ಥವನು ಕೊಡುವೀ
ನಾಡಪುಣ್ಯಕ್ಷೇತ್ರವೆಂಬತಿಶಯದ ಭಾವನೆಯು
ಮೂಡಿಸಿರಲದ ವೃದ್ಧಿಗೊಳಿಸಲು
ನಾಡೆ ವರ್ಷಂಪ್ರತಿಯು ಜಾತ್ರೆಯು
ಮಾಡಿಯುವರೊಳು ಭಕ್ತಿಭಾವನೆ ಬೆಳೆಸಿದರು ಬೇಗ ೮೦

ವೀರಶೈವದ ಧರ್ಮಸಾರವ
ನೇರಚರ್ಚಿಸಿ ಚಿಂತಿಸಲು ಮೈ
ಸೂರುಜಿಲ್ಲೆಯ ವೀರಶೈವಮಠಾಧಿಪತಿಗಳನು
ಸೇರಿಸೊಟ್ಟಿಗೆ ಗೋಷ್ಠಿಗೈಯಿಸಿ
ಪಾರಮಾರ್ಥವ ಹಳ್ಳಿಹಳ್ಳಿಗೆ
ಸಾರಲಿಕ್ಕೇರ್ಪಡಿಸುತಿರ್ದರು ಧರ್ಮಸಭೆಗಳನು ೮೧

ವಿಷಯರಹಿತರ ಮಾಡಿ ಜನರನು
ಹಸನುಮಾರ್ಗದಿ ಕೊಂಡುಹೋಗುವ
ಮಸುಳಿಸದ ನೀತಿನಿಯಮವ ಮೇಣ್ತತ್ತ್ವದರ್ಶನವ
ಎಸೆವ ಶರಣರ ಸ್ವಾನುಭಾವವ
ನೊಸೆದು ಪೇಳುವ ಗ್ರಂಥಗಳ ಪ್ರಕ
ಟಿಸೆ ಮಹತ್ತರ ಗ್ರಂಥಮಾಲೆಯ ಸ್ಥಾಪಿಸಿದರವರು ೮೨

ಧರೆಯೊಳತಿಶಯವೆನಿಸಿ ಮೆರೆಯುವ
ಶರಣಸಾಹಿತ್ಯವನು ನಾನಾ
ತೆರದಿ ಬೆಳೆಯಿಸಿ ವಿಶ್ವದಾದ್ಯಂತವ ಪ್ರಚಾರಿಸಲು
ಗುರುತರಜಬಾಬ್ದಾರಿ ಹೊಂದಿದ
ಪರತರೋಜ್ವಲ ಅಖಿಲಭಾರತ
ಶರಣಸಾಹಿತ್ಯಪರಿಷತ್ಸಂಸ್ಥೆಯನು ಕಟ್ಟಿದರು ೮೩

ಇಂತು ಸಂಸ್ಥೆಗಳಿಷ್ಟನುಂ ತ
ಮ್ಮಂತರಂಗದ ದೈವವೆನ್ನಿಸಿ
ದಂಥ ಶಿವರಾತ್ರೀಶರೊಲವಿನ ಸುಪ್ರಸಾದವನು
ಅಂತ ಮೇಲೆಯೆ ಮಾತ್ರ ಕಟ್ಟಿಸು
ತಂತರಂಗದಿ ನೆಪವು ತಾವೆನು
ವಂಥ ಗುರುವಿನ ಗುಣವನೆಂತಾರ್ತಾನೆ ಬಣ್ಣಿಪರು ೮೪

ನೂರು ಸಂಸ್ಥೆಯು ಕಟ್ಟಿ ಪುಂದವ
ನೇರವಾಗಿಡೆ ದೇಶಿಕೇಂದ್ರರ
ನಾರಿಸವರಿಗೆ ಸಕಲವಿದ್ಯೆಯ ನೀಡೆ ನಿಶ್ಚಯಿಸಿ
ಸಾರತರಸುಜ್ಞಾನ ಪಡೆಯಲು
ದೂರವಿದ್ದೊಡೆ ಸೂಕ್ತವೆನ್ನುತ
ಧಾರವಾಡದಿ ಹೆಚ್ಚಿನೋದನು ಕಲಿಯೆ ಬಿಟ್ಟರಲಾ ೮೫

ಕಲಿತು ಕಾಲೇಜಿನೊಳು ಪರಿಣತೆ
ವಳೆದು ಮೈಸೂರ್ನಗರಕೈತಂ
ದಿಳೆಯ ಯೋಗಕ್ಷೇಮಕಾಗಿಯೆ ಬಾಳ ನಿರ್ಧರಿಸಿ
ಬಳಿಗೆ ಬಂದಾ ದೇಶಿಕೇಂದ್ರರ
ನೊಲಿಸಿ ವಿದ್ಯಾಪೀಠದತಿಹೊಣೆ
ತಳೆಯೆ ಕಾರ್ಯಾಧ್ಯಕ್ಷರಂ ಗೈದುರೆಪಳಗಿಸಿದರು ೮೬

ಎಂದಿಗುಂ ಜೊತೆಬಿಡದೆ ತನುವೆರ
ಡೊಂದೆಮನವೆಂಬಂತೆ ಕಿರಿಪಯ
ದಿಂದಲುಮುಪರೊಡನೆ ಸಹಕರಿಸುತೆಲ್ಲರೀತಿಯೊಳು
ಕುಂದುನಿಂದನೆ ಬಂದೊಡಂ ಸಹ
ನೊಂದುಕೊಳ್ಳದೆ ದುಡಿದು ಸುಸ್ಥಿಯು
ನಂದಗೊಳಿಸಿವ ಕ್ಯಾತ್ನಹಳ್ಳಿಯ ಸ್ವಾಮಿಗಳು ಹಿತರು ೮೭

ಅಸಮಮೂಡಳ್ಳಿಯ ಜಡೆಮಹಾಂ
ತಶರಣರು ನರಿಗೇತ್ನಹಳ್ಳಿಯ
ಜಸದ ಪಡಗೂರ್ಶಿವಕುಮಾರಸ್ವಾಮಿಗಳ್ದ್ವಯರು
ಎಸೆವ ವಾಟಾಳ್ಬೊಮ್ಮನಳ್ಳಿಯ
ಬಸವಲಿಂಗರು ಶಾಂತಮಲ್ಲರು
ಯಶಭರಿತ ಕುಂದೂರುಮಠಪರು ಗುರುಗಳಾಪ್ತರಲಾ ೮೮

ಲಿಂಗದೊಳ್ಮನ ನಿಲಿಸಿ ಮೌನದಿ
ಕಂಗಳನ್ನರೆಮುಚ್ಚುತಿಪ್ಪದಿ
ಚೆಂಗಳೆಯನೀಕ್ಷಿಸುತ ಪರಶಿವಯೋಗವಂ ಗೈದ
ತುಂಗಮಹಿಮರ ಕರದ ನಿಜಶಿವ
ಲಿಂಗಪೂಜಾನಿಷ್ಠೆಯನು ಶೇ
ಷಂಗು ಬಣ್ಣಿಸಲರಿದೆನಲ್ಕದನೆಂತು ಬಣ್ಣಿಸುವೆಂ ೮೯

ಶ್ರೀ ಗುರುವೆ ಸುರತರುವೆ ಭಕ್ತರ
ಭೋಗಭಾಗ್ಯವೆ ವಿರತಿಮೇರುವೆ
ತ್ಯಾಗ ಗೌರೀಶಂಕರವೆ ಭವಶರಧಿತಾರಣವೆ
ಯೋಗಿಜನಮಾರಕತವೆ ಕರುಣಾ
ಸಾಗರವೆ ಸುಗುಣಮಣಿಹಾರವೆ
ಬಾಗಿ ಮಣಿಯುವೆ ಪ್ರಭುವೆ ಶ್ರೀ ಸುತ್ತೂರ್ಮಠಕಲಶವೆ ೬೦

ಭುವಿಯ ಭಕ್ತರ ಮರ್ತ್ಯಸುರತರು
ಜವದಿ ಪೃತ್ತಮ ಕಳೆವ ಭೂರವಿ
ಜವನಿಗಂಜಿದ ಜನಕೆ ಭೂಮೃಡ ಭವಜಲಧಿಮೈತ್ರ
ತವಕಿಸುವ ಬಡವರಿಗೆ ತವನಿಧಿ
ಬವಣೆಗೊಳಗಾದರಿಗೆ ಸು೯ಥೇ
ಸುವೆನಿಸಿಹ ರಾಜಗುರುತಿಲಕಂ ಬಣ್ಣನೆಗೆ ನಿಲುಕಂ ೬೧

ಸರಸಸುಂದರವದನಮಂಡಲ
ಸರಳಸೌಜನ್ಯತೆಯ ಮೃದುಗಲ
ಪರಮಸಾತ್ವಿಕಪೂರ್ಣದೃಷ್ಟಿಯನಾಂತು ಶೋಭಿಸುವ
ಗುರುವಿನೌದಾರ್ಯಗುಣಮಾಂತನಿ
ಬರಿಗೆ ಸಂತತ ಲೇಸಬಯಸಿದ
ಕರುಣೆ ತುಂಬಿದ ಮನವ ಬಣ್ಣಿಸಲೆಂತು ತಾಂ ಸಾಧ್ಯ ೬೨

ಪರಮಪೂಜಿತ ಗೌರಿಶಂಕರ
ಗುರುವಿಶಿಷ್ಟರು ಮರಣಶಯ್ಯೆಯೊ
ಳಿರಲು ವೈದ್ಯರ ಬಳಿಗೆ ಸಾರುತ ತಮ್ಮ ದೇಹದೊಳು
ಸರಿಯೆನಿಸಿದಂಥಂಗ ಬೇಕಾ
ದರಿರಿದವರೊಡಲಿಂಗೆ ಜೋಡಿಸಿ
ಭರದಿ ಬದುಕಿಸಿರೆಂದ ಗುರುಗಳ ತ್ಯಾಗಕೆಣೆಯುಂಟೆ ೬೩

ಗುರುವಿರಕ್ತರು ಪರಮಾತೀಯರ
ಗುರುಮಹಂತರುಯೆಂಬ ಭೇದವ
ಮುರಿದು ಮಠಕೈತರಲವರ ಬಹುಗೌರವಿಸುತಿರ್ದ
ಗುರುವರರ ಸಮಭಾವಬುದ್ಧಿಯ
ಬೆರಗುಗೊಳಿಸುವ ಸರ್ವಸಮತೆಯ
ವಿರತಿಸಂಪದದಳವ ಕವಿತಾನೆಂತು ಬಣ್ಣಿಸುವ ೬೪

ಭಸಿತರಾಜಿಪ ನೊಸಲು ಕಾವಿಯ
ವಸನ ಧರಿಸಿದವೊಡಲು ರುದ್ರಾ
ಕ್ಷಸರವಾಂತಿಹ ಕೊರಳು ವರಪಂಚಾಕ್ಷರಿಯ ಜಪಿಪ
ಹಸಿತವದನವನಾಂತು ಮಂಡಿಸಿ
ಕುಶಲಕೇಳುತ ನಗುವಿನಿಂದಲೆ
ಬಸವಳಿದು ನಿಂದವರ ಬಾಧೆಯ ನೀಗುತಿರ್ದರಲಾ ೯೫

ಹಳ್ಳಿಯೊಳು ತಮ್ಮೊಳಗೆ ಬೇಯುತ
ಪೊಳ್ಳುಕಾರಣಕಾಗಿ ಕಾದಾ
ಡೆಲ್ಲ ರೀತಿಯ ಕಷ್ಟಕಾರ್ಪಣ್ಯಂಗಳಲಿ ಬಳಲಿ
ಖುಲ್ಲತನದಲಿ ಬಾಳದೂಡುವ
ರೆಲ್ಲರನು ಶ್ರೀಮತಕೆ ಕರೆಯಿಸು
ತೆಲ್ಲ ಕಗ್ಗವ ಬಗೆಹರಿಸಿ ಸುಖಿಸುತ್ತಲಿರ್ದರಲಾ ೯೬

ಗುರುವಿರಕ್ತರ ಜರಿದು ಹೇಸಿದ
ಕರುಣೆದಯೆನಯವಿನಯವೆಂಬುದ
ಮರವೆಯೊಳು ಸಹ ತೋರೆ ತಿಳಿಯದ ಹಲವುಪಾಪಿಗಳ
ನರರ ರೂಪದೊಳಿರ್ದ ದನುಜರ
ದುರುಳದುಷ್ಟರುಶತರನುಂ ಸಹ
ದರುಶನದ ಮಾತ್ರದೊಳೆ ಮಾರ್ಪಡಿಸಿದುದನೇನೆಂಬೆ ೯೭

ನಿಂದೆವಂದನೆಯೊಂದೆಯೊಂದೇ
ತಂದು ಮನದೊಳು ಹಿಗ್ಗಿ ಕುಗ್ಗದೆ
ಕುಂದಿಕೊರಗದವೆಲ್ಲವುಂ ಶಿವನಿತ್ತ ಶೇಷವೆನೆ
ಚೆಂದದಿಂ ನಸುನಗೆಯ ಬೀರುತ
ಬಂಧುಗಳನೋಲೈಪ ತೆರದೊಳು
ನಿಂದೆಗೈದವರನ್ನು ಸಹ ವಂದಿಸಿದ ವಂದಿತರು ೯೮

ಯಾರೆ ತಮ್ಮೊಡನಿರ್ದರುಂ ಬೇ
ರಾರೆ ಬಂದತಿಮುಖ್ಯವಿಷಯವ
ಸಾರಿ ಹೇಳುತಲಿರ್ದರುಂ ಮೋಣಸುವಳಿಯುತಿರಲುಂ
ಕಾರು ದಾರಿಯೊಳೊಮ್ಮೆ ಹೊಡೆದತಿ
ಜೋರುಗೊಂಡಿರೆ ಪ್ರಜ್ಞೆಯಳಿದಸು
ಹಾರುತಿರ್ದರು ಮಂತ್ರಜಪಿಸಿದ ಮಂತ್ರಯೋಗಿಯಲಾ ೯೯

ಇಂತು ನಾನಾರೀತಿಯೊಳು ತ
ಮ್ಮಂತರಂಗವು ಮೆಚ್ಚುವಂದದಿ
ಸಂತಸದಿ ಲೋಕಹಿತರಾಗಿಯೆ ಬಾಳ್ದು ಮೆರೆದವರು
ಕಂತುಹರರಿವರೆಂದೆ ಜಗದಾ
ದ್ಯಂತ ಜನ ಭಾವಿಸಿರಲಮೆರಿಕ
ದಂಥ ದೇಶದ ಜನರುವುದಕಾಹ್ವಾನ ನೀಡಿದರು ೧೨೦

ಅತಿಶಯದಮೇರಿಕೆಯ ಪರಮುಬ
ಕುತರ ಬಿನ್ನಪಕೊಪ್ಪಿ ತಮ್ಮಯ
ಹಿತಸಖರ ಮೇಣುತ್ತರಧಿಕಾರಿಗಳ ಜೊತೆಗೂಡಿ
ನುತಿವಡೆದಮರಭಾರತದ ಸಾಂ
ಸ್ಕೃತಿಯು ಮೇಣಾಧ್ಯಾತ್ಮಿಕತೆಯಂ
ಪ್ರತಿನಿಧಿಸಿದರೊಯೆಂಬ ತೆರದೊಳು ತೆರಳಿ ಮರಳಿದರು ೧೨೧

ತೆರಳುತಲ್ಲಿಗೆ ನಮ್ಮ ಸಂಸ್ಕೃತಿ
ಕುರಿತು ಬೋಧಿಸಿ ಶರಣಮಾರ್ಗವ
ನೊರೆದು ಮನಕದು ನಾಟುವಂದದಿ ತಿಳಿಸಿ ಮನವೊಲಿಸಿ
ಪರರ ಧರ್ಮಕೆ ಮಾರುಹೋಗುತ
ಮರೆಯ ಬೇಡಿರಿ ನಮ್ಮ ಧರ್ಮವ
ಧರೆಯೊಳಿದ ನೀವೆತ್ತಿ ಹಿಡಿಯಿರೆನುತ್ತ ಪೇಳಿದರು ೧೨೨

ಉರುತರದ ವಿಜ್ಞಾನವಿದ್ಯೆಯ
ನುರೆಗಲಿಯೆ ಮೇಣುದ್ದಿಮೆಗಳ
ನ್ನರಸಿ ಲಂಡನ್ನಲ್ಲಿ ನೆಲೆಸಿಹ ಭಾರತೀಯರಿಗೆ
ಮೆರೆವ ಭಾರತದುಜ್ವಲಪರಂ
ಪರೆಯ ಮೇಣ್ಸಂಸ್ಕೃತಿಯುಳಿಸಿ ಬೆಳೆ
ಸಿರೆನೆ ಕಿವಿಮಾತನುಸುರಿದರವತಲ್ಲಿಗುಂ ತೆರಳಿ ೧೨೩

ಪರಮಗುರುಶಿವರಾತ್ರಿರಾಜೇಂ
ದ್ರರು ವಿದೇಶಕೆ ತೆರಳಿ ನಗರಕೆ
ಮರಳಿ ಬರುತಿಹರೆಂದು ತಿಳಿದ ಮಹಾಜನಸ್ತೋಮ
ಮೆರೆವ ನಂದಿಧ್ವಜದ ಹಿಂಗಡೆ
ಎರಡುಮೈಲಿಗಳುದ್ದ ಕುಂ ಪರಿ
ಪರಿಯ ಜಯಘೋಷವೆಸಗುತೆ ಸ್ವಾಗತವ ಬಯಸಿತಲಾ ೧೨೪

ಕಟ್ಟಲೇಂ ಪಲವಾರುಸಂಘವ
ಕೊಟ್ಟರೇಂ ನೂರಾರು ಸಂಸ್ಥೆಯ
ನೆಟ್ಟಿನವುಗಳನುಳಿಸಿ ಬೆಳೆಸುವ ಶಕ್ತಿಹೊಂದಿರುವ
ನಿಷ್ಠರುಂ ಕೊಟ್ಟಾಗ ಮಾತ್ರವೆ
ಇಷ್ಟಪೂರೈಸುವರುಯೆನ್ನುತ
ಶ್ರೇಷ್ಠ ಮಠಪತಿ ದೇಶಿಕೇಂದ್ರರನಿತ್ತರೈ ಕೊನೆಗೆ ೧೦೫

ಶೂಲೆಗಳುಕದೆ ನರಳಿ ಬಳಲದೆ
ಕಾಲಗಂಜದೆ ನಗುತ ಮೌನದಿ
ಶಾಲಿವಾಹನ ಸಿದ್ಧಿಶೂನ್ಯರಸೇಂದುವಕ್ಷೆಯುಪ
ಮೇಲೆನಿಪ ಮಾರ್ಗಶಿರಶುಕ್ಲಸು
ಶೀಲಪಂಚಮಿ ಬುಧವಾರದೊ
ಆಲಿಮುಚ್ಚುತಲಿಷ್ಟಲಿಂಗದೊಳೈಕ್ಯರಾದರಲಾ ೧೦೬

ಗುರುವರರ ವಿದ್ಯಾನ್ನದಾನವ
ಧರೆಯು ಕ್ಷೇಮಕೆ ಬಾಳ್ದ ರೀತಿಯ
ವರತರೋಜ್ವಲಶಾಸ್ತ್ರಪರಿಣತೆ ಕಾರ್ಯದಕ್ಷತೆಯು
ವರಗುಣವ ಗೌರವಿಸಿ ಮರಣೋ
ತ್ತರದ "ಡಾಕ್ಟ್ರೇಟ್" ಪದವಿಯರ್ಪಿಸಿ
ಮೆರೆವ ಮೈಸೂರ್ವಿಶ್ವವಿದ್ಯಾಲಯವು ಶೋಭಿಸಿತು ೧೦೭

ಘನತೆವಡೆದೀ ಪುಣ್ಯಚರಿತೆಯ
ನನುನಯದೊಳಾರು ಪಠಿಪರೊ
ವಿನಯಭಕ್ತಿಯೊಳಾರು ಕೇಳ್ವರೊ ಅಂಥವರ್ಗೊಲಿದು
ಧನಕನಕದೀರ್ಘಾಯುರಾರೋ
ಗ್ಯನಿಖಿಲೈಸಿರಿಸಂಪದವ ಮೋ
ಘನತರದ ಮೋಕ್ಷವ ಕಥಾನಾಯಕನನುಗ್ರಹಿಪಂ ೧೦೮

! ಸಂಪೂರ್ಣಂ !

ಸಿ. ಬಸವಣ್ಣ
12-6-91



ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರ ಶಿವಯೋಗ ಸಮಾಧಿ